# ಪರಿವಿಡಿ

# ಆವಾಹನ

**ಆಗಸ್ಟ್ ೧೫, ೧೯೪೭**

ಓ ಮಾತೆ, ಭಾರತಾತ್ಮಳೆ, ನಿರಾಶೆಯ ಕಾರ್ಗತ್ತಲೆ ನಿನ್ನ ಮಕ್ಕಳಿಗೆ ಕವಿದ ದಿನಗಳಲ್ಲಿಯೂ, ನಿನ್ನ ಧ್ವನಿ ಕೇಳಿಯೂ ಬೇರೆ ದಾರಿ ಅವರು ಹಿಡಿದಾಗಲೂ, ಬೇರೆ ಪ್ರಭುಗಳ ಪರಿಚರ್ಯೆ ಕೈಕೊಂಡು ನಿನ್ನನ್ನು ನಿರಾಕರಿಸಿದಾಗಲೂ, ಅವರನ್ನು ತೊರೆಯದ ತಾಯಿ ನೀನು. ಈಗ ಅವರು ಎದ್ದಿರುವರು, ನಿನ್ನ ವಿಮೋಚನೆಯ ಈ ಮುಂಬೆಳಗಿನಲ್ಲಿ ನಿನ್ನ ಮುಖವು ಪ್ರಕಾಶಯುತವಾಗಿದೆ,— ಈ ಮಹಾಮುಹೂರ್ತದಲ್ಲಿ ನಿನ್ನನ್ನು ವಂದಿಸುವೆವು. ನಮ್ಮ ಮುಂದೆ ತೆರೆಯುತ್ತಿರುವ ಸ್ವಾತಂತ್ರ್ಯದ ದಿಙ್ಮಂಡಲವು ನಿಜವಾದ ಘನತೆಯ ದಿಙ್ಮಂಡಲವಾಗಿ, ರಾಷ್ಟ್ರಗಳ ಸಮೂಹದಲ್ಲಿ ನಿನ್ನ ನೈಜಜೀವನದ ದಿಙ್ಮಂಡಲವಾಗಿ ಮೆರೆಯಲಿ. ಹಿರಿಯ ಆದರ್ಶಗಳ ಪಕ್ಷವನ್ನೇ ನಾವು ಯಾವಾಗಲೂ ಕಟ್ಟುವಂತೆ ನಮಗೆ ದಾರಿದೋರು; ಆತ್ಮಪಥದಲ್ಲಿ ಅಗ್ರಣಿಯೆಂದು— ಎಲ್ಲ ಜನಾಂಗಗಳ ಸುಹೃದ-ಸಹಾಯಕರ್ತಳೆಂದು ಅಭಯಸೂಚಕವಾದ ನಿನ್ನ ನೈಜ ಮುಖಮುದ್ರೆಯನ್ನು ಜಗತ್ತಿಗೆ ತೋರು.

— ಶ್ರೀ ಮಾತೆಯವರು



# ಪ್ರಾರ್ಥನೆಗಳು

## ೧

ಯಾವ ದಿವ್ಯ ಚೇತನ
ಪಡೆಯುತಿಂಥ ಕೇತನ
ಭೂಮಿಗಿಳಿದು ಬಂದಿತು?
ನವಯುಗವನು ತಂದಿತು?

ಬಾಳು ನವ್ಯವಾಯಿತು.
ಕಾಲ ಭವ್ಯವಾಯಿತು.
ಮೊಳೆತು ದಿವ್ಯ ದೃಷ್ಟಿಗೆ,—
ಮಧುಮಾಸವು ಸೃಷ್ಟಿಗೆ!

ನೀನು ರಚಿಸಿದೀ ಸಮಾಜ
ಬೀರುತಿಹುದು ನವ್ಯ ತೇಜ.
ಊರ್ಧ್ವದೃಷ್ಟಿ ಯಾವುದು
ಇಳೆಗೆ ಬಂದು ಕಾವುದು?

ಓ ತಾಯಿಯೆ! ನೀಡು
ಆ ದೃಷ್ಟಿಯ ಮಾಡು
ವ್ಯಕ್ತಿಯಲ್ಲಿ ಮೊಳೆಯಲಿ
ಅಂತೆ ಲೋಕ ಬೆಳೆಯಲಿ.

೨

ನೀನು ಸಲುಹಿದೆ ನನ್ನ, ನನ್ನ ತಲೆಮಾರು.
ಹೆತ್ತವರು ನೋಡದಲೆ ನೋಡುವವರಾರು?

ಅಂಬೆಗಾಲಿಕ್ಕಿ ಬರೆ, ಮುದ್ದಾಡಿ ನಲಿದೆ.
ಮುದುಡಿಕೊಳುತಿರೆ ನಾನು, ನೀನಾಗಿ ಒಲಿದೆ.

ಬಿತ್ತುತೆದೆಯೊಳು ದಿವ್ಯ ಜೀವನದ ಬೀಜ,
ಇತ್ತು ಬುದ್ಧಿಗೆ ಪರಾಬುದ್ಧಿಗಿಹ ತೇಜ;

ವರದ ಹಸ್ತವನಿಟ್ಟು, ಇತ್ತಮೃತ ವರವ,
ಮೀಟಿ ಗೊಗ್ಗರುದನಿಯೊಳಂದ ಸ್ವರವ;

ಭಣಭಣಿಸುವೆದೆಯೊಳಗೆ ಚೆಲುವಾಗಿ ಮೂಡಿ,
ಓಂಕಾರವಲ್ಲಿ ನಿನದಿಸುವಂತೆ ಮಾಡಿ;

ಎಣೆಯಿರದ, ಕೊನೆಯಿರದ ಪಥವ ತೋರಿ,
ಹೆಜ್ಜೆಹೆಜ್ಜೆಗೆ ಹಿಗ್ಗಿನಂತೆ ಬಳಿಸಾರಿ;

ನೀನು ಸಲುಹಿದೆ ನನ್ನ, ನನ್ನ ತಲೆಮಾರು:
ಹೆತ್ತವರು ನೋಡದಲೆ ನೋಡುವವರಾರು?

೩

ಪ್ರೀತಿ ಮೈವೆತ್ತಿರಲು, — ಈ ತಾಯಿ ಪ್ರೀತಿ.
ಮೈದಾಳುವದೆ ನೀತಿ? ಈ ತಾಯಿ ನೀತಿ.

ಅವತರಿಸುವದೆ ಚೆಲುವು? ಈ ತಾಯಿ ಚೆಲುವು.
ಋತವು ಮೈದೋರುವದೆ? ಅದೆ ಇವಳ ನಿಲವು.

ದೇಹಿಯಹುದೇ ಶಕ್ತಿ? ಇವಳಾದಿಶಕ್ತಿ.
ವ್ಯಕ್ತಿಯೇ ಆನಂದ? ಇವಳೆ ಆ ವ್ಯಕ್ತಿ.

ಹಿಮಗಿರಿಗು ಅರಿದರಿದು ತಾಯಿಗಿಹ ತಾಳ್ಮೆ.
ದಿವ್ಯ, ನವ್ಯ, ಭವ್ಯ ಅವಳ ಬಾಳ್ಮೆ.

ಪಂಚಾರತಿಯನೆತ್ತು ಮಾತಾಯಿಗೆಂದು
ಮೀಸಲಿಡು ಪಂಚಪ್ರಾಣವ ಅವಳಿಗಿಂದು.

ನಿನ್ನ ಪಾಲಿಗೆ ಬರಲಿ ಪಂಚಾಮೃತ.
ಅಂದು ತೆರೆವುದು ಪುಣ್ಯ, ಪೂರ್ವ ಸುಕೃತ.

೪

ನಿಮ್ಮ ಸನ್ನಿಧಿಯಹುದು ನನಗೆ ಗಂಗಾಸ್ನಾನ.
ನಿಮ್ಮ ನೆನಹೇ ನನಗೆ ಹಿಮಗಿರಿಯ ತಪವು.
ನಿಮ್ಮ ದರ್ಶನ ನನಗೆ ಅಮರ-ಸುಂದರ ಗಾನ
ನಿಮ್ಮ ನಾಮಸ್ಮರಣ ದಿವ್ಯ ಜಪವು.

ಎನಿತು ಅಮರಾಪಗೆಯರುದ್ಭವಿಸಿದರೊ ನಿಮ್ಮ
ಅಂಗುಷ್ಠ ಚಿಮ್ಮಿರುವ ತಾಣದಿಂದ!
ಎನಿತು ಅಹಿರಾವಣರ ಸಂಹಾರವಾಯಿತೋ
ಒಂದು ಸಲ ನೀವ್ ಬಿಟ್ಟ ಬಾಣದಿಂದ!

ಜೀವ ತಳಮಳಿಸಿತ್ತು, ಮನವು ಮಳಮಳಿಸಿತ್ತು,
ಹೃದಯ ಹಳಹಳಿಸಿತ್ತು ನೊಂದು ಬೆಂದು.
ರಣರಣಿಸುವೆದೆಯಲ್ಲಿ ಗಣಗಣನೆ ದೇಗುಲದ
ಗಂಟೆ ಬಾರಿಸೆ ಬಾಳಿಗಾಯ್ತು ದುಂದು.

ನೀವ್ ಆಡುವದು ಚಂದ, ನೀವ್ ನೋಡುವದು ಚಂದ.
ನೀವ್ ಮಾಡುವದು ಚಂದ, ತೀರ ಹೊಸ ಚಂದ!
ಇನಿತೆಲ್ಲ ಚಂದಗಳು ಕರುಣಿಸುವ ಆನಂದ
ಲಭಿಸಿದ ಸನತ್ಕುಮಾರನು ನಿಮ್ಮ ಕಂದ!

ನಿಮ್ಮ ಸನ್ನಿಧಿಯಹುದು ನನಗೆ ಗಂಗಾಸ್ನಾನ.
ನಿಮ್ಮ ನೆನಹೇ ನನಗೆ ಹಿಮಗಿರಿಯ ತಪವು.
ನಿಮ್ಮ ದರ್ಶನ ನನಗೆ ಅಮರ-ಸುಂದರ ಗಾನ.
ನಿಮ್ಮ ನಾಮಸ್ಮರಣ ದಿವ್ಯ ಜಪವು.

೫

ಆನಂದ!
ಆತ್ಮದ ಅಣುರೇಣುವಿನಲ್ಲಿ,
ಹೃದ್‌ಬಂಧಗಳಲ್ಲಿ,
ಸೂಕ್ಷ್ಮ ದೇಹದಲ್ಲಿ,
ಮೆಯ್ಯ ಕಣಕಣದಲ್ಲಿ,
ತುಂಬಿ ಸೂಸುವೆ, ಸೂಸಿ ಹೊರಚೆಲ್ಲುವ
ಆನಂದ!
ಅನುಪಮ, ಅನಿರ್ವಚನೀಯ ಆನಂದ!

ಹಿಗ್ಗಿದಷ್ಟೂ ನುಗ್ಗಿ ಬರುವಂಥ ಹಿಗ್ಗು.
ತೆರವಾದ ಕಿರಿಗೊಳವನ್ನು ತುಂಬಿಬಿಡುವ ಮಹಾಪೂರ.
ಮೆಯ್ಯ ನಾಳ-ನಾಳದಲ್ಲಿ ಸಂಚರಿಸುವ ವಿದ್ಯುತ್ತು;
ಎಲುಬಿನ ಹಂದರದ ಮೇಲೆ ಸುಂದರ ವಿದ್ಯುದ್ವಲ್ಲರಿ!
ಏನೆಂದು ಬಣ್ಣಿಸಲಿ,
ಎನಿತೊಂದು ವಿವರಿಸಲಿ
ಈ ಆನಂದವನ್ನು!

ಓ ಇಂದ್ರಪಾರಿಜಾತಾಭಿಜಾತ ಆನಂದವೆ!
ನಿನ್ನ ಉಗಮವೆಲ್ಲಿ?
ಅಗಮ್ಯವಾಗಿ ಮಹಾಮಾತೆಯ ಹೃದ್ಗಂಗೆಯಿಂದಿಳಿದು
ಧೋ ಧೋ ಎಂದು ಉದ್ಧರಿಸಿರುವೆ.
ಮರ್ತ್ಯಪ್ರಜ್ಞೆಯಲ್ಲಿ ಅಮೃತವನ್ನು ಸೂರೆಗೆಯ್ದು
ತಾಯ್ಗರುಳಂತೆ ತಪತಪ ತೋಯಿಸಿರುವೆ.
ಸಂತತವಿರಲಿ ನಿನ್ನ ಸಂಸ್ಫುರಣ.
ಅವಿನಾಶಿಯಾಗಲಿ ನಿನ್ನ ಅವತರಣ.
ಅಖಂಡವಾಗಿ ನೆಲಿಸು ಈ ನನ್ನ ಆಧಾರದಲ್ಲಿ!

೬

ತವರುಮನೆಯ ವಾಸವಾಯ್ತು
ತಾಯಿಯೇ, ನಮೋ ನಮೋ.
ಹೋಗಿ ಬಹೆವು ನಮ್ಮೂರಿಗೆ:
ಹರಸಿ ಕಳುಹಿರೋಂ ನಮೋ!

ದಣಿವಾರಿಸಿ ತಣಿವನಿತ್ತು
ಧಾರೆಯೆರೆದು ಓಂ ನಮೋ!
ಅಮೃತಪ್ರೇಮದಿಂದ ನಮ್ಮ
ಕರುಳನೆಲ್ಲ ಓಂ ನಮೋ!

ತರಳೆಯನ್ನು ತಿದ್ದಿ, ತೀಡಿ,
ಹೊಸಬಾಳಿಗೆ ಓಂ ನಮೋ!
ಅಣಿಗೊಳಿಸಿದಿರಮೃತ ಹಾಸ
ಕಣ್ತುಂಬಿರಲೋಂ ನಮೋ!

## ಪ್ರಾರ್ಥನೆಗಳು

ಸಂಸಾರದ ನಸುಕದೊಂದು
ಎವೆಯೆತ್ತಿದೆ ಓಂ ನಮೋ!
ನಿಮ್ಮ ಹರಕೆಯಿಂದ ಗೆಲಲಿ:
ಇದೆ ಪ್ರಾರ್ಥನೆ ಓಂ ನಮೋ!

ನಿಮ್ಮ ಬೆರಳ ತುದಿಗೆ ನಾನು
ತುಳಿವ ದಾರಿ. ಓಂ ನಮೋ!
ನಿಮ್ಮ ತಿರುಳ ತಿಳಿವುದೊಂದೆ
ಸಿರಿಗುರಿಯಿರಲೋಂ ನಮೋ!
ಓಂ ನಮೋ! ಓಂ ನಮೋ!

—ವಿನಾಯಕ

---

ಆಧ್ಯಾತ್ಮಿಕ ಅನುಭವವೆಂಬುದರ ಅರ್ಥವು ತನ್ನೊಳಗಿನ (ಅಥವಾ ಹೊರಗಿನ, —ಆ ರಾಜ್ಯದಲ್ಲಿ ಎರಡೂ ಒಂದೇ) ದೇವತ್ವದೊಡನೆ ಸಂಪರ್ಕವುಂಟಾಗುವುದೇ ಆಗಿದೆ. ಮತ್ತು ಇದು ಸಾರ್ವತ್ರಿಕವಾಗಿ, ಸಕಲ ದೇಶಗಳಲ್ಲಿ, ಸಕಲ ಜನಾಂಗಗಳಲ್ಲಿ, ಸರ್ವಯುಗಗಳಲ್ಲಿ ಒಂದೇ ರೀತಿಯಾದ ಅನುಭವವಾಗಿರುತ್ತದೆ. ನೀವು ಪರಮಾತ್ಮನನ್ನು ಕಂಡದ್ದಾದರೆ, ಎಲ್ಲೆಲ್ಲಿಯೂ, ಯಾವಾಗಲೂ ಒಂದೇ ರೀತಿಯಾಗಿ ಕಾಣುವಿರಿ. ಆದರೆ ಅನುಭವ, ಹಾಗೂ ಅದಕ್ಕೆ ಕೊಡುವ ರೂಪ ಇವುಗಳ ನಡುವೆ ಒಂದು ದೊಡ್ಡ ಕೊಳ್ಳವಿರುವದರಿಂದಲೇ ಭಿನ್ನತೆಯು ಕಂಡುಬರುವುದಕ್ಕೆ ಕಾರಣವಾಗುತ್ತದೆ. ನೇರವಾಗಿ ನೀವು ಆಧ್ಯಾತ್ಮಿಕ ಅನುಭವವನ್ನು ಪಡೆದುಕೊಳ್ಳಬಹುದು. ಏಕೆಂದರೆ ಯಾವಾಗಲೂ ಅದು ಅಂತಃಪ್ರಜ್ಞೆಯಲ್ಲಿ ಮಾತ್ರ ನಡೆಯುವಂತಹದು. ಆದರೆ ನಿಮ್ಮ ಬಾಹ್ಯಪ್ರಜ್ಞೆಯಲ್ಲಿ ಅದು ಪ್ರತಿಬಿಂಬಿತವಾಗುವಾಗ ಅಲ್ಲಿ ನಿಮ್ಮ ಶಿಕ್ಷಣ, ನಿಮ್ಮ ಧರ್ಮಶ್ರದ್ಧೆ, ನಿಮ್ಮ ಮನೋಭಾವನೆ ಮೊದಲಾದವುಗಳಿಗನುಸಾರವಾಗಿ ಒಂದು ವಿಧದಿಂದಾಗಲಿ, ಇನ್ನೊಂದು ವಿಧದಿಂದಾಗಲಿ ಅದು ವ್ಯಾಖ್ಯಾನಿಸಲ್ಪಡುವದು. ಆದರೆ ಸತ್ಯವು ಕೇವಲ ಒಂದೇ ಇರುತ್ತದೆ; ತತ್ವವು ಒಂದೇ ಇದೆ. ಅದು ಪ್ರಕಟವಾಗುವ ರೂಪಗಳು ಅನೇಕವಾಗಿವೆ.

—ಶ್ರೀ ತಾಯಿಯವರು

# ಈಶೋಪನಿಷತ್ತು (ಭಾಗ ೩)

## ಎರಡನೆಯ ಚಲನ (೧)

## ಬ್ರಹ್ಮ: ದೇವರು-ಜಗತ್ತುಗಳ ಏಕತೆ

(ಪದ್ಯ ೪-೫)*

### ಬ್ರಹ್ಮ—ಐಕ್ಯ

ಈಶ ಮತ್ತು ಜಗತ್ತು ಭಿನ್ನವೆಂದು ತೋರಿದಾಗಲೂ ನಿಜವಾಗಿ ಒಂದರಿಂದೊಂದು ಬೇರೆಯಲ್ಲ; ಅವು ಒಂದೇ ಬ್ರಹ್ಮ ಆಗಿವೆ.

**'ಅಚಲವಾದ ಒಂದು'** (ಅನೇಜತ್ ಏಕಂ)

ದೇವನೊಬ್ಬನೇ ಸ್ಥಿರವಾದ, ನಿತ್ಯವಾದ ಸತ್ಯ. ಅವನೊಬ್ಬನೇ, ಯಾಕಂದರೆ ಬೇರೆ ಯಾವುದೂ ಇಲ್ಲ. ಇರುವುದೆಲ್ಲ ಇರದೆ ಇರುವುದೆಲ್ಲ ಅವನೇ. ಅವನು ಸ್ಥಿರ ಇಲ್ಲವೆ ಅಚಲನಾಗಿದ್ದಾನೆ, ಯಾಕಂದರೆ ಚಲನವೆಂದರೆ ದೇಶ-ಕಾಲಗಳಲ್ಲಿ ವ್ಯತ್ಯಾಸವನ್ನು ಸೂಚಿಸುತ್ತದೆ. ಅವನೋ ದೇಶ-ಕಾಲಕ್ಕೆ ಅತೀತ, ವ್ಯತ್ಯಾಸರಹಿತ. ಈಗಿದ್ದುದು, ಹಿಂದಿನಿಂದ ಇದ್ದುದು, ಮುಂದೆ ಇರಬಲ್ಲುದು—ಇದೆಲ್ಲವನ್ನೂ ನಿತ್ಯವಾಗಿ ಅವನು ತನ್ನಲ್ಲಿ ಪಡೆದಿರುತ್ತಾನೆ. ಆದ್ದರಿಂದ ಅವನು ಹಿಗ್ಗುವುದೂ ಇಲ್ಲ, ಕುಗ್ಗುವುದೂ ಇಲ್ಲ. ಕಾರ್ಯಕಾರಣಸಂಬಂಧ, ಸಾಪೇಕ್ಷತಾಸಂಬಂಧ ಇವನ್ನು ಅವನು ಮೀರಿದ್ದಾನೆ. ಆದ್ದರಿಂದ ಅವನ ಅಂತರಂಗದಲ್ಲಿಯ ಸಂಬಂಧಗಳಲ್ಲಿ ಏನೂ ವ್ಯತ್ಯಾಸವಿಲ್ಲ.

**ಮನಸ್ಸಿಗಿಂತ ವೇಗವುಳ್ಳುದು** (ಮನಸೋ ಜವೀಯೋ)

ಜಗತ್ತೆಂದರೆ ದೇಶ-ಕಾಲಗಳಲ್ಲಿ ದಿವ್ಯ ಚೈತನ್ಯದ ಸಂಸಾರ ಇಲ್ಲವೆ ಸಂಸರಣವಾಗಿರುತ್ತದೆ. ಅದರ ನಿಯಮ, ಒಂದರ್ಥದಲ್ಲಿ ಅದರ ಉದ್ದೇಶ ಪ್ರಗತಿಯೇ ಆಗಿದೆ. ಚಲನದಿಂದ ಜಗತ್ತು ಬದುಕಿದೆ, ಚಲನ ಮುಗಿದೊಡನೆ ಅದು ಮುಗಿಯುತ್ತದೆ. ಆದರೆ ಈ ಚಲನದ ತಳಹದಿ ಭೌತಿಕವಲ್ಲ; ಅದು ಕ್ರಿಯಾಶೀಲವಾದ ಚೈತನ್ಯಶಕ್ತಿಯಾಗಿದೆ. ಈ ಶಕ್ತಿ ತನ್ನ ಗತಿ ಮತ್ತು ಭಿನ್ನ ತತ್ವಗಳಲ್ಲಿಯ ಗುಣಾಕಾರಗಳಿಂದ (ತತ್ವಗಳು

---

* ೪. ಅಚಲವಾದ ಆ ಏಕವಸ್ತು ಮನಸ್ಸಿಗಿಂತ ವೇಗವುಳ್ಳುದು. ಅದನ್ನು ದೇವತೆಗಳು ಮುಟ್ಟುವುದಿಲ್ಲ, ಯಾಕಂದರೆ ಅದು ಯಾವಾಗಲೂ ಮುಂದೆ ಮುಂದೆ ಸಾಗುತ್ತದೆ. ಅದು ತಾನು ನಿಂತುಕೊಂಡು ಇತರರನ್ನು ಮೀರಿ ಹೋಗುತ್ತದೆ. ಅದರಲ್ಲಿ ಜೀವನದ ಪ್ರಭು 'ನೀರುಗಳನ್ನು' ತಂದು ನೆಲೆಗೊಳಿಸುತ್ತಾನೆ.

೫. ಅದು ಚಲಿಸುತ್ತದೆ, ಚಲಿಸುವುದಿಲ್ಲ. ಅದು ದೂರವಾಗಿದೆ, ಅದೇ ಸಮೀಪವಾಗಿದೆ. ಅದು ಇದೆಲ್ಲದರ ಒಳಗಿರುತ್ತದೆ, ಅದೇ ಇದೆಲ್ಲದರ ಹೊರಗಿರುತ್ತದೆ.

ಕಾಣಲಿಕ್ಕೆ ಭಿನ್ನ, ತಥ್ಯಾಂಶದಲ್ಲಿ ಸಮ) ಏಕತೆ ಮತ್ತು ಬಹುತೆ, ಕಾಲ-ದೇಶ-ಭೇದ, ಪರಿಸ್ಥಿತಿ ಮತ್ತು ಕಾರ್ಯಕಾರಣಸಂಬಂಧ ಇವುಗಳ ಸಂಬಂಧಗಳಲ್ಲಿ, ಜೋಡಣೆಗಳಲ್ಲಿ ವಿರೋಧಗಳನ್ನು ಹುಟ್ಟಿಸುತ್ತದೆ. ಪ್ರಜ್ಞೆಯಲ್ಲಿ ಇವೆಲ್ಲ ವಸ್ತುಗಳು ನಿಜವಾದುವು, ಆದರೆ ಸತ್‌ಸ್ವರೂಪ ಪುರುಷನ ಸಂಕೇತವೆಂದು ಮಾತ್ರ ನಿಜ. ಹೇಗೆ ನಿರ್ಮಾಣಶೀಲವಾದ ಮನಸ್ಸಿನ ಕಲ್ಪನೆಗಳು ಅದರದೇ ನಿಜವಾದ ನಿರೂಪಣೆಗಳಾಗಿರುತ್ತವೆ, ಆದರೂ ಅದಕ್ಕೆ ಹೋಲಿಸಿದರೆ ಅಷ್ಟು ನಿಜವಲ್ಲವೆಂದು ತೋರುತ್ತವೆ, ನಿಜವಿದ್ದರೂ ಬೇರೆ ಬಗೆಯ ಸತ್ಯತೆಯಿಂದ ಎಂಬುದನ್ನು ನೆನೆಯಬೇಕು.

ಆದರೆ ಮಾನಸಿಕ ಪ್ರಜ್ಞೆ ವಿಶ್ವವನ್ನು ನಿರ್ಮಾಣ ಮಾಡುವ ಶಕ್ತಿಯಲ್ಲ. ಆ ಶಕ್ತಿ ಮನಸ್ಸಿಗಿಂತ ಹೆಚ್ಚು ಬಲಿಷ್ಠ, ಸವೇಗ ಮತ್ತು ಸ್ವತಂತ್ರವಾದುದು. ಅದು ಪರಮಾತ್ಮನ ಶುದ್ಧವಾದ ಸರ್ವಸಮರ್ಥವಾದ ಆತ್ಮಪ್ರಜ್ಞೆ. ಅದಕ್ಕೆ ಸಾಪೇಕ್ಷವಾದ ಯಾವ ನಿಯಮದ ಬಂಧನವೂ ಇಲ್ಲ. ದೇವತೆಗಳಿಂದ ಎತ್ತಿ ಹಿಡಿಯಲಾದ ಸಾಪೇಕ್ಷತೆಯ ನಿಯಮಗಳು ಅದರ ಕೆಲಕಾಲದ ನಿರ್ಮಿತಿಗಳು. ಅವುಗಳಿಗೆ ತೋರಲಿಕ್ಕೆ ಒಂದು ನಿತ್ಯತೆಯಿದೆ. ಆ ನಿತ್ಯತೆ ಯೆಂದರೆ ಅವು ಆಳುವ ಜಗತ್ತಿನ ಕಾಲಾವಧಿಯಲ್ಲಿ ಮಾತ್ರ. ಈ ಕಾಲಾವಧಿ ನಮಗೆ ಅಳೆಯಲು ಬಾರದು. ಗತಿ, ವಿಕೃತಿ (change) ಇವನ್ನು ಆ ನಿಯಮಗಳು ಕ್ರಮಗೊಳಿಸುತ್ತವೆ; ಗತಿಯ ಪ್ರಭುವಾದ ದೇವನನ್ನು ಅವು ಬಂಧಿಸುವುದಿಲ್ಲ. ಆದ್ದರಿಂದ ದೇವತೆಗಳನ್ನು, ಬಿಟ್ಟುಬಿಡದೆ ತಮ್ಮ ಮಾರ್ಗದಲ್ಲಿ ನಡೆದಿರುವವರೆಂದು ವರ್ಣಿಸುತ್ತಾರೆ. ಆದರೆ ಈಶ್ವರನು ಸ್ವತಂತ್ರನಾಗಿದ್ದು ತನ್ನ ಗತಿಯ ಬಂಧನವು ತನಗಿರದೆ ಇರುತ್ತಾನೆ.

**'ಅದು ಚಲಿಸುತ್ತದೆ, ಅದು ಚಲಿಸುವುದಿಲ್ಲ'** (ತದೇಜತಿ ತನ್ನೈಜತಿ)

ಜಗತ್ತಿನ ಗತಿ ಚಿರಂತನವಾದ ಒಂದು ಸ್ಥಿರತೆಯ ಆಧಿಪತ್ಯದಲ್ಲಿ ನಡೆದಿರುತ್ತದೆ. ಬದಲಾವಣೆ ಎಂಬುದು ಒಂದು ನಿತ್ಯವಾದ ಅವಿಕಾರ್ಯತೆಯಲ್ಲಿ, ಮೇಲ್ಕಾಣಿಸುವ ಸಂಬಂಧಗಳ ಸತತವಾದ ಸ್ಥಲಾಂತರವನ್ನು ತಿಳಿಸುತ್ತದೆ. ಮನಸ್ಸಿಗಿಂತ ವೇಗವುಳ್ಳ ಅಚಲ ವಸ್ತು, ಚಲಿಸುವಂಥದು–ಚಲಿಸದಂಥದು, ಓಡುವಂಥ ಅನ್ಯರನ್ನು ತನ್ನ ಪರಿಣಾಮಕಾರಿಯಾದ ಪ್ರಜ್ಞಾಗತಿಯಿಂದ ಮೀರಿಸುವ ಏಕಮೇವ ಸ್ಥಿರವಸ್ತು—ಈ ವಿಧಾನಗಳಿಂದ ಮೇಲಿನ ಸತ್ಯಗಳನ್ನು ವ್ಯಕ್ತಗೊಳಿಸಲಾಗಿದೆ.

ಸಂಕ್ರಮಣಾತ್ಮಕ ವಿಚಾರ

**ಅನೇಕ** ೧

ಏಕ ಇದು ಎಲ್ಲಕ್ಕಿಂತ ಮೇಲಾದ ಸತ್ಯವಾದರೆ, 'ಉಳಿದುವು' ಅನೇಕ ಎಂಬುದು ಅಸತ್ಯವಲ್ಲ. ಜಗತ್ತು ಮನಸ್ಸಿನ ಕಲ್ಪನೆಯಲ್ಲ.

---

೧ ಈ ತಲೆಕಟ್ಟಿನಲ್ಲಿ ಬರುವ ವಿಚಾರಗಳ ಪಂಕ್ತಿ ಈ ಉಪನಿಷತ್ತಿನ ಅತ್ಯವಶ್ಯವಾದ ತಾತ್ವಿಕ ತಳಹದಿಯಾಗಿದೆ ಯೆಂದು ನನಗೆ ತೋರುತ್ತದೆ. ಕೇವಲ ಅದ್ವೈತವನ್ನು ಈಶೋಪನಿಷತ್ತು ಬೋಧಿಸುವುದಿಲ್ಲ. ಅನೇಕವನ್ನು ಅಲ್ಲಗಳೆಯದೆ ಅದು ಏಕದ ಸತ್ಯತೆಯನ್ನು ಸಾರುತ್ತದೆ. ಅನೇಕದಲ್ಲಿ ಏಕವನ್ನು ನೋಡುವುದೇ ಅದರ ಪದ್ಧತಿಯಾಗಿದೆ, ವಿದ್ಯೆ-ಅವಿದ್ಯೆ ಇವೆರಡೂ ಸಮಸಾಮಯಿಕವಾಗಿ ಇರಬಲ್ಲುವೆಂದೂ ಈ ಜಗತ್ತಿನಲ್ಲಿಯ ಹುಟ್ಟು-ಬದುಕುಗಳಿಗೆ ಸುಸಂಗತವಾದ ಅಮರತೆಯೆ ಕರ್ಮ ಮತ್ತು ಜ್ಞಾನಗಳ ಗುರಿಯೆಂದೂ ಅದು ಸಾಧಿಸುತ್ತದೆ. ಎಲ್ಲ ವಸ್ತುಗಳೂ ತಾನೇ ಎಂದೂ ಪ್ರಪಂಚ ಮತ್ತು ಜೀವಾತ್ಮವು, ದಿವ್ಯಪುರುಷನಾದ ತಾನೇ ಎಂದೂ ಅದು ತಿಳಿಯುತ್ತದೆ. ಈ ವಿಚಾರಗಳ ಸಮಗ್ರ ಸ್ವರೂಪವು ಮಾಯಾವಾದಿ ಯಾದ ಕೇವಲ ಅದ್ವೈತಕ್ಕೆ ವಿರುದ್ಧವಾಗಿದ್ದು ಸಮನ್ವಯಪರವಾದ ಮತ್ತು ಸಂಪೂರ್ಣವಾದ ಅದ್ವೈತದೊಡನೆ ಮಾತ್ರ ಸುಸಂಗತವಾಗಿದೆ.

## ಸಮರ್ಪಣ

ಏಕತೆಯೆ ಈ ಸೃಷ್ಟಿಯ ನಿತ್ಯಸತ್ಯ; ವಿವಿಧತೆ ಏಕತೆಯ ಲೀಲೆ ಮಾತ್ರ. ಅಂತೇ ಏಕತೆಯ ಅರಿವಿಗೆ ವಿದ್ಯೆಯೆನ್ನುತ್ತಾರೆ, ವಿವಿಧತೆಯ ಅರಿವಿಗೆ ಅವಿದ್ಯೆಯೆನ್ನುತ್ತಾರೆ. ತನ್ನ ನಿಜವಾದ ನಿತ್ಯವಾದ ಏಕತೆಯಿಂದ ಬೇರ್ಪಟ್ಟಾಗ ಅಲ್ಲದೆ ವಿವಿಧತೆ ಸುಳ್ಳಾದುದಲ್ಲ. ಬ್ರಹ್ಮ ಒಬ್ಬನೇ ಸಂಖ್ಯೆಯಲ್ಲಿ ಅಲ್ಲ, ಸತ್ವದಲ್ಲಿ. ಸಂಖ್ಯೆಯ ಒಂದುತನ ಬಹುತ್ವಕ್ಕೆ ಎಡೆಕೊಡದೆ ಹೋಗಬಹುದು ಇಲ್ಲವೆ ಅನೇಕವನ್ನು ತನ್ನ ಭಾಗಗಳಾಗಿ ಮಾಡಿಕೊಂಡು ಭಾಗಿಸಲು ಬರುವ ಮತ್ತು ಬಹುತ್ವಯುತವಾದ ಒಂದುತನವಾಗಬಹುದು. ಬ್ರಹ್ಮನ ಒಂದುತನ ಅಂಥದಲ್ಲ. ಬ್ರಹ್ಮನಲ್ಲಿ ಹೆಚ್ಚು ಕುಂದಾಗಲಾರದು, ಅದನ್ನು ಭಾಗಿಸಲೂ ಬಾರದು. ಸಮುದ್ರದ ತೆರೆಗಳು ಅದರ ಭಾಗವಾಗಿರುವಂತೆ ವಿಶ್ವದಲ್ಲಿಯ ಅನೇಕವನ್ನು ಕೆಲವು ಸಲ ವಿಶ್ವವ್ಯಾಪಿ ಬ್ರಹ್ಮನ ಅಂಶಗಳೆಂದು ಕರೆಯುವುದುಂಟು. ಆದರೆ ನಿಜವಾಗಿ ಪ್ರತಿಯೊಂದು ಈ ತೆರೆ ಸಮುದ್ರವೇ ಆಗಿರುತ್ತದೆ. ತೆರೆಗಳ ವೈವಿಧ್ಯವೆಲ್ಲ ಸಮುದ್ರದ ಚಲನದಿಂದ ಉಂಟಾದ ಮುಂಭಾಗದ ಇಲ್ಲವೆ ಮೇಲೆ ಕಾಣುವ ತೋರಿಕೆಯಾಗಿರುತ್ತದೆ. ವಿಶ್ವದಲ್ಲಿಯ ಪ್ರತಿವಸ್ತು ಬೇರೆ ಸಂಮುಖದ ತೋರಿಕೆಯುಳ್ಳ ವಿಶ್ವವೇ ಆಗಿರುವಂತೆ ಪ್ರತಿಯೊಬ್ಬ ಜೀವಾತ್ಮನು ತನ್ನನ್ನೂ ಜಗತ್ತನ್ನೂ ವಿಶ್ವಪ್ರಜ್ಞೆಯ ಒಂದು ಕೇಂದ್ರದಿಂದ ತಿಳಿಯುವ ಬ್ರಹ್ಮನೇ ಆಗಿರುತ್ತಾನೆ. ಯಾಕಂದರೆ ಅದು ಸರಿಸಮಾನವಾಗಿದೆ, ಏಕಾಕಿಯಲ್ಲ. ಕಾಲ-ದೇಶದಲ್ಲಿ ಯಾವಾಗಲೂ ಎಲ್ಲೆಲ್ಲಿಯೂ ಅದು ಸರಿಸಮಾನವಾದುದು, ಕಾಲ-ದೇಶಗಳನ್ನು ಮೀರಿಯೂ ಅದು ಸಮಾನವಾದುದು. ಸಂಖ್ಯೆಯ ಏಕತೆ ಮತ್ತು ಅನೇಕತೆಗಳು ಅದರ ಮೂಲಭೂತ ಐಕ್ಯಕ್ಕೆ ಅಷ್ಟೇ ಪೋಷಕವಾದ ಪದಗಳು. ಇವೆರಡೂ ಪದಗಳು ಉಳಿದೆಲ್ಲ ಪದಗಳಂತೆ ಚಿತ್‌ಶಕ್ತಿಯ ನಿರೂಪಣೆಗಳು. ಸ್ವತಂತ್ರವೂ ಸರ್ವನಿರ್ಮಾಣಶೀಲವೂ ಆದ ಪರಬ್ರಹ್ಮವು ತನ್ನನ್ನೇ ವಿಧವಿಧವಾಗಿ, ಅನಂತವಾಗಿ, ಅಸಂಖ್ಯವಾಗಿ ನೋಡುತ್ತ ನೋಡಿದ್ದನ್ನು ರಚಿಸುತ್ತಲಿರುತ್ತದೆ. ಆ ಎರಡು ಪದಗಳು ಇದರ ನಿರೂಪಣೆಗಳಾಗಿರುತ್ತವೆ. ಚಿತ್ ಇದು ಬರೀ ಜ್ಞಾನಶಕ್ತಿಯಲ್ಲ, ಅಭಿವ್ಯಕ್ತಿಪರವಾದ ಸಂಕಲ್ಪಶಕ್ತಿ. ಬರೀ ಸ್ವೀಕರಣಪರವಾದ ದರ್ಶನಶಕ್ತಿಯಲ್ಲ, ರಚನಾತ್ಮಕವಾದ ನಿರೂಪಣೆಯ ಶಕ್ತಿ. ಎರಡೂ ನಿಜವಾಗಿ ಒಂದೇ ಶಕ್ತಿ. ಚಿತ್ ಇದು ಸತ್ ಇದರ ಕ್ರಿಯೆ, ಶೂನ್ಯದ ಕ್ರಿಯೆಯಲ್ಲ. ತಾನು ನೋಡಿದಂತೆ ತಾನು ಆಗುತ್ತದೆ. ದೇಶ-ಕಾಲದಾಚೆ ಅದು ನೋಡುತ್ತದೆ; ದೇಶ-ಕಾಲ ಪರಿಸ್ಥಿತಿಗಳಲ್ಲಿ ಅದು ಆಗುತ್ತದೆ.

ಶೂನ್ಯದಿಂದ ಏನಾದರೊಂದನ್ನು ಮಾಡುವುದಾಗಲಿ ಒಂದು ವಸ್ತುವಿನಿಂದ ಇನ್ನೊಂದನ್ನು ಮಾಡುವುದಾಗಲಿ ಸೃಷ್ಟಿಯಲ್ಲ. ಸೃಷ್ಟಿಯೆಂದರೆ ಮಾಡುವಿಕೆಯಲ್ಲ; ಸಚೇತನವಾದ ಬದುಕಿನ ರೂಪಗಳಲ್ಲಿ ಆಗುವಿಕೆ. ಈ ಆಗುವಿಕೆಯಲ್ಲಿ ಪ್ರತಿಯೊಂದು ವ್ಯಕ್ತಿ ವಿಧವಿಧವಾದ ರೂಪಹೊಂದಿದ ಬ್ರಹ್ಮನಾಗಿರುತ್ತಾನೆ. ಹೀಗೆ ದಿವ್ಯಪ್ರಜ್ಞೆಯ ಲೀಲೆಯಲ್ಲಿ ತನ್ನೊಡನೆ ಅನೇಕ ಸಂಬಂಧಗಳನ್ನು ಬ್ರಹ್ಮನು ಪಡೆದಿರುತ್ತಾನೆ. ಇರುವಿಕೆಯಲ್ಲಿ ಪ್ರತಿಯೊಬ್ಬನೂ ಇಡಿಯಾಗಿ ಬ್ರಹ್ಮನೇ ಸರಿ.

ಕೇವಲ–ಬ್ರಹ್ಮ ಇಲ್ಲವೆ ವಿಶ್ವಾತ್ಮನು ಸಾಪೇಕ್ಷಸಂಬಂಧಗಳಲ್ಲಿ ತನ್ನಿಂದ ತಾನು ಹಿಂದೆ ಸರಿದು ನಿಲ್ಲುವ ಶಕ್ತಿಯುಳ್ಳವನು. ಪ್ರಜ್ಞೆಯ ಕೆಳತರಗತಿಯ ಚಲನದ ಮೂಲಕ ವಿಶ್ವಾತ್ಮಕ್ಕಿಂತ ಜೀವಾತ್ಮ ಬೇರೆ, ಪರಾತ್ಪರಕ್ಕಿಂತ ಸಾಪೇಕ್ಷವು ಬೇರೆ ಎಂದು ಅವನು ಬಗೆಯುತ್ತಾನೆ. ಈ ಭೇದಪರವಾದ ಚಲನವಿಲ್ಲದೆ ಇದ್ದಲ್ಲಿ ವ್ಯಕ್ತಿ ವಿಶ್ವಾತ್ಮದಲ್ಲಿ ಲಯವಾಗಿ ಹೋಗುತ್ತದೆ, ಸಾಪೇಕ್ಷವು ಕೇವಲದಲ್ಲಿ ಕರಗುತ್ತದೆ. ಹೀಗೆ ಅತೀತವಾದ ಪರಬ್ರಹ್ಮಕ್ಕಿಂತ ತಾನು ಬೇರೆ, ಅನೇಕದಲ್ಲಿ ಇತರರಿಗಿಂತ ತಾನು ಬೇರೆ ಎಂದು ತಿಳಿಯುವ ವ್ಯಕ್ತಿಯಲ್ಲಿ ಉಂಟಾಗುವ ಪ್ರತಿಕ್ರಿಯೆಗೆ ಆ ಪರವಸ್ತು ಆಶ್ರಯವಾಗುತ್ತದೆ. ಏಕತೆಯ ಭಾವವನ್ನು ಹಿಂದೆ ಸರಿಸಿ ಭೇದಪರವಾದ ಅಹಂಭಾವದಲ್ಲಿ ಸತ್ ಇದರ ಲೀಲೆಯನ್ನು ನಡೆಯಿಸುತ್ತದೆ.

ವ್ಯಕ್ತಿ ಏಕವಸ್ತುವಿನಿಂದ ಚಿರಂತನವಾಗಿ ಭಿನ್ನನೆಂದು ಭಾವಿಸಬಹುದು, ಅದರಲ್ಲಿ ಒಂದಾದರೂ ಬೇರೆ ಎಂದು ತಿಳಿಯಬಹುದು, ಇಲ್ಲವೆ ಶುದ್ಧ ಅದ್ವೈತಕ್ಕೆ ಸಂಪೂರ್ಣವಾಗಿ ಹಿಂದಿರುಗಬಹುದು.೨ ಆದರೆ ಯಾವುದೇ ಒಂದು ತರದ ಐಕ್ಯ ಇಲ್ಲವೆ ಏಕತೆಯಿಂದ ತಾನು ಸ್ವತಂತ್ರನೆಂದು ಎಂದಿಗೂ ಅವನು ತಿಳಿಯಲಾರನು. ಹಾಗೆ ತಿಳಿದರೆ ವಿಶ್ವದಲ್ಲಿ ಇಲ್ಲವೆ ಅದರಾಚೆಗೆ ಅರಿಯಬಲ್ಲ ಯಾವ ಸತ್ಯಕ್ಕೂ ಅದು ಸರಿಹೋಗಲಾರದು. ಈ ಮೂರು ಮನೋವೃತ್ತಿಗಳು ಬ್ರಹ್ಮನ ವಿಷಯಕವಾದ ಮೂರು ಸತ್ಯಗಳಾಗಿರುತ್ತವೆ. ಅವು ಒಂದೇ ಹೊತ್ತಿಗೆ ಸಮಂಜಸ ವಾಗಿದ್ದು ಪೂರಕವಾದ ರೀತಿಯಲ್ಲಿ ಉಳಿದುವುಗಳ ನೆರವಿಲ್ಲದೆ ಯಾವೊಂದೂ ಸಮಗ್ರ ಸತ್ಯವಾಗಿಲ್ಲ. ಅವುಗಳ ಸಹ-ಅಸ್ತಿತ್ವವನ್ನು ತಾರ್ಕಿಕಬುದ್ಧಿ ತಿಳಿಯುವುದು ಕಠಿಣ. ಬ್ರಹ್ಮನಲ್ಲಿ ಐಕ್ಯಹೊಂದುವ ಪ್ರಜ್ಞೆಯಿಂದ ಮಾತ್ರ ಅದನ್ನು ತಿಳಿಯುವುದು ಸಾಧ್ಯ.

ಬ್ರಹ್ಮನ ಏಕತೆಯನ್ನು ಸಾಧಿಸುವಾಗ, ಬ್ರಹ್ಮನು ನಮ್ಮ ಮನಸ್ಸಿನ ತಾರತಮ್ಯಗಳಾಚೆ ಇದ್ದವನು, ವಿವೇಚಕವಾದ ವಿಚಾರದ ವಸ್ತುವಲ್ಲ, ಕೇವಲ–ಅನಂತವಾದ ಮತ್ತು ವಿವೇಚನೆಗೆ ನಿಲುಕದ ಸತ್‌ಸ್ವರೂಪನು ಎಂಬುದನ್ನು ನೆನೆಯಬೇಕು. ನಮ್ಮ ಪ್ರಜ್ಞೆ ನಿರೂಪಣಾತ್ಮಕ ಮತ್ತು ಸಾಂಕೇತಿಕವಾಗಿದೆ. ಕೇವಲವಾದ ಪರವಸ್ತುವನ್ನು ಅದು ಇದ್ದಂತೆ ಕಲ್ಪಿಸಲಾರದು. ನಿಷೇಧದ ರೀತಿಯಲ್ಲಿ, ಒಂದು ಬಗೆಯ ಶೂನ್ಯದಲ್ಲಿ ಮಾತ್ರ ಕಲ್ಪಿಸಬಲ್ಲುದು. ಈ ವಿಶ್ವದಲ್ಲಿ ಏನೇನನ್ನು ಆ ವಸ್ತು ಪಡೆದಿರುವುದೆಂದು ತೋರುವುದೋ ಅದನ್ನು ಅದರಿಂದ ಕಳೆದೊಗೆದು ಮಾತ್ರ ಈ ಕಲ್ಪನೆ ಸಾಧ್ಯ. ಆದರೆ ಕೇವಲ ವಸ್ತು ಶೂನ್ಯವಲ್ಲ, ನಿಷೇಧವಲ್ಲ. ಕಾಲದಲ್ಲಿಯೂ ಕಾಲವನ್ನು ಮೀರಿಯೂ ಅದು ಇಲ್ಲಿ ಇರುವುದೆಲ್ಲ ಆಗಿದೆ.

ಏಕತೆಯೆಂಬುದೂ ಒಂದು ನಿರೂಪಣೆಯೆ, ಬಹುತ್ವಕ್ಕೆ ಸಾಪೇಕ್ಷವಾಗಿಯೆ ಅದು ಇರುತ್ತದೆ. ವಿದ್ಯೆ-ಅವಿದ್ಯೆ ಇವೆರಡೂ ಪರಾಚಿತ್ತಿನ ಅಷ್ಟೇ ನಿತ್ಯವಾದ ಶಕ್ತಿಗಳು. ತನ್ನಷ್ಟಕ್ಕೆ ವಿದ್ಯೆಯಾಗಲಿ ಅವಿದ್ಯೆಯಾಗಲಿ ಕೇವಲ ಜ್ಞಾನವಲ್ಲ. (ಪದ್ಯ ೯–೧೧ ನೋಡು). ಆದರೂ ಎಲ್ಲ ಸಂಬಂಧಗಳಲ್ಲಿ ಏಕತೆಯೆ ಒಳಒಳಗಿನ ತಳಹದಿ, ಬಹುತೆ ಯಲ್ಲ. ಏಕತೆ ಬಹುತೆಯನ್ನು ರೂಪಿಸುತ್ತದೆ, ಎತ್ತಿ ಹಿಡಿಯುತ್ತದೆ; ಬಹುತೆ ಏಕತೆಯನ್ನಲ್ಲ. ಆದ್ದರಿಂದ ಏಕತೆಯೆ ನಮ್ಮ ಆತ್ಮವೆಂದೂ ಸತ್ತಿನ ಮೂಲ ಸ್ವಭಾವವೆಂದೂ ಆತ್ಮದ ಒಂದು ಪ್ರತಿಭಾಸ ಮತ್ತು ಸಂಭೂತಿ ಯೆಂದೂ ಭಾವಿಸಬೇಕು. ಬ್ರಹ್ಮನನ್ನು ಎಲ್ಲದರ ಒಂದೇ ಆತ್ಮವೆಂದು ಭಾವಿಸಿ ಅನೇಕವು ಏಕಸತ್ತಿನ ಸಂಭೂತಿ ಯೆಂದು ಆಮೇಲೆ ತಿಳಿಯಬೇಕು (ಭೂತಾನಿ....ಆತ್ಮನ್). ಆದರೆ ಆತ್ಮ ಮತ್ತು ಸಂಭೂತಿಗಳೆರಡೂ ಬ್ರಹ್ಮನೇ. ಒಂದನ್ನು ಬ್ರಹ್ಮನೆಂದು ತಿಳಿದು ಉಳಿದುವನ್ನು ಅಸತ್ಯ, ಬ್ರಹ್ಮವಲ್ಲ ಎಂದು ತಿಳಿಯಲಾಗದು. ಎರಡೂ ಸತ್ಯವಾದುವು. ಒಂದರ ಸತ್ಯ ಮೂಲ ಘಟಕಸ್ವರೂಪದ್ದು, ಸರ್ವಸಂಗ್ರಹವಾದದ್ದು. ಉಳಿದದ್ದರ ಸತ್ಯ ನಿಷ್ಪನ್ನ ಇಲ್ಲವೆ ಪರತಂತ್ರಸ್ವರೂಪದ್ದು.

## ದೇವತೆಗಳ ಓಟ

ವಿಶ್ವದಲ್ಲಿ ತನ್ನನ್ನು ಸ್ಥಿರವೆಂದು ರೂಪಿಸಿಕೊಳ್ಳುವ ಬ್ರಹ್ಮನು ತನ್ನ ವಿಕಾರಹೊಂದದ ಸತ್ತಿನಿಂದ ಪುರುಷ, ದೇವ, ಆತ್ಮನಾಗಿದ್ದಾನೆ. ಚಲನಾತ್ಮಕವಾಗಿ ತನ್ನನ್ನು ರೂಪಿಸಿಕೊಳ್ಳುವ ಅವನು ಕ್ರಿಯಾಶೀಲವಾದ

---

೨ ವಿರುದ್ಧಕ್ರಮದಲ್ಲಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಈ ಮೂರು ವೇದಾಂತದ ಮುಖ್ಯ ಸಿದ್ಧಾಂತಗಳ ನಿಲುವೆಗಳನ್ನು ಇಲ್ಲಿ ಸೂಚಿಸಲಾಗಿದೆ.

ತನ್ನ ಚಿತ್‌ಶಕ್ತಿಯಿಂದ ಪ್ರಕೃತಿ, ಶಕ್ತಿ ಇಲ್ಲವೆ ಮಾಯೆಯಾಗಿದ್ದಾನೆ.[1] ಈ ಎರಡೂ ತತ್ವಗಳ ಲೀಲೆಯೆ ವಿಶ್ವಜೀವನ.

ದೇವತೆಗಳೆಂದರೆ ಏಕಮೇವ ಆದ ದೇವನನ್ನು ಅಭಿವ್ಯಕ್ತಗೊಳಿಸುವ ವಿಶ್ವ ವ್ಯಕ್ತಿ ರೂಪಗಳಲ್ಲಿ ತನ್ನನ್ನು ನಿರೂಪಿಸಿಕೊಂಡ ಬ್ರಹ್ಮನೇ ಸರಿ. ತಮ್ಮ ವ್ಯಕ್ತಿನಿರಪೇಕ್ಷವಾದ ಕಾರ್ಯದಲ್ಲಿ ಅವರು ಪ್ರಕೃತಿಯ ತತ್ವಗಳ ವಿವಿಧ ಕ್ರೀಡೆಯಾಗಿ ತೋರುತ್ತಾರೆ. 'ಉಳಿದವರು' ಮುಂದಿನ ಪದ್ಯದಲ್ಲಿ ಹೇಳಿದ 'ಸರ್ವಭೂತಾನಿ', ಎಲ್ಲ ಸಂಭೂತಿಗಳು, ಅನೇಕದ ಭೇದಪರವಾದ ಪ್ರಜ್ಞೆಯಲ್ಲಿ ತನ್ನನ್ನು ರೂಪಿಸಿಕೊಂಡ ಬ್ರಹ್ಮನೇ.

ದೇವತೆಗಳ ಸಹಿತವಾಗಿ ಈ ವಿಶ್ವದಲ್ಲಿ ಎಲ್ಲವೂ ತನ್ನಿಂದ ಹೊರತಾದ ಇಲ್ಲವೆ ತನ್ನ ಬಗೆಗಿದ್ದ ತತ್‌ಕ್ಷಣದ ಕಲ್ಪನೆಗಿಂತ ಬೇರೆಯಾದ ಒಂದು ಗುರಿಯತ್ತ ಸರ್ವಸಾಮಾನ್ಯಚಲನದೊಡನೆ ಸರಿಯುತ್ತಿರುವಂತೆ ತನ್ನಷ್ಟಕ್ಕೆ ಭಾವಿಸಿಕೊಳ್ಳುತ್ತಿದೆ. ಬ್ರಹ್ಮನೇ ಈ ಗುರಿ; ಯಾಕಂದರೆ ಅದೇ ಮೊದಲು-ಕೊನೆ, ಅದೇ ಎಲ್ಲ ಚಲನದ ಕಾರ್ಯಕಾರಣ. ಆದರೆ ಪ್ರಕೃತಿಯ ಚಲನದಲ್ಲಿ ಕೊನೆಯ ಗುರಿಯ ಕಲ್ಪನೆಯೆಂಬುದೇ ಭ್ರಾಮಕವಾಗಿದೆ. ಯಾಕಂದರೆ ಬ್ರಹ್ಮನು ಕೇವಲ ಮತ್ತು ಅನಂತನಾಗಿದ್ದಾನೆ. ಅವನನ್ನು ಮುಟ್ಟಬೇಕೆಂದು ಹೆಣಗಾಡುವ ದೇವತೆಗಳು, ತಾವು ಮುಟ್ಟಿದ ಪ್ರತಿಯೊಂದು ಗುರಿಯ ಕಡೆಯಲ್ಲಿ ಬ್ರಹ್ಮನು ತಮ್ಮ ಮುಂದೆ ಇನ್ನೂ ಮೇಲಾದ ಸಿದ್ಧಿಗೆ ಚಲಿಸುತ್ತಿರುವನೆಂದು ಕಾಣುತ್ತಾರೆ. ವಿಶ್ವದ ತೋರಿಕೆಗಳಲ್ಲಿ ಯಾವುದೂ ಸಾಪೇಕ್ಷ ಪ್ರಜ್ಞೆಗೆ ಸಂಪೂರ್ಣವಾಗಿ 'ಅದು' ಆಗದು; ಎಲ್ಲವೂ ಅಜ್ಞೇಯವಾದ ಆ ಪರವಸ್ತುವಿನ ಸಾಂಕೇತಿಕ ನಿರೂಪಣೆ ಮಾತ್ರ.

ಬ್ರಹ್ಮನಲ್ಲಿ ಎಲ್ಲ ವಸ್ತುಗಳು ಪ್ರತ್ಯಕ್ಷವಾಗಿರುತ್ತವೆ. ಪ್ರಕೃತಿಯ ಕ್ರಮದಲ್ಲಿ ಇತರರ ಓಟವೆಲ್ಲ ಬ್ರಹ್ಮನಲ್ಲಿ ಮೊದಲಿದ್ದುದನ್ನೇ ದೇಶ-ಕಾಲಗಳಲ್ಲಿ ಕಾರ್ಯಕಾರಣಭಾವದಿಂದ ವ್ಯಕ್ತಗೊಳಿಸುವುದು (ಪ್ರಕೃತಿ) ಮಾತ್ರ ಆಗಿದೆ.

ತನ್ನ ವಿಶ್ವಾತ್ಮದಲ್ಲಿಯೂ ಬ್ರಹ್ಮನು ಚಲನವನ್ನು ಮೀರುತ್ತಾನೆ. ಕಾಲವನ್ನು ಮೀರಿಯೂ, ಏಕಕಾಲಕ್ಕೆ ತನ್ನಲ್ಲಿ ಭೂತ-ವರ್ತಮಾನ-ಭವಿಷ್ಯಗಳನ್ನು ಧರಿಸಿರುತ್ತಾನೆ. ತಿಳಿದಿರಬಹುದಾದ ಕಾಲದ ತುದಿಯ ವರೆಗೆ ಅವನು ಧಾವಿಸಬೇಕಾಗಿಲ್ಲ. ದೇಶವನ್ನು ಮೀರಿಯೂ, ಅವನು ತನ್ನಲ್ಲಿ ಸಮಪಾತವಾಗಿ ಎಲ್ಲ ರಚನೆಗಳನ್ನು ಒಳಗೊಂಡಿರುತ್ತಾನೆ. ತಿಳಿದಿರಬಹುದಾದ ದೇಶದ ತುದಿಯವರೆಗೆ ಅವನು ಓಡಬೇಕಾಗಿಲ್ಲ. ಕಾರ್ಯಕಾರಣ ವನ್ನು ಮೀರಿಯೂ, ಅವನು ಎಲ್ಲ ಸಂಭವನೀಯ ಘಟನೆಗಳನ್ನೂ ಗೂಢ ಶಕ್ತಿಗಳನ್ನೂ ತನ್ನಲ್ಲಿ ಪಡೆದಿರುತ್ತಾನೆ. ಆದರೆ ವಿಶ್ವದಲ್ಲಿ ಯಾವ ಕಾರ್ಯ ಕಾರಣ ಭಾವದಿಂದ ಅವುಗಳ ಜೋಡಣೆಯಿರುತ್ತದೋ ಆ ತೋರಿಕೆಯ ಸರಪಳಿ ಅವನನ್ನು ಕಟ್ಟಿಹಾಕುವುದಿಲ್ಲ. ಈಶ್ವರನಾಗಿ ಅವನಿಂದ ಎಲ್ಲವೂ ಆಗಲೆ ಪಡೆದದ್ದಾಗಿರುತ್ತದೆ—ಭಿನ್ನ ವ್ಯಕ್ತಿರೂಪಗಳಿಂದ ಚಲನದಲ್ಲಿ ಸಾಧಿಸಲ್ಪಡುವುದಕ್ಕಿಂತ ಮುಂಚೆಯೆ.

---

[1] ಪ್ರಕೃತಿ ಅಂದರೆ ಪುರುಷನಿಗೆ ಬೇರೆಯಾದ ಕಾರ್ಯಕಾರಿ ನಿಸರ್ಗಶಕ್ತಿ. ಪುರುಷನೆಂದರೆ ಪ್ರಕೃತಿಯ ಕಾರ್ಯಗಳನ್ನು ಗಮನಕ್ಕೆ ತಂದುಕೊಂಡು ಅನುಭವಿಸುತ್ತಲಿರುವ ನಿಯಾಮಕವಾದ ಆತ್ಮಶಕ್ತಿ. ಶಕ್ತಿ ಇದು ಈಶ್ವರನ ಸ್ವಯಂಸಿದ್ಧ, ಸ್ವಯಂಜ್ಞಾನವುಳ್ಳ, ಸ್ವಯಂಪರಿಣತವಾದ ಶಕ್ತಿ. ಪ್ರಕೃತಿಯ ಚಲನವಲನಗಳಲ್ಲಿ ಈ ಶಕ್ತಿ ಪ್ರಕಟವಾಗುತ್ತದೆ. ಮಾಯೆಯೆಂದರೆ ಸರ್ವಸಂಗ್ರಹವಾದ ಮತ್ತು ನಿರ್ಮಾಣಶೀಲವಾದ ಜ್ಞಾನವೆಂಬ ಅರ್ಥದಲ್ಲಿ ಮೊದಲು ವೇದದಲ್ಲಿ ಬಂದಿದೆ. ಹಳೆಯ ಕಾಲದಿಂದಲೂ ಇದ್ದ ಜಾಣ್ಮೆ, ತಿಳಿವಳಿಕೆ ಎಂದರ್ಥ. ಆ ಮೇಲೆ ಮೋಸ, ಜಾದುಗಾರಿಕೆ, ಭ್ರಮೆ ಎಂಬ ಅರ್ಥ ಮಾಯೆಗೆ ಬಂದಿತು. ಈ ಎರಡನೆಯ ಅರ್ಥದಲ್ಲಿ ಅದು ಕೆಳಗಣ ಪ್ರಕೃತಿಯ ಚಲನವಲನಗಳಿಗೆ ಮಾತ್ರ ಯೋಗ್ಯವಾಗಿ ಅನ್ವಯಿಸುತ್ತದೆ. ದಿವ್ಯಜ್ಞಾನವನ್ನು ಹಿಂದೊತ್ತಿ ಭೇದಪರವಾದ ಅಹಂಕಾರದ ಅನುಭವಗಳಲ್ಲಿ ನಿರತವಾದ ಅಪರಾಪ್ರಕೃತಿ ಎಂಬುದಿದೇ. ಉಪನಿಷತ್ತಿನಲ್ಲಿ ಕ್ವಚಿತ್ತಾಗಿ ಆದರೂ ಪುರಾತನವಾದ ಅರ್ಥದಲ್ಲಿ ಮಾಯೆ ಎಂಬ ಶಬ್ದವನ್ನು ಬಳಸಲಾಗಿದೆ.

## ಪ್ರಾಣತತ್ವ ( ಮಾತರಿಶ್ವ ಮತ್ತು ಅಪಃ )

ಹಾಗಾದರೆ ಚಲನದಲ್ಲಿ ಬ್ರಹ್ಮನ ಉದ್ದೇಶವೇನು ? ಚಲನವೆಂಬುದು ಒಂದು ಲಯ, ಒಂದು ಸಾಮರಸ್ಯ. ಇದನ್ನು 'ಅದು' ವಿಶ್ವಪ್ರಾಣವಾಗಿ ಸಚೇತನ ಸತ್ತೆಂಬುದಾಗಿ ತನ್ನ ಆಕೃತಿಗಳಲ್ಲಿ ಸಾಧಿಸುತ್ತದೆ; ಅಜ್ಞೇಯವನ್ನು ಪ್ರತೀಕವಾಗಿ ಅಭಿವ್ಯಕ್ತಗೊಳಿಸುವ ಸೂತ್ರವದು. ಪ್ರಜ್ಞೆಯ ಪ್ರತಿಯೊಂದು ಪಾತಳಿ ತನ್ನ ಮೀರಿದ ಒಂದು ನೆಲೆಯನ್ನು, ಆಳದಲ್ಲಿಯ ಆಳವನ್ನು, ಸೀಮೆಯೊಳಗಿನ ಸೀಮೆಯನ್ನು ದಿಟವಾಗಿ ನಿರೂಪಿಸು ವಂತೆ ಅದರ ಯೋಜನೆಯಾಗಿರುತ್ತದೆ. ದಿವ್ಯಪ್ರಜ್ಞೆಯ ಲೀಲೆಯಿದು. ತನ್ನ ಸಂತೋಷಕ್ಕಾಗಿ ಮಾತ್ರ ಈ ಲೀಲೆ. ಎಂದಿನಿಂದಲೂ ಪೂರ್ಣವಾಗಿರುವ ಪರವಸ್ತುವಿಗೆ ಅದೇನನ್ನೂ ಹೊಸದಾಗಿ ಸೇರಿಸುವುದಿಲ್ಲ.

ಸಚೇತನಸತ್ತಿನ ಬಗ್ಗೆ ಸತ್ಯಸಂಗತಿ ಇದು. ಅದು ಇರುವುದೇ ಅದರ ಸಮರ್ಥನೆ. ಅದಕ್ಕೆ ತನ್ನಿಂದ ಹೊರತಾದ ಬೇರೆ ಉದ್ದೇಶವಿಲ್ಲ. ತನ್ನ ರೂಪಗಳಲ್ಲಿ ವಾಸಿಸುವ ಜೀವಾತ್ಮರಿಗೆ ತನ್ನ ಮೂಲಸ್ವರೂಪವನ್ನು ಜಗತ್ತು ಕ್ರಮೇಣ ಬಿಚ್ಚಿ ತೋರುತ್ತದೆ. ಇದರಲ್ಲಿಯೆ ಒಂದು ಉದ್ದೇಶ, ಒಂದು ಗುರಿಯ ಕಲ್ಪನೆ ಹುಟ್ಟಿದೆ. ಯಾಕಂದರೆ ಸತ್ತು ಕ್ರಮೇಣ ತನ್ನ ಸಂಭೂತಿ ಇಲ್ಲವೆ ಆಗುವಿಕೆಗಳಲ್ಲಿ ಸ್ವಯಂಪ್ರಕಟವಾಗುತ್ತದೆ, ನಿಜವಾದ ಏಕತೆ ಬಹುತೆಯಿಂದ ನಿಷ್ಪನ್ನವಾಗುತ್ತದೆ, ನಮ್ಮ ಪ್ರಜ್ಞೆಯಲ್ಲಿ ಬಹುತೆಯ ನೆಲೆಬೆಲೆಗಳನ್ನು ಸಂಪೂರ್ಣವಾಗಿ ಬದಲಿಸುತ್ತದೆ. ವಿಶ್ವಲೀಲೆಯಲ್ಲಿ ಪ್ರಜ್ಞೆಯ ಜಟಿಲತೆಯಿಂದ ಈ ಆತ್ಮವಿಕಸನದ ನಿಯಮಗಳ ನಿರ್ಣಯ ವಾಗುತ್ತದೆ.

ಯಾಕಂದರೆ ಪ್ರಜ್ಞೆ ಸರಳ ಇಲ್ಲವೆ ಏಕರೂಪವಾದುದಲ್ಲ, ಸಪ್ತವಿಧವಾಗಿದೆ. ಅಂದರೆ ಶುದ್ಧ ಸತ್ತಿ ಯಿಂದ ಭೌತಿಕಸತ್ತೆಯ ವರೆಗೆ ಇಳಿಯುತ್ತ ಹೋಗುವ ಏಳು ರೂಪ ಅಥವಾ ಮೆಟ್ಟಿಲುಗಳ ಸಚೇತನಕ್ರಿಯೆ ಯಾಗಿ ಅದು ತನ್ನನ್ನು ಹಂಚಿಕೊಂಡಿದೆ. ಅವುಗಳ ಆಂತರಿಕ ವರ್ಚಸ್ಸು ಜಗತ್ತುಗಳನ್ನು ನಿರ್ಮಿಸುತ್ತದೆ, ಎಲ್ಲ ಕ್ರಿಯೆಗಳನ್ನು ನಿರ್ಧರಿಸುತ್ತದೆ, ಎಲ್ಲ ಸಂಭೂತಿಗಳನ್ನು ರಚಿಸುತ್ತದೆ. ಬ್ರಹ್ಮನು ಯಾವಾಗಲೂ ಈ ಲೀಲೆಯ ಆಧಾರಪ್ರದೇಶವಾಗಿರುತ್ತಾನೆ. ಕಾಲದೇಶದಲ್ಲಿ ತನ್ನನ್ನು ವಿಸ್ತರಿಸಿಕೊಂಡ ಬ್ರಹ್ಮನೇ ವಿಶ್ವ. ಈ ವಿಸ್ತಾರದಲ್ಲಿ ರಚನಾತ್ಮಕ ಪ್ರಕೃತಿಯಾಗಿ, ಸೃಷ್ಟಿಮಾತೆಯಾಗಿ ಬ್ರಹ್ಮನು ತನ್ನನ್ನು ನಿರೂಪಿಸಿಕೊಳ್ಳುತ್ತಾನೆ; ಅವಳು ನಮಗೆ ಮೊಟ್ಟಮೊದಲು ಜಡ ಇಲ್ಲವೆ ಪೃಥ್ವಿಯಾಗಿ ತೋರುತ್ತಾಳೆ. ಜಡ ಇಲ್ಲವೆ ಭೌತಸತ್ತೆಯಲ್ಲಿ ಬ್ರಹ್ಮನು ವಿಶ್ವವ್ಯಾಪಿಯಾದ ಪ್ರಾಣಶಕ್ತಿಯಾಗಿ (ಮಾತರಿಶ್ವನ್) ನಿರೂಪಿಸಿಕೊಳ್ಳುತ್ತಾನೆ. ಈ ಶಕ್ತಿ ಗತಿಶೀಲ ಪ್ರಾಣವಾಗಿ ಅಲ್ಲಿ ಚಲಿಸುತ್ತದೆ, ಎಲ್ಲ ವ್ಯವಸ್ಥೆ-ರಚನೆಗಳನ್ನು ಪರಿಣಾಮಕಾರಕವಾಗಿ ನಿಯಂತ್ರಿಸುತ್ತದೆ. ವಿಶ್ವಪ್ರಾಣವು ಜಡದಲ್ಲಿ ಅಂತರ್ಹಿತವಾಗಿ ಸಪ್ತವಿಧ ಪ್ರಜ್ಞೆಯನ್ನು ಸ್ಥಾಪಿಸುತ್ತದೆ; ಮತ್ತು ವಸ್ತುಗಳ ಮಾತೃಕೆಯಮೇಲೆ ಗತಿಶೀಲಶಕ್ತಿಯಾದ ಪ್ರಾಣವು ತನ್ನ ಪ್ರಭಾವ ಬೀರಿ ಬೇರೆ ಬೇರೆ ಆಕಾರಗಳನ್ನು ಅದರಿಂದ ವಿಕಾಸಗೊಳಿಸಿ ಅವೆಲ್ಲದರ ಕ್ರಮವಿಕಾಸಕ್ಕೆ ತಳಹದಿಯಾಗಿರುತ್ತದೆ.

## ಸಂಕ್ರಮಣಸ್ವರೂಪದ ವಿಚಾರ ( 'ಅಪಃ' )

ಹಾಗಾದರೆ ಚಿತ್ತಿನ ಏಳು ಘಟಕಗಳು ವಿಶ್ವದಲ್ಲಿ ಕ್ರಿಯಾಶೀಲವಾಗಿವೆ. ಸಾಮಾನ್ಯವಾಗಿ ಮನಸ್ಸು, ಪ್ರಾಣ, ಶರೀರ ಈ ಮೂರು ಘಟಕಗಳ ಅರಿವು ನಮಗಿರುತ್ತದೆ. ಇವು ಬೇರೆಬೇರೆಯಾದ ಮತ್ತು ಪಲ್ಲಟ

---

೪ ಜಗತ್ತಿನಲ್ಲಿ ಸಗುಣಬ್ರಹ್ಮನ ಲೀಲೆಯನ್ನು ಕುರಿತು ಲೀಲೆಯ ವೈಷ್ಣವ ಪ್ರತಿಮೆಯನ್ನು ವಾಡಿಕೆಯಾಗಿ ಉಪ ಯೋಗಿಸಲಾಗುತ್ತದೆ. ಆದರೆ ಕ್ರಿಯಾಶೀಲವಾದ ನಿರ್ಗುಣ ಬ್ರಹ್ಮನಿಗೂ ಅದು ಅಷ್ಟೇ ಅನ್ವಯಿಸುತ್ತದೆ.

ಹೊಂದುವ ಬದುಕಾಗಿ ನಮಗೆ ಕಾಣುತ್ತದೆ. ಈ ಬದುಕು ಅಸ್ಥಿರವಾದ ಸಾಮರಸ್ಯದ ಸ್ಥಿತಿಯಲ್ಲಿದ್ದು ಸಾಧಕ ಬಾಧಕ ಶಕ್ತಿಗಳ ಸಂಘರ್ಷದ ಮೂಲಕ ಜನನ-ಮರಣಗಳ ತುಟ್ಟತುದಿಗಳ ನಡುವೆ ಕೆಲಸ ಮಾಡುತ್ತಿದೆ. ಯಾಕೆಂದರೆ ಜೀವನವೆಲ್ಲ ಸತತವಾದ ಜನನ ಇಲ್ಲವೆ ಸಂಭವ (ಸಂಭೂತಿ—ಪದ್ಯ ೧೨-೧೪). ಎಲ್ಲ ಜನನದಲ್ಲಿ ಹೊಸ ಸಂಭವವಾಗಬೇಕೆಂಬ ಉದ್ದೇಶದಿಂದ ಸಂಭೂತವಾದದ್ದರ ಸತತವಾದ ಮರಣ ಇಲ್ಲವೆ ವಿಘಟನವಿರುತ್ತದೆ. ಆದ್ದರಿಂದಲೆ ಬದುಕಿನ ಈ ಅವಸ್ಥೆಗೆ ಮೃತ್ಯು ಅನ್ನುತ್ತಾರೆ. ಇದರಲ್ಲಿ ಹಾಯ್ದು ಹೋಗಿ ಮೀರಬೇಕಾದ ಅವಸ್ಥೆ ಯೆಂದೂ ಇದನ್ನು ವರ್ಣಿಸುತ್ತಾರೆ. (ಪದ್ಯ ೧೧, ೧೪)

ಇದು ನಮ್ಮ ಸಮಗ್ರಸತ್ತೆಯಲ್ಲ, ಅಂತೆಯೇ ನಮ್ಮ ಶುದ್ಧಸತ್ತೆಯಲ್ಲ. ಇದರ ಹಿಂದೆ ಪ್ರಜ್ಞಾತೀತವಾದ ಜೀವನವಿದೆ. ಅದರಲ್ಲಿ ಸತ್, ಚಿತ್‌ತಪಸ್ ಮತ್ತು ಆನಂದ ಎಂಬ ಮೂರು ಘಟಕಗಳಿರುತ್ತವೆ. ಸತ್ತು ನಮ್ಮ ಇರವಿನ ಸಾರವಾದುದು; ಶುದ್ಧ, ಅನಂತ, ಅಭಿನ್ನವಾದುದು. ಇದಕ್ಕೆ ಪ್ರತಿಯಾಗಿ ಭೇದಕ್ಕೆ ಒಳಗಾದ ಇರವಿದೆ, ಭೌತಜೀವನದ ಸತತ ವಿಕಾರ್ಯತೆಯ ಮೇಲೆ ಅದು ನೆಲೆನಿಂತಿದೆ. ಭೌತದ್ರವ್ಯದ ದಿವ್ಯ ಪ್ರತಿರೂಪವೆಂದರೆ ಸತ್ತು. ಚಿತ್ತಪಸ್ಸು ಇದು ಪ್ರಜ್ಞೆಯ ನಿರ್ಮಲಶಕ್ತಿ; ತನ್ನ ವಿಶ್ರಾಂತಿ ಇಲ್ಲವೆ ಕ್ರಿಯೆಯಲ್ಲಿ ಸ್ವತಂತ್ರ, ತನ್ನ ಸಂಕಲ್ಪದಲ್ಲಿ ಸಾರ್ವಭೌಮ. ಇದಕ್ಕೆ ಪ್ರತಿಯಾಗಿ ತಡೆಗೊಳಪಟ್ಟ ಗತಿಶೀಲವಾದ ಪ್ರಾಣಶಕ್ತಿಗಳಿರುತ್ತವೆ. ಅವು ಭೌತದ್ರವ್ಯಗಳ ಆಹಾರ ಸೇವಿಸಿ ಅವಕ್ಕೆ ಪರಾಧೀನವಾಗಿ ಅವುಗಳ ಪೋಷಣೆಯಿಂದ ಮರ್ಯಾದಿತವಾಗಿರು ತ್ತವೆ.[೫] ತಪಸ್ಸು ಕೆಳಗಣ ಪ್ರಾಣಿಕವಾದ ಇಲ್ಲವೆ ನರಗಳ ಶಕ್ತಿಯ ದಿವ್ಯಪ್ರತಿರೂಪವಾಗಿದೆ. ಆನಂದವೆಂಬುದು ನಿರ್ಮಲವಾದ ಪ್ರಜ್ಞಾಯುತ ಜೀವನದ ಮತ್ತು ಪ್ರಾಣಶಕ್ತಿಯ ಮುಕ್ತಾನಂದ. ಅದಕ್ಕೆ ಪ್ರತಿಯಾಗಿ ಸಂವೇದನೆ-ಭಾವನೆಗಳ ಜೀವನವಿರುತ್ತದೆ. ಅವು ಜೀವನದ ಮತ್ತು ಭೌತಪ್ರಕೃತಿಯ ಬಾಹ್ಯಸ್ಪರ್ಶಗಳಿಗೂ ಸಾಧಕ-ಬಾಧಕ ಪ್ರತಿಕ್ರಿಯೆಗಳಿಗೂ ಸುಖದುಃಖ, ನೋವು-ನಲಿವುಗಳ ದ್ವಂದ್ವಕ್ಕೂ ಪರಾಧೀನವಾಗಿರುತ್ತವೆ. ಆನಂದವು ಕೆಳಗಣ ಭಾವನಾತ್ಮಕ ಮತ್ತು ಸಂವೇದನಾತ್ಮಕ ಜೀವನಕ್ಕೆ ದಿವ್ಯಪ್ರತಿರೂಪವಾಗಿದೆ.

ದಿವ್ಯ ಸಚ್ಚಿದಾನಂದಕ್ಕೆ ಉಚಿತವಾದ ಈ ಮೇಲಣ ಜೀವನವು ಏಕೀಕೃತ, ಸ್ವಯಂಭುವಾಗಿದ್ದು ಹುಟ್ಟು-ಸಾವುಗಳ ಆಕೃತಿಗಳಿಂದ ಗೊಂದಲಗೊಂಡಿಲ್ಲ. ಅಂತೇ ಇದನ್ನು ಅಮೃತವೆಂದರೆ ಮೃತ್ಯುರಹಿತವೆಂದು ಕರೆಯುತ್ತಾರೆ.' ಮೃತ್ಯುವಿನ ಅವಸ್ಥೆಯನ್ನು ನಾವು ದಾಟಿದ ಮೇಲೆ ನಾವು ಮುಟ್ಟಬೇಕಾದ ಗುರಿಯೆಂದೂ ಅನುಭವಿಸಬೇಕಾದ ಆನಂದವೆಂದೂ ನಮಗೆ ನೀಡಲಾಗಿದೆ. (ಪದ್ಯ ೧೨, ೧೪, ೧೭, ೧೮). ಮೇಲಣ ದಿವ್ಯತೆ ಕಾರಣರೂಪ ಕಲ್ಪನೆ[೬] ಅಥವಾ ಅತಿಮಾನಸಿಕ ಜ್ಞಾನ-ಸಂಕಲ್ಪ ಅಂದರೆ ವಿಜ್ಞಾನದಿಂದ ಕೆಳಗಣ ಮರ್ತ್ಯ ಜೀವನಕ್ಕೆ ಜೋಡಿಸಲಾಗಿದೆ.

ಈ ಕಾರಣರೂಪ ಕಲ್ಪನೆ ಮನಸ್ಸು-ಪ್ರಾಣ-ಶರೀರಗಳ ಗೊಂದಲಗೊಂಡ ಕ್ರಿಯೆಗಳಿಗೆ ಆಧಾರವಾಗಿ ರಹಸ್ಯದಲ್ಲಿ ಮಾರ್ಗದರ್ಶಿಯಾಗಿ ವಿಶ್ವದ ಸರಿಯಾದ ವಿರ್ಪಾಡು ತಪ್ಪದೆ ಆಗುವಂತೆ ನೋಡಿಕೊಳ್ಳುತ್ತದೆ. ವೇದ ದಲ್ಲಿ ಇದಕ್ಕೆ ಸತ್ಯ, ಋತವೆನ್ನುತ್ತಾರೆ. ಯಾಕಂದರೆ ನೇರವಾದ ದರ್ಶನಬಲದಿಂದ ಇದು ಸೃಷ್ಟಿಯ

---

[೫] ಆದುದರಿಂದಲೇ ಭೌತದ್ರವ್ಯಕ್ಕೆ ಅನ್ನ (ಆಹಾರ) ವೆಂದು ಉಪನಿಷತ್ತಿನಲ್ಲಿ ಕರೆದಿದ್ದಾರೆ. ತನ್ನ ಮೂಲದಲ್ಲಿ ಆ ಶಬ್ದದ ಅರ್ಥ ಕೇವಲ ಸತ್ತೆ ಇಲ್ಲವೆ ದ್ರವ್ಯ ಎಂದಿತ್ತು.

[೬] ಇಲ್ಲಿಯ ಕಲ್ಪನೆ ಅಮೂರ್ತವಾದ ಮಾನಸಿಕ ಕಲ್ಪನೆಯಲ್ಲ, ಆದರೆ ಅತಿಮಾನಸಿಕವಾದ ಸತ್ಯಕಲ್ಪನೆ, ಸತ್ತೆಯ ಪ್ರಜ್ಞೆ, ಶಕ್ತಿ ಮತ್ತು ಆನಂದ. ಅದು ತನ್ನೆಲ್ಲ ಸತ್ತೆಯ ಸತ್ಯಗಳನ್ನೂ ಶಕ್ತಿಗಳನ್ನೂ ಸರ್ವಸಂಗ್ರಹವಾಗಿ, ವಿವೇಚಕವಾಗಿ ಅರಿತುಕೊಳ್ಳುವಂತೆ ತೀವ್ರಗೊಂಡಿರುತ್ತದೆ; ತನ್ನರಿವಿನಲ್ಲಿ ಆತ್ಮಪ್ರಕಾಶನದ ಸಂಕಲ್ಪವನ್ನೂ ಗೂಢಶಕ್ತಿಗಳನ್ನೂ ರೂಪಶಕ್ತಿಗಳನ್ನೂ ಒಳಗೊಂಡಿರುತ್ತದೆ. ಅದು ಕಾರ್ಯಮಾಡುವ ಮತ್ತು ಪರಿಣಾಮಕಾರಿಯಾಗುವ ಶಕ್ತಿಯಾಗಿದೆ. ತನ್ನ ಕಾರ್ಯದ ಮೇಲೆ ಪ್ರಭುತ್ವವುಳ್ಳ ಜ್ಞಾನವೂ ಆಗಿದೆ.

ಸತ್ಯವನ್ನು—ಸಮಾವೇಶಕವಾದ ಹಾಗೂ ಆಭಾಸಗಳಿಂದ ಸ್ವತಂತ್ರವಾದ ಸತ್ಯವನ್ನು—ನಿರೂಪಿಸುತ್ತದೆ. ಋತ ಇಲ್ಲವೆ ಧರ್ಮವೆಂಬ ಹೆಸರೂ ಇದಕ್ಕೆ ಯೋಗ್ಯವಾದುದು. ಯಾಕಂದರೆ ಚಿತ್ತಿನ ಪರಿಣಾಮಕಾರಿಯಾದ ಶಕ್ತಿಯನ್ನು ಒಳಗೊಂಡು ಸ್ವಭಾವಕ್ಕನುಗುಣವಾಗಿ ಎಲ್ಲ ವಸ್ತುಗಳನ್ನು ಪೂರ್ಣಜ್ಞಾನದಿಂದಲೂ ಪೂರ್ವದೃಷ್ಟಿಯಿಂದಲೂ ಪ್ರಕಟಗೊಳಿಸುತ್ತದೆ.

ಘನವೆಂದೂ ಇದನ್ನು ಕರೆಯುವರು, ಯಾಕಂದರೆ ಎಲ್ಲ ವಿಶಿಷ್ಟ ಕ್ರಿಯೆಗಳನ್ನು ತಿಳಿಯಬಲ್ಲ ಅನಂತವಾದ ವಿಶ್ವಮತಿ ಅದಕ್ಕಿದೆ. ಸತ್ಯವಾಗಿ ವಿಜ್ಞಾನವು ಒಡೆದುಹೋದ ಪ್ರಜ್ಞೆಯನ್ನು ಏಕದತ್ತ ಮರಳಿ ಒಯ್ಯುತ್ತದೆ. ಬಹುತ್ವದಲ್ಲಿಯ ಸತ್ಯವನ್ನೂ ಅದು ಕಾಣುತ್ತದೆ. ಕೆಳಗಣ ಭೇದಪರವಾದ ಬುದ್ಧಿಗೆ ಅದು ದಿವ್ಯವಾದ ಪ್ರತಿರೂಪವಾಗಿದೆ. ವೈದಿಕಋಷಿಗಳು ಚಿತ್ತಿನ ಈ ಏಳು ಶಕ್ತಿಗಳನ್ನು 'ಅಪಃ' ಎಂದು ಕರೆದಿದ್ದಾರೆ. ಮಾನವಪ್ರಾಣಿಯ ಸರ್ವಸಾಧಾರಣವಾದ ಪ್ರಜ್ಞಾಸಮುದ್ರದಲ್ಲಿ ಹರಿದುಹೋಗುವ ಇಲ್ಲವೆ ಅದರಿಂದ ಎದ್ದು ಬರುವ ಪ್ರವಾಹಗಳೆಂದು ಅವನ್ನು ಹಾಗೆ ಕಲ್ಪಿಸಲಾಗಿದೆ.[೭] ನಿತ್ಯವಾಗಿ ಅಗಲದಂತೆ ಅವೆಲ್ಲ ಕೂಡಿ ಇರುತ್ತವೆ. ಆದರೆ ಒಂದರೊಳಗೊಂದು ಅಡಗಿಕೊಂಡು ಮತ್ತೆ ಪ್ರಕಟವಾಗುವ ಶಕ್ತಿಯುಳ್ಳವು ಆಗಿರುತ್ತವೆ. ಭೌತಪ್ರಕೃತಿಯಲ್ಲಿ ಅವು ಪ್ರತ್ಯಕ್ಷವಾಗಿ ಅಂತರ್ಹಿತವಾಗಿದ್ದು ಅದರಿಂದ ಅವಶ್ಯವಾಗಿ ಪ್ರಕಟಗೊಳ್ಳಲೇಬೇಕು. ಶುದ್ಧವಾದ ಅನಂತಸತ್ತೆಯಲ್ಲಿ ಅವನ್ನು ಒಳಸೆಳೆದುಕೊಳ್ಳಬಹುದು, ಮತ್ತೆ ಅದರಿಂದ ಪ್ರಕಟಗೊಳಿಸಬಹುದು. ಅನೇಕರಲ್ಲಿ ಏಕ, ಏಕದಲ್ಲಿ ಅನೇಕ—ಇದರ ಅಂತರ್ಧಾನ ಮತ್ತು ಪ್ರಕಟನ—ಇದು ನಿತ್ಯವಾಗಿಯೂ ಪುನರಾವರ್ತವಾದ ವಿಶ್ವವರ್ತುಲಗಳ ನಿಯಮವಾಗಿದೆ.

## ಬ್ರಹ್ಮದರ್ಶನ

ವಿಶ್ವದಲ್ಲಿ ಮತ್ತು ನಮ್ಮ ಸ್ವಂತದ ಬದುಕಿನಲ್ಲಿ ಬ್ರಹ್ಮನನ್ನು ಹೇಗೆ ಅರಿತುಕೊಳ್ಳಬೇಕೆಂಬುದನ್ನು ಈ ಉಪನಿಷತ್ತು ಕಲಿಸುತ್ತದೆ. ಅಚಲ, ಚಲ ಎಂಬೆರಡೂ ಪರಿಗಳಲ್ಲಿ ನಾವು ಬ್ರಹ್ಮನನ್ನು ಅರಿಯಬೇಕು. ನಿತ್ಯವೂ ಅವಿಕಾರ್ಯವೂ ಆದ ಚೈತನ್ಯದಲ್ಲಿ ಹೇಗೋ ಹಾಗೆ ವಿಶ್ವದ ಮತ್ತು ಅದರ ಸಾಪೇಕ್ಷಸಂಬಂಧಗಳಲ್ಲಿ ಬದಲಾಗುವ ಆವಿಷ್ಕಾರಗಳಲ್ಲಿಯೂ ನಾವವನನ್ನು ಕಾಣಬೇಕು. ಎಲ್ಲ ವಸ್ತುಗಳನ್ನು ನಾವು ಕಾಲ-ದೇಶದ ಕಕ್ಷೆಯಲ್ಲಿ ಕಾಣಬೇಕಾಗುತ್ತದೆ—ದೂರ-ಸಮೀಪ, ಎಂದೋ ಹಳೆಯದು ಮತ್ತು ಸದ್ಯದ ಇಂದು, ಕೊನೆಯಿಲ್ಲದ ಮುಂದು. ಹೀಗೆ ಮಾಡುವಾಗ ಅವುಗಳ ಎಲ್ಲ ವಿಷಯಗಳನ್ನೂ ಘಟನೆಗಳನ್ನೂ ಏಕಬ್ರಹ್ಮನೆಂದು ತಿಳಿದಿರಬೇಕು.

ಎಲ್ಲ ವ್ಯಕ್ತಿಗತ ವಸ್ತುಗಳನ್ನೂ ವಿಶ್ವವನ್ನೂ ಮೀರಿ, ಧರಿಸಿ, ಪೋಷಿಸುವಂಥದೆಂದು ನಾವು ಬ್ರಹ್ಮನನ್ನು ಅರಿಯಬೇಕು—ಕಾಲ-ದೇಶ, ಕಾರ್ಯ-ಕಾರಣಸಂಬಂಧಗಳಿಗೆ ಅತೀತವಾಗಿ. ವಿಶ್ವದಲ್ಲಿದ್ದು ಅದನ್ನು ತನ್ನದಾಗಿ ಮಾಡಿಕೊಂಡು ಅದರಲ್ಲಿದ್ದುದನ್ನೆಲ್ಲ ಒಳಗೊಳ್ಳುವಂಥದೆಂದೂ ನಾವು ಅರಿಯಬೇಕು.

ಇದೇ ಅತೀತ, ವಿಶ್ವಮಯ, ವ್ಯಕ್ತಿಗತ ಬ್ರಹ್ಮ, ಈಶ್ವರ. ಇದು ಸರ್ವಾಧಾರ, ಸರ್ವಾಂತರ್ಯಾಮಿ ಚೈತನ್ಯ, ಎಲ್ಲ ಜ್ಞಾನದ ವಿಷಯ. ಇದನ್ನು ಕಂಡರೆ ಪರಿಪೂರ್ಣತೆಗೂ ಅಮೃತಪದವಿಗೂ ದಾರಿ ಮಾಡಿಕೊಂಡಂತೆ.

---

೭ ಹೃದಯಸಮುದ್ರ—ಋಗ್ವೇದ-೪.೫೮.೫.

## ಎರಡನೆಯ ಚಲನ (೨)

# ಆತ್ಮಸಾಕ್ಷಾತ್ಕಾರ

(ಪದ್ಯ ೬-೭)*

ಅಂತರ್ಮುಖವಾಗಿ ನೋಡಿದರೆ ಬ್ರಹ್ಮನು ವಿಶ್ವದಲ್ಲಿಯ ಎಲ್ಲದರಲ್ಲಿ ವಿಕಾರಹೊಂದದ ಸತ್ತು. ಆತ್ಮನೆಂದರೆ ಅದೇ. ಮನಸ್ಸು, ಪ್ರಾಣ, ಶರೀರ, ಶೀಲ, ಸ್ವಭಾವ, ಕರ್ಮ—ನಮ್ಮಲ್ಲಿ ವಿಕಾರಹೊಂದುವ ಪ್ರತಿಯೊಂದು ಇದೆಲ್ಲ ನಮ್ಮ ನಿಜವಾದ ಅವಿಕಾರ್ಯವಾದ ಆತ್ಮನಲ್ಲ, ಆದರೆ ಜಗತಿಯ ಚಲನದಲ್ಲಿ ಆತ್ಮನ ಆಗುವಿಕೆ ಮಾತ್ರ. ಅಂತೇ ಪ್ರಕೃತಿಯಲ್ಲಿರುವ ಅಚೇತನ-ಸಚೇತನ ಎಲ್ಲ ವಸ್ತುಗಳು ಸರ್ವಾತ್ಮನ ಆಗುವಿಕೆ ಯಾಗಿರುತ್ತವೆ. ಈ ಎಲ್ಲ ಬೇರೆ ಬೇರೆ ವಸ್ತುಗಳು ಒಂದೇ ಅವಿಚ್ಛಿನ್ನ ಸತ್ತೆಯಾಗಿರುತ್ತವೆ. ಪ್ರತಿಯೊಂದು ಸತ್ತೆ, ಪ್ರತಿಯೊಂದು ಪ್ರಾಣಿ ಕಂಡುಕೊಳ್ಳಬೇಕಾದ ಸತ್ಯವಿದು.

ಈ ಏಕತೆಯನ್ನು ತನ್ನ ಜೀವನದ ಪ್ರತಿಯೊಂದು ಭಾಗದಲ್ಲಿ ವ್ಯಕ್ತಿ ಅನುಭವಿಸಿದೊಡನೆ, ಅವನು ಪರಿಪೂರ್ಣ, ನಿರ್ಮಲ, ಅಹಂಕಾರವಿಮುಕ್ತ, ದ್ವಂದ್ವಾತೀತ ಮತ್ತು ಸಂಪೂರ್ಣವಾದ ದಿವ್ಯಾನಂದವನ್ನು ಅನುಭವಿಸುವವನು ಆಗುತ್ತಾನೆ.

### ಆತ್ಮ

ನಮ್ಮೊಳಗಿನ ನಿಜವಾದ ಆತ್ಮವೇ ಬ್ರಹ್ಮನು. ಅದು ಶುದ್ಧ, ಅಭೇದ್ಯ ಸತ್ತೆಯಾಗಿರುತ್ತದೆ; ಸ್ವಯಂ ಪ್ರಕಾಶ, ಪ್ರಜ್ಞೆಯಲ್ಲಿ ಸ್ವಯಂನಿದಿಧ್ಯಾಸಿತ, ಶಕ್ತಿಯಲ್ಲಿ ಸ್ವಯಂನಿದಿಧ್ಯಾಸಿತ, ಸ್ವಯಂಸಂತುಷ್ಟ. ಜ್ಞಾನಾನಂದ ಗಳೇ ಅದರ ಅಸ್ತಿತ್ವ. ಅದು ದೇಶ-ಕಾಲಾತೀತವಾಗಿದ್ದು ಸ್ವತಂತ್ರವಾಗಿದೆ.

### ತ್ರಿವಿಧ ಪುರುಷ[೧]

ಪುರುಷ-ಪ್ರಕೃತಿಯರ, ಆತ್ಮ-ನಿಸರ್ಗಗಳ ಅನ್ಯೋನ್ಯಸಂಬಂಧವನ್ನಾಶ್ರಯಿಸಿರುವ ಮೂರು ಅವಸ್ಥೆ ಗಳಲ್ಲಿ ಆತ್ಮವು ಪ್ರಾಣಿಯ ಪ್ರಜ್ಞೆಗೆ ತೋರಿಬರುತ್ತದೆ. ಈ ಮೂರು ಅವಸ್ಥೆಗಳೆಂದರೆ ಅಕ್ಷರ ಅಂದರೆ ಅಚಲ, ಅವಿಕಾರ್ಯ; ಕ್ಷರ ಅಂದರೆ ಚಲ, ವಿಕಾರ್ಯ; ಪರ ಅಥವಾ ಉತ್ತಮ, ಪರಮೋಚ್ಚಸ್ವರೂಪ. ಕ್ಷರಪುರುಷ ನೆಂದರೆ ನಿಸರ್ಗದ ಬದಲಾವಣೆಗಳನ್ನೂ ಚಲನಗಳನ್ನೂ ಪ್ರತಿಬಿಂಬಿಸುವ ಆತ್ಮ. ಅವುಗಳಲ್ಲಿ ಅದು ಭಾಗ ವಹಿಸುತ್ತದೆ, ಚಲನಪ್ರಜ್ಞೆಯಲ್ಲಿ ಮುಳುಗಿರುತ್ತದೆ, ಅದರಲ್ಲಿ ಹುಟ್ಟಿ ಸಾಯುತ್ತಿರುವಂತೆ ತೋರುತ್ತದೆ, ಹೆಚ್ಚು ಕುಂದುಗಳನ್ನು ಹೊಂದುತ್ತದೆ, ಪ್ರಗತಿಯನ್ನೂ ಬದಲಾವಣೆಯನ್ನೂ ತೋರುತ್ತದೆ. ಕ್ಷರವಾದ ಆತ್ಮನು ಭೇದ, ಬದಲಾವಣೆ, ದ್ವಂದ್ವಗಳನ್ನು ಪ್ರೀತಿಯಿಂದ ಅನುಭವಿಸುತ್ತಾನೆ; ತನ್ನಲ್ಲಿಯ ಬದಲಾವಣೆಗಳನ್ನು ರಹಸ್ಯವಾಗಿ

---

* ೬ ಯಾವನು ಎಲ್ಲ ಇರುವಿಕೆಗಳಲ್ಲಿ ಎಲ್ಲ ಕಡೆ ಆತ್ಮನನ್ನು ಹಾಗೂ ಎಲ್ಲ ಇರುವಿಕೆಗಳನ್ನು ಆತ್ಮನಲ್ಲಿ ಕಾಣುತ್ತಾನೋ ಅವನು ಆ ತರುವಾಯ ಯಾವುದರಿಂದಲೂ ಹಿಂಜರಿಯುವುದಿಲ್ಲ.

೭ ಯಾರಲ್ಲಿ ಆತ್ಮವೇ ಭೂತ (ಆಗುವಿಕೆ) ಗಳಾದ ಎಲ್ಲ ಇರುವಿಕೆಗಳಾಗಿರುತ್ತದೋ—ಯಾಕಂದರೆ ಅವನಿಗೆ ಪೂರ್ಣ ಜ್ಞಾನವಾಗಿರುತ್ತದೆ—ಎಲ್ಲ ಕಡೆಗೆ ಏಕತ್ವವನ್ನು ಕಾಣುವ ಅಂಥವನಿಗೆ ಎಲ್ಲಿಯ ಮೋಹ? ಎಲ್ಲಿಂದ ಶೋಕ?

೧ ಗೀತಾ ೧೫-೧೬, ೧೭.

ನಿಯಂತ್ರಿಸುತ್ತಾನೆ, ಆದರೆ ಅವುಗಳಿಂದಲೇ ನಿಯಂತ್ರಣ ಹೊಂದಿದಂತೆ ಕಾಣುತ್ತಾನೆ; ಒಳಿತು-ಕೆಡಕು, ಸುಖ-ದುಃಖಗಳ ವಿರೋಧವನ್ನು ಮೆಚ್ಚುತ್ತಾನೆ, ಆದರೆ ಅವುಗಳ ಆಹುತಿಯಾದಂತೆ ತೋರುತ್ತಾನೆ; ನಿಸರ್ಗಕಾರ್ಯವನ್ನು ಎತ್ತಿಹಿಡಿಯುತ್ತಾನೆ, ಆದರೆ ಅದರಿಂದಲೇ ಸೃಷ್ಟಿಯಾದಂತೆ ಕಾಣುತ್ತಾನೆ. ಯಾಕಂದರೆ ಯಾವಾಗಲೂ ಬಿಟ್ಟುಬಿಡದಂತೆ ಇರುವ ಅಂತರಾತ್ಮನೇ ಈಶ್ವರ. ಅಕ್ಷರಪುರುಷನೆಂದರೆ ನಿಸರ್ಗದ ಬದಲಾವಣೆಗಳಿಂದಲೂ ಚಲನೆಗಳಿಂದಲೂ ಅಲಿಪ್ತನಾಗಿರುವ ಆತ್ಮ: ಶಾಂತ, ನಿರ್ಮಲ, ಸಮದರ್ಶಿ, ಉದಾಸೀನ, ಅವನ್ನು ನಿರುಕಿಸುತ್ತಿದ್ದು ಭಾಗ ವಹಿಸದೆ ಇರುವವನು, ಅವುಗಳ ಮೇಲೆ ಶಿಖರದ ತುದಿಗೆ ಇರುವಂತೆ ಇರುವವನು, ಆದರೆ 'ಅಪ್ಪು' ಗಳಲ್ಲಿ ಮುಳುಗಿದವನಲ್ಲ. ಈ ಶಾಂತ ಆತ್ಮವು ಒಂದೇ ಸವನೆ ವಿಶ್ರಾಂತಿಯಿಲ್ಲದೆ ಹರಿಯುವ ನೀರಿನ ಪ್ರವಾಹವನ್ನು ಕೆಳಗಡೆ ನೋಡುತ್ತ ಚಲಿಸದೆ ಇಲ್ಲವೆ ಬದಲು ಹೊಂದದೆ ಇರುವ ಆಕಾಶದಂತಾಗಿದೆ. ಕ್ಷರನ ಗುಪ್ತಸ್ವಾತಂತ್ರ್ಯವೇ ಅಕ್ಷರನೆಂಬ ತತ್ವವು.

ಪರಪುರುಷ ಇಲ್ಲವೆ ಪುರುಷೋತ್ತಮನು ಸ್ತಬ್ಧತೆಯನ್ನು-ಚಲನೆಯನ್ನು ಒಳಗೊಂಡು ಅನುಭವಿಸುವ ಆತ್ಮ. ಆದರೆ ಅವೆರಡರಲ್ಲಿ ಯಾವುದರಿಂದಲೂ ಅವನು ಬದ್ಧನಲ್ಲ. ಅವನು ಈಶ್ವರ, ಬ್ರಹ್ಮ, ಎಲ್ಲವೂ ಅವನೇ, ಅಮೇಯ, ಅಜ್ಞೇಯ. ಅಚಲವಾದದ್ದರಲ್ಲಿಯೂ ವಿಕಾರ್ಯವಾದದ್ದರಲ್ಲಿಯೂ ಈ ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದಬೇಕು.

## ಪ್ರಕೃತಿಯಲ್ಲಿ ಪುರುಷ[೨]

ವ್ಯಕ್ತಿಯ ಪ್ರಜ್ಞೆಯಲ್ಲಿ ಪ್ರಧಾನವಾದ ತತ್ವಕ್ಕನುಸರಿಸಿ ನಿಸರ್ಗದ ಸಪ್ತವಿಧ ಚಲನದಲ್ಲಿ ಬೇರೆ ಬೇರೆಯಾಗಿ ಆತ್ಮನು ತನ್ನನ್ನು ಮೂಡಿಸಿಕೊಳ್ಳುತ್ತಾನೆ. ಭೌತಿಕ ಪ್ರಜ್ಞೆಯಲ್ಲಿ ಆತ್ಮನು ಅನ್ನಮಯ ಪುರುಷನಾಗುತ್ತಾನೆ, ಪ್ರಾಣಿಕ ಪ್ರಜ್ಞೆಯಲ್ಲಿ ಅವನು ಪ್ರಾಣಮಯ ಪುರುಷನಾಗುತ್ತಾನೆ, ಮಾನಸಿಕ ಪ್ರಜ್ಞೆಯಲ್ಲಿ ಅವನು ಮನೋಮಯ ಪುರುಷನಾಗುತ್ತಾನೆ. ವೇದದಲ್ಲಿ ಸತ್ಯಂ, ಋತಂ, ಬೃಹತ್ ಎಂದು ಕರೆಯಲಾದ ಸತ್ಯ ಇಲ್ಲವೆ ಕಾರಣಕಲ್ಪನೆಯಿಂದ ಪ್ರಧಾನವಾಗಿ ಕೂಡಿದ ಅತಿಮಾನಸ ಪ್ರಜ್ಞೆಯಲ್ಲಿ ಅವನು ವಿಜ್ಞಾನಮಯ ಪುರುಷ ಅಥವಾ ಮಹತ್ ಆತ್ಮ[೩]ನಾಗುತ್ತಾನೆ. ವಿಶ್ವಾನಂದಕ್ಕೆ ಯೋಗ್ಯವಾದ ಪ್ರಜ್ಞೆಯಲ್ಲಿ ಅವನು ಸರ್ವಸುಖಿ, ಸರ್ವಭೋಗಿ, ಸರ್ವನಿರ್ಮಾಪಕನಾದ ಆನಂದಮಯ ಪುರುಷನಾಗುತ್ತಾನೆ.

ಅನಂತ-ದಿವ್ಯವಾದ ತನ್ನರಿವಿಗೆ ಉಚಿತವಾದ ಪ್ರಜ್ಞೆಯಲ್ಲಿ ಅಂದರೆ ಚಿತ್ತಪಸ್ಸಿನಲ್ಲಿ ಅವನು ಸರ್ವಪ್ರಜ್ಞನಾದ ಆತ್ಮನಾಗಿ ವಿಶ್ವದ ಮೂಲನೂ ಒಡೆಯನೂ ಆದ ಚೈತನ್ಯಪುರುಷನಾಗಿರುತ್ತಾನೆ. ಶುದ್ಧ ದಿವ್ಯಸತ್ತಿಗೆ ಯೋಗ್ಯವಾದ ಪ್ರಜ್ಞೆಯಲ್ಲಿ ಆತ್ಮನೆಂದರೆ ಸತ್‌ಪುರುಷನಾಗಿರುತ್ತಾನೆ.

ಎಲ್ಲ ರೂಪಗಳಲ್ಲಿ ವಾಸಿಸುವ ಈಶ್ವರನೊಡನೆ ತನ್ನ ನಿಜಸ್ವರೂಪದಲ್ಲಿ ಒಂದಾಗಿದ್ದ ಕಾರಣ, ಮನುಷ್ಯನು ಇದೇ ಜಗತ್ತಿನಲ್ಲಿ ಆತ್ಮನ ಈ ಅವಸ್ಥೆಗಳಲ್ಲಿಯ ಯಾವ ಒಂದರಲ್ಲಿಯೂ ಇರಬಲ್ಲನು, ಅದರ ಅನುಭವಗಳನ್ನೂ ಪಡೆಯಬಲ್ಲನು. ಭೌತಿಕದಿಂದ ಸರ್ವಸುಖಿಯಾಗುವ ಅವಸ್ಥೆಯ ವರೆಗೆ ತಾನು ಬಯಸಿದ್ದನ್ನು ಅವನು ಪಡೆಯಬಲ್ಲನು. ಆನಂದಮಯದ ಮಾರ್ಗವಾಗಿ ಚೈತನ್ಯ ಇಲ್ಲವೆ ಸತ್‌ಪುರುಷನಲ್ಲಿ ಪ್ರವೇಶಿಸಬಲ್ಲನು.

---

೨ ತೈತ್ತಿರೀಯ ಉಪನಿಷದ್ ೨. ೧-೬.

೩ ಮಹತ್ ಆತ್ಮನ ಉಲ್ಲೇಖ ಉಪನಿಷತ್ತಿನಲ್ಲಿ ಆಗಾಗ ಬರುತ್ತದೆ. ಅದನ್ನು 'ಭೂಮ' ಎಂದೂ ಕರೆದಿದೆ.

## ಸಚ್ಚಿದಾನಂದ

ಸಚ್ಚಿದಾನಂದವು ಪರಾತ್ಪರಪುರುಷನ ಆವಿಷ್ಕಾರ; ಅದರ ಅನಂತಸತ್ತೆಯು ಸ್ವಭಾವ, ಪ್ರಜ್ಞೆ, ಶಕ್ತಿ-ಸುಖಗಳು ಪರಾಪ್ರಕೃತಿಯಾಗಿವೆ. ಮನಸ್ಸು, ಪ್ರಾಣ, ಶರೀರ ಇವು ಅಪರಾಪ್ರಕೃತಿ. ಸಚ್ಚಿದಾನಂದದ ಅವಸ್ಥೆ ವಿಶ್ವಸತ್ತೆಯ ಪರಾರ್ಧ. ಅದರ ಸ್ವಭಾವ 'ಅಮೃತ' ಇಲ್ಲವೆ ಅಮರತ್ವ. ಜಡದಲ್ಲಿಯ ಮರ್ತ್ಯಜೀವನದ ಅವಸ್ಥೆ ಅಪರಾರ್ಧ. ಅದರ ಸ್ವಭಾವ ಮೃತ್ಯು. ಶರೀರಸ್ಥಿತವಾದ ಮನಸ್ಸು-ಪ್ರಾಣಗಳು ಸಚ್ಚಿದಾನಂದವನ್ನು ತಮ್ಮ ಅಜ್ಞಾನದ ಮೂಲಕ ಅನುಭವಿಸದೆ ಹೋಗುವವಾದ ಕಾರಣ ಮೃತ್ಯುವಿನ ಅವಸ್ಥೆಯಲ್ಲಿರುತ್ತವೆ. ಸಚ್ಚಿದಾನಂದವನ್ನು ಸಂಪೂರ್ಣವಾಗಿ ಅನುಭವಿಸಿದರೆ, ಅವು ತಮ್ಮ ಪರಿವರ್ತನ ಮಾಡಿಕೊಳ್ಳಬಲ್ಲುವು—ಮನಸ್ಸು ವಿಜ್ಞಾನವೆಂಬ ಸತ್ಯಸ್ವಭಾವದಲ್ಲಿ, ಪ್ರಾಣವು ಚೈತನ್ಯಸ್ವಭಾವದಲ್ಲಿ, ದೇಹವು ಸತ್‌ಸ್ವರೂಪದಲ್ಲಿ ಅಂದರೆ ನಿರ್ಮಲವಾದ ಸತ್ವದಲ್ಲಿ.

ಇದನ್ನು ಶರೀರದಲ್ಲಿ ಸಂಪೂರ್ಣವಾಗಿ ಸಾಧಿಸುವುದು ಅಶಕ್ಯವಾದರೆ, ಸೂರ್ಯಲೋಕ ಮತ್ತು ಆನಂದಾವಸ್ಥೆಗಳಲ್ಲಿ ಆತ್ಮವು ತನ್ನ ನಿಜಸ್ವರೂಪವನ್ನು ಬೇರೆ ಬದುಕಿನ ರೀತಿಗಳಲ್ಲಿ ಸಾಧಿಸುತ್ತದೆ, ಆಮೇಲೆ ದೇಹದಲ್ಲಿಯ ವಿಕಾಸವನ್ನು ಪೂರ್ಣಗೊಳಿಸಲು ಭೌತಜೀವನಕ್ಕೆ ಮರಳಿ ಬರುತ್ತದೆ.

ಶರೀರದಲ್ಲಿಯೆ ಕ್ರಮಬದ್ಧವಾಗಿ ಪೂರ್ಣತೆಯನ್ನು ಹೊಂದುವ ಸಿದ್ಧಿ ಇದೇ ಮಾನವವಿಕಾಸದ ಗುರಿ. ಸಚ್ಚಿದಾನಂದದ ಶುದ್ಧಾವಸ್ಥೆಯಲ್ಲಿ ಅನಿಯಮಿತ ಕಾಲದ ವರೆಗೆ ನಿವೃತ್ತವಾಗುವುದು ಸಹ ಆತ್ಮಕ್ಕೆ ಸಾಧ್ಯವಾದುದು. ಆತ್ಮವನ್ನು ಸಚ್ಚಿದಾನಂದವೆಂದು ಕಾಣುವುದೇ ಮಾನವಜೀವಿತದ ಧ್ಯೇಯ.

## ಆತ್ಮಸಾಕ್ಷಾತ್ಕಾರದ ಸಮಯ*

ಸಚ್ಚಿದಾನಂದವು ಯಾವಾಗಲೂ ಆತ್ಮನ ಶುದ್ಧ ಅವಸ್ಥೆ; ಅದು ವಿಶ್ವದಿಂದ ಬೇರೆಯಾಗಿದ್ದಂತೆನಿಸಿ ಸ್ವಯಂಪೂರ್ಣವಾಗಿರಬಹುದು ಅಥವಾ ಈಶ್ವರನಂತೆ ವಿಶ್ವವನ್ನು ನೋಡಿ, ಅಪ್ಪಿ, ತನ್ನದಾಗಿ ಮಾಡಿಕೊಳ್ಳಬಹುದು. ದಿಟವಾಗಿ ಅದು ಎರಡನ್ನೂ ಏಕಕಾಲಕ್ಕೆ ಮಾಡುತ್ತದೆ (ಪದ್ಯ ೮). ಈಶ್ವರನು ವಿರಾಟ್‌ಪುರುಷ, ವಿಶ್ವಾತ್ಮ(ಪರಿಭೂ :—ಎಲ್ಲ ಕಡೆಗೆ ಸಂಭವಿಸತಕ್ಕವನು)ನಾಗಿ (೮ನೆಯ ಪದ್ಯ) ವಿಶ್ವವನ್ನು ವ್ಯಾಪಿಸಿರುತ್ತಾನೆ. ಚಲನದಲ್ಲಿಯ ಪ್ರತಿವಸ್ತುವಿನಲ್ಲಿ ಅವನು ಸೇರುತ್ತಾನೆ, ಜ್ಞಾನಕ್ಕೆ ಬ್ರಹ್ಮನಾಗಿ ವ್ಯಕ್ತಿಗತಪ್ರಜ್ಞೆಗೂ ರೂಪಕ್ಕೂ ಬೆಂಬಲ ಕೊಡುತ್ತಾನೆ; ಅಜ್ಞಾನಕ್ಕೆ, ವೈಯಕ್ತಿಕತೆಯನ್ನು ಹೊಂದಿದ ಮರ್ಯಾದಿತ ಸತ್ತೆಗೆ ಆಧಾರವಾಗುತ್ತಾನೆ. ಸಜೀವ ಪ್ರಾಣಿಯಲ್ಲಿ ಜೀವಾತ್ಮನಾಗಿ ಅವನು ಪ್ರಕಟಗೊಳ್ಳುತ್ತಾನೆ.

ಸಾವಿನ ಮತ್ತು ಇತಿಮಿತಿಯ ರಾಜ್ಯದಲ್ಲಿ ಕೆಳಗಣ ಅವಸ್ಥೆಯ ದೃಷ್ಟಿಯಿಂದ, ಆತ್ಮವು ಅತಿಮಾನಸಿಕವಾದ ಆದರೆ ಮನಸ್ಸಿನಲ್ಲಿ ಮೂಡಿದ ಸಚ್ಚಿದಾನಂದವೇ ಸರಿ. ಮನಸ್ಸು ಶುದ್ಧ, ಉಜ್ವಲ ಮತ್ತು ಶಾಂತವಾಗಿದ್ದರೆ, ಅದರಲ್ಲಿ ಸರಿಯಾದ ಪ್ರತಿಬಿಂಬ ಮೂಡುತ್ತದೆ; ಅದು ಅಶುದ್ಧವಾಗಿದ್ದರೆ, ವ್ಯಗ್ರ ಇಲ್ಲವೆ ಅಸ್ಫುಟವಾಗಿದ್ದರೆ, ಪ್ರತಿಬಿಂಬವು ವಿಕೃತವಾಗುತ್ತದೆ, ಅಜ್ಞಾನದ ವಕ್ರಕ್ರಿಯೆಗೆ ಒಳಗಾಗುತ್ತದೆ.

---

* ಇದು ಮತ್ತು ಇದರ ಹಿಂದಿನ ತಲೆಬರೆಹಗಳಲ್ಲಿ, ಆತ್ಮವನ್ನು ಕುರಿತು ಉಪನಿಷತ್ತಿನಲ್ಲಿ ಹೇಳಿದ ಮುಖ್ಯ ಭಾವಗಳನ್ನು ಸಂಗ್ರಹಿಸಿದ್ದೇನೆ. ಈಶೋಪನಿಷತ್ತಿನ ಪದ್ಯದಲ್ಲಿ ಅವನ್ನು ಪ್ರಕಟವಾಗಿ ಹೇಳಿಲ್ಲ ಇಲ್ಲವೆ ಸೂಚಿಸಿಲ್ಲ. ಯಾಕೆಂದರೆ ಈ ಗ್ರಂಥಗಳ ಸಂಪೂರ್ಣ ತತ್ವಜ್ಞಾನವನ್ನು ತಿಳಿದುಕೊಳ್ಳಲು ಅವುಗಳ ಅಗತ್ಯವಿದೆ. ಅಲ್ಲದೆ ಈಶದಲ್ಲಿಯ ವಿಚಾರದ ಅನ್ಯೋನ್ಯ ಸಂಬಂಧವನ್ನು ತಿಳಿದುಕೊಳ್ಳಲೂ ಅವು ಬೇಕು.

ವಿಚಾರಪರ ಮನಸ್ಸಿನ ಸ್ಥಿತಿಯ ಮೇರೆಗೆ ನಮ್ಮಲ್ಲಿ ಆತ್ಮಜ್ಞಾನದ ಶುದ್ಧತೆ ಇರಬಹುದು ಇಲ್ಲವೆ ತಪ್ಪು ಒಪ್ಪಿನ ದ್ವಂದ್ವಗಳಲ್ಲಿ ಜ್ಞಾನವು ಮುಸುಳಿಸಿ, ವಿಕೃತವಾದದ್ದು ಕಾಣಬಹುದು; ಅಹಂಕಾರರಹಿತ ಸಂಕಲ್ಪದ ಶುದ್ಧ ಕ್ರಿಯೆಯಿರಬಹುದು ಇಲ್ಲವೆ ಪಾಪ-ಪುಣ್ಯ, ಒಳಿತು-ಕೆಡಕು ಕೃತಿ ಇವುಗಳ ದ್ವಂದ್ವದಲ್ಲಿ ಸಂಕಲ್ಪಶಕ್ತಿ ಮುಸುಳಿಸಿ ಕೊಂಕಾಗಬಹುದು; ನಿರ್ಮಲಾವಸ್ಥೆ ಮತ್ತು ಮುಕ್ತಿಯ ಕೇವಲಲೀಲೆ ಇರಬಹುದು ಇಲ್ಲವೆ ಸುಖ-ದುಃಖ, ನೋವು-ನಲಿವು, ಯೋಗ್ಯ ಮತ್ತು ಯೋಗ್ಯವಲ್ಲದ ಭೋಗ ಈ ದ್ವಂದ್ವಗಳಲ್ಲಿ ಅದರ ವಿಪರೀತತೆ ಮತ್ತು ಅಸ್ಫುಟತೆ ತಲೆದೋರಬಹುದು.

ಮಾನಸಿಕವಾದ ಅಹಂಭಾವವು ಆತ್ಮವನ್ನು ಒಡೆದು ಅದಕ್ಕೆ ಕಟ್ಟುಹಾಕಿ ಈ ವಿಕೃತಿಯನ್ನುಂಟು ಮಾಡುತ್ತದೆ. ಪ್ರಕೃತಿಯ ವಿಕಾರಶೀಲ ರಚನೆಗಳೊಡನೆ ಕ್ಷರಪುರುಷನು ಒಂದಾಗುವುದರಿಂದ ಈ ಕಟ್ಟುಪಾಡು ಉಂಟಾಗುತ್ತದೆ. ಅವನು ಎಲ್ಲ ಬದುಕಿನೊಡನೆ ತಾನು ಒಂದೆಂಬ ಭಾವವನ್ನು ತೊರೆದು ಬೇರೆ ಶರೀರ, ವೈಯಕ್ತಿಕ ಜೀವನ, ಅಹಂಕೃತ ಚಿತ್ತ ಇವುಗಳಲ್ಲಿ ನಿಲ್ಲುತ್ತಾನೆ.

ಸೃಷ್ಟಿಯ ಚಲನದಲ್ಲಿ ಹಿಂದೆ ನಾವು ಪಡೆದ ಉತ್ಕ್ರಾಂತಿಯ ಮೂಲಕ ಏಕತೆಯ ಭಾವತ್ಯಾಗವೆಂಬುದು ತಿಳಿವಳಿಕೆಯ ಒಂದು ಸ್ಥಿರರೂಢಿಯಾಗಿದೆಯೆ ಹೊರತು ಇದು ಮಾನವಪ್ರಜ್ಞೆಯ ಅಪರಿಹಾರ್ಯ ನಿಯಮ ವೇನಲ್ಲ. ಅದು ಕಡಿಮೆಯಾಗುತ್ತ ಕೊನೆಗೆ ಕಣ್ಮರೆಯಾಗುವುದೇ ಆತ್ಮಸಾಕ್ಷಾತ್ಕಾರಕ್ಕೆ ಸಮಯವಾಗಿದೆ. ವಿವೇಕ, ಪೂರ್ಣತೆ ಮತ್ತು ಪರಮಸುಖ ಇವುಗಳ ಪ್ರಾರಂಭವೆಂದರೆ ಏಕದ ದರ್ಶನ.

# ಆತ್ಮಸಾಕ್ಷಾತ್ಕಾರದ ಅವಸ್ಥೆಗಳು

## ಎಲ್ಲದರ ದರ್ಶನ

ವಿಶ್ವದಲ್ಲಿಯ ಇತರ ಬದುಕಿನೊಡನೆ ಹೊಂದುವ ಐಕ್ಯಭಾವವು ಆತ್ಮಸಾಕ್ಷಾತ್ಕಾರದ ಪ್ರಥಮ ಗತಿ. ಅದರ ತೀರ ಮೊದಲಿನ ಸ್ಥೂಲಸ್ವರೂಪವೆಂದರೆ ಬೇರೆಯವರನ್ನು ತಿಳಿದುಕೊಳ್ಳುವ ಇಲ್ಲವೆ ಅವರಿಗೆ ಸಹಾನುಭೂತಿ ತೋರುವ ಪ್ರಯತ್ನ, ಇತರರಿಗಾಗಿ ಹೆಚ್ಚುಹೆಚ್ಚಾಗಿ ಪ್ರೀತಿ-ದಯೆ-ಸೌಹಾರ್ದಗಳನ್ನು ತೋರುವ ಪ್ರವೃತ್ತಿ, ಉಳಿದವರಿಗಾಗಿ ಕಾರ್ಯಮಾಡುವ ಪ್ರೇರಣೆ.

ಹೀಗೆ ಸಾಧಿಸಿದ ಐಕ್ಯವು ಬಹುತ್ವಯುತವಾದ ಐಕ್ಯ; ಸಮಾನವಾದ ಘಟಕಗಳನ್ನು ಕೂಡಿಸುವ ಪ್ರಯತ್ನ. ಇದರಿಂದ ದಿಟವಾದ ಪ್ರಜ್ಞೆಯ ಬದಲು ಒಂದು ಸಮುಚ್ಚಯ ಭಾವ ಇಲ್ಲವೆ ಐಕಮತ್ಯವು ಪರಿಣಮಿಸುತ್ತದೆ. ಪ್ರಜ್ಞೆಗೆ ಅನೇಕವೆಂಬುವು ನಿಜವಾದ ಸತ್ತೆಗಳಾಗಿ ಉಳಿಯುತ್ತವೆ; ಏಕವೆಂಬುದು ಅವುಗಳ ಪರಿಣಾಮ ಮಾತ್ರ.

**ಒಂದು** ಜಡ, **ಒಂದು** ಪ್ರಾಣ, **ಒಂದು** ಮನಸ್ಸು, ವಿವಿಧ ರೂಪಗಳಲ್ಲಿ ಲೀಲೆಯಾಡುವ **ಒಂದು** ಆತ್ಮ— ಈ ಬಗೆಯ ಮೂಲಭೂತವಾದ ಒಂದುತನದ ಅನುಭವದಿಂದ ನಿಜಜ್ಞಾನವು ಮೊದಲಾಗುತ್ತದೆ. ಆತ್ಮವು ಸಚ್ಚಿದಾನಂದವೆಂದು ಕಂಡಾಗಲೆ ಜ್ಞಾನವು ಪೂರ್ಣವಾಗುತ್ತದೆ. ಯಾಕಂದರೆ ಜಡವು ಪ್ರಾಣದ ಲೀಲೆ ಮಾತ್ರ, ಪ್ರಾಣವು ದ್ರವ್ಯದ ಶಕ್ತಿಯಾದ ಮನಸ್ಸಿನ ಲೀಲೆ, ವಿಧವಿಧವಾಗಿ ಎಲ್ಲ ತರದ ಮಾನಸಿಕ ರೂಪಗಳಲ್ಲಿ ಇರಬಲ್ಲ ಸತ್ಯವನ್ನು ನಿರೂಪಿಸುವ **ಸತ್ಯ** ಇಲ್ಲವೆ ಕಾರಣಕಲ್ಪನೆಯ ಲೀಲೆಯೆಂದರೆ ಮನಸ್ಸು, ಸತ್ಯವು ಸಚ್ಚಿದಾನಂದದ ಲೀಲೆ, ಸಚ್ಚಿದಾನಂದವು ಅಜ್ಞೇಯ ಪರಬ್ರಹ್ಮ ಇಲ್ಲವೆ ಪರಪುರುಷನ ಆತ್ಮಾವಿಷ್ಕಾರ.

ಎಲ್ಲ ಶರೀರಗಳಲ್ಲಿಯ ಆತ್ಮವೆಂದರೆ ಈ ಏಕಾತ್ಮ ಅಥವಾ ಸಚ್ಚಿದಾನಂದ. ವ್ಯಕ್ತಿಗತ ಪ್ರಜ್ಞೆಯಲ್ಲಿ ಅದು ಬಹುಗುಣಿತವಾಗಿರುತ್ತದೆ ಎಂದು ನಾವು ಕಾಣುತ್ತೇವೆ. ಎಲ್ಲ ವೈ-ಮನಗಳು ಆತ್ಮದ ವಿಸ್ತಾರಗೊಂಡ ಅಸ್ತಿತ್ವದಲ್ಲಿ ಅದೇ ಸತ್ತೆಯ ಸಕ್ರಿಯ ರಚನೆಗಳೆಂದೂ ನಾವೂ ತಿಳಿಯುತ್ತೇವೆ. ಇದೇ, ಆತ್ಮನಲ್ಲಿ ಎಲ್ಲ ಭೂತಗಳ, ಎಲ್ಲ ಭೂತಗಳಲ್ಲಿ ಆತ್ಮನ ಕಾಣ್ಕೆ. ಸಂಪೂರ್ಣವಾದ ಆಂತರಿಕ ಸ್ವಾತಂತ್ರ್ಯ ಮತ್ತು ಸಂಪೂರ್ಣವಾದ ಸುಖಶಾಂತಿಗಳಿಗೆ ಇದೇ ಅಡಿಗಲ್ಲು. ಯಾಕಂದರೆ ಈ ಕಾಣ್ಕೆ ಹೆಚ್ಚು ಉತ್ಕಟವೂ ಸಮಗ್ರವೂ ಆದಂತೆ ವೈಯಕ್ತಿಕ ಮನೋರಚನೆಯಿಂದ ಎಲ್ಲ ಜುಗುಪ್ಸೆ ಮಾಯವಾಗುತ್ತದೆ. ಜುಗುಪ್ಸೆಯೆಂದರೆ ಎಲ್ಲ ತರದ ಅಪಕರ್ಷಣೆ, ಮುದುಡಿಕೊಳ್ಳುವಿಕೆ, ಸೇರದಿರುವಿಕೆ, ಭೀತಿ, ದ್ವೇಷ ಮುಂತಾದ ಭಾವನೆಯ ಎಲ್ಲ ವಿಕೃತಿಗಳು. ಇವು ಇತರ ಜೀವಿಗಳ ಬಗ್ಗೆ ಭೇದಭಾವದಿಂದಲೂ ವೈಯಕ್ತಿಕ ವಿರೋಧದಿಂದಲೂ ನಮ್ಮ ಸುತ್ತುಮುತ್ತಿರುವ ಬಾಹ್ಯವಸ್ತುಗಳಿಂದಲೂ ಉಂಟಾಗುತ್ತವೆ. ಸಂಪೂರ್ಣವಾದ ಆತ್ಮಸಾಮ್ಯ ಇಲ್ಲವೆ ಆತ್ಮೌಪಮ್ಯ* ನೆಲೆಗೊಳ್ಳುತ್ತದೆ.

## ಭೂತಗಳಲ್ಲಿ ಆತ್ಮನ ಕಾಣ್ಕೆ

ಕಾಣ್ಕೆಯೊಂದೇ ಸಾಲದು, ಒಳಗೆ ಕಂಡಂತೆ ಆಗಬೇಕು. ಬುದ್ಧಿಯಿಂದ ತಿಳಿದುಕೊಂಡು ಒಳಗಿನ ಕಾಣ್ಕೆಯಿಂದ ಅರಿತುಕೊಂಡುದನ್ನು ಬದುಕಿನ ಎಲ್ಲ ಅಂಶಗಳಲ್ಲಿ ಸಂಪೂರ್ಣವಾಗಿ ಇಳಿಸುವಂತೆ ಸಮಗ್ರವಾದ ಆಂತರಿಕ ಜೀವನವು ಬದಲುಗೊಳ್ಳಬೇಕು.

ಏಕತ್ವದರ್ಶನದಿಂದ (ಏಕತ್ವಮನುಪಶ್ಯತಃ — ಏಕತ್ವವನ್ನು ಎಲ್ಲ ಕಡೆಗೆ ನೋಡುವುದು) ವೈಯಕ್ತಿಕ ಜೀವವು ತನ್ನನ್ನು ಎಲ್ಲದರಲ್ಲಿ ಚಾಚಿಕೊಳ್ಳುತ್ತದೆ. ಸತ್ಯದ ಸಾಕ್ಷಾತ್ಕಾರದಿಂದ ಬರುವ ವಸ್ತುಗಳ ಉಚಿತಸಂಬಂಧ ವಿಷಯಕವಾದ ಸಂಪೂರ್ಣ ಜ್ಞಾನಕ್ಕೆ ಅನುಗುಣವಾಗಿ (ವಿಜಾನತಃ, ಸಂಪೂರ್ಣ ಜ್ಞಾನವುಳ್ಳ) ಆ ಜೀವವು ತನ್ನ ವಿಚಾರ, ಭಾವನೆ, ಸಂವೇದನೆಗಳನ್ನು ಏರ್ಪಡಿಸಿಕೊಳ್ಳುತ್ತದೆ. ಅವರಲ್ಲಿ ಪ್ರಜ್ಞೆಯ ದಿವ್ಯ ಕೃತಿ ತಿರುತಿರುಗಿ ವ್ಯಕ್ತವಾಗಬೇಕು, ಅದರ ಮೂಲಕ ನಿತ್ಯಸ್ವಯಂಭುವಾದ ಏಕಸತ್ತೆ ಜಗತ್ತಿನ ಬಹುತ್ವವನ್ನು ತನ್ನಲ್ಲಿ ಪ್ರಕಟಗೊಳಿಸುತ್ತದೆ. (ಸರ್ವಾಣಿ ಭೂತಾನಿ ಆತ್ಮೈವ ಅಭೂತ್—ಆತ್ಮವೇ ಎಲ್ಲ ಭೂತಗಳಾಗಿ ಆಯಿತು.)

ಅಂದರೆ ಜಗತ್ತು ಅಸಂಖ್ಯ ಬೇರೆ ಬೇರೆ ಪ್ರಾಣಿಗಳಿಂದ ಕೂಡಿದೆ, ಪ್ರತಿಯೊಂದು ತನ್ನಷ್ಟಕ್ಕೆ ಬದುಕಿದೆ, ಉಳಿದವುಗಳಿಂದ ಬೇರೆಯಾಗಿದೆ ಹಾಗೂ ಅವರಿಂದ ಮತ್ತು ಜಗತ್ತಿನಿಂದ ಶಕ್ಯವಿದ್ದಷ್ಟು ಹೆಚ್ಚಿನ ಲಾಭ ಪಡೆಯಲು ಯತ್ನಿಸುತ್ತದೆ ಎಂಬುದು ಮಾನವೀಯ ಅಥವಾ ಅಹಂಕಾರನಿಷ್ಠವಾದ ಅಭಿಪ್ರಾಯ; ಆದರೆ ದೈವೀದೃಷ್ಟಿ, ಯಾವುದರಿಂದ ದೇವರು ಜಗತ್ತನ್ನು ನೋಡುವನೋ, ಅದು ಹೀಗೆ : ತಾನೇ ಸರ್ವಾತ್ಮ, ತಾನೇ ಆಗಿದ್ದ ಅಸಂಖ್ಯ ಜೀವಗಳಲ್ಲಿ ತಾನಿರುತ್ತಾನೆ. ತಾನು ಅವುಗಳನ್ನು ಸಾಕಿ ಸಲಹುತ್ತಾನೆ, ಪಕ್ಷಪಾತವಿಲ್ಲದೆ ಎಲ್ಲರಿಗೆ ನೆರವಾಗುತ್ತಾನೆ, ಆರಂಭದಿಂದಲೂ ನಿತ್ಯವಾಗಿ ನಿಯತವಾದ ಸಮಯದ ಮೇರೆಗೆ ಅಮೃತತತ್ವ ಇಲ್ಲವೆ ಸಚ್ಚಿದಾನಂದವೇ ಕೊನೆಯ ಪದವಿಯಾದ ಸಂಭೂತಿಯ ದೊಡ್ಡದೊಂದು ಪ್ರಗತಿಪರವಾದ ಸಾಮರಸ್ಯವನ್ನು ದಿವ್ಯಸಿದ್ಧಿಗಾಗಿ ಸಾಧಿಸುತ್ತಿರುತ್ತಾನೆ. ಈಶ್ವರನಾಗಿ ಸಮಗ್ರಚಲನದಲ್ಲಿ ವಾಸಿಸಿರುವ ಆತ್ಮ ಎಂಬುದರ ದೃಷ್ಟಿಕೋನವಿದು. ವೈಯಕ್ತಿಕ

---

* ಗೀತೆಯಲ್ಲಿ ಸಮತ್ವವೆಂದು ಇದನ್ನು ವರ್ಣಿಸಲಾಗಿದೆ. ಜುಗುಪ್ಸೆಯೆಂದರೆ ಸ್ವಂತದ ಮರ್ಯಾದಿತ ಆತ್ಮರಚನೆಗೂ ಬಾಹ್ಯಸಂಪರ್ಕಗಳಿಗೂ ನಡುವೆ ಸಾಮರಸ್ಯದ ಕೊರತೆಯಿದೆಯೆಂಬ ಭಾವದಿಂದ ಉಂಟಾದ ಅಪಕರ್ಷಣೆ. ಇದರ ಪರಿಣಾಮವಾಗಿ ದುಃಖ, ಭೀತಿ, ದ್ವೇಷ, ಅತುಷ್ಟಿ, ಯಾತನೆಗಳು ಒದಗುತ್ತವೆ. ಇಚ್ಛೆ ಮತ್ತು ಆಸಕ್ತಿಗಳ ಮೂಲವಾದ ಆಕರ್ಷಣೆಯ ವಿರುದ್ಧಸ್ವರೂಪವಿದು. ಅಪಕರ್ಷಣೆ-ಆಕರ್ಷಣೆಗಳನ್ನು ತೆಗೆದುಹಾಕಿದರೆ ಸಮತ್ವವು ದೊರೆಯುತ್ತದೆ.

ಮಾನವೀಯ ಇಲ್ಲವೆ ಅಹಂಕಾರನಿಷ್ಠವಾದ ದೃಷ್ಟಿಯನ್ನು ದಿವ್ಯ, ಪರಮ ಮತ್ತು ವಿಶ್ವವ್ಯಾಪಕವಾದ ದೃಷ್ಟಿಗೆ ಬದಲಿಸಿಕೊಂಡು ಆ ಸಾಕ್ಷಾತ್ಕಾರದಲ್ಲಿ ಜೀವಿಸಬೇಕು.

ಆದ್ದರಿಂದ ಅತೀತವಾದ ಆತ್ಮ, (ಅವನೇ ನಾನು) ಸೋಹಂ ಎಂಬ ಸಮೀಕರಣದಿಂದ ಉಂಟಾಗುವ ಒಂದೇ ಒಂದಾದ ಏಕತೆ ಇದರ ಜ್ಞಾನವಾಗತಕ್ಕದ್ದು ಅವಶ್ಯವಾಗಿದೆ. ಈ ಜ್ಞಾನದಿಂದ ಇಡಿಯ ಬಹುತ್ವವನ್ನು ಅಪ್ಪಿಕೊಳ್ಳುವಂತೆ ಸ್ವಂತದ ಪ್ರಜ್ಞೆಯನ್ನು ವಿಸ್ತರಿಸಿಕೊಳ್ಳಬೇಕು.

ಇದು ಈಶೋಪನಿಷತ್ತಿನ ದ್ವಿಮುಖವಾದ ಅಥವಾ ಸಮನ್ವಯಪರವಾದ ಆದರ್ಶ: ವಿದ್ಯೆ-ಅವಿದ್ಯೆಗಳನ್ನು, ಒಂದು-ಹಲವನ್ನು ಏಕಕಾಲಕ್ಕೆ ಅಂಗೀಕರಿಸುವುದು; ಜಗತ್ತಿನಲ್ಲಿದ್ದು ಮೃತ್ಯುವಿನ ಅಂಶಗಳನ್ನು ಅಮೃತದ ಅಂಶಗಳಿಗೆ ಪರಿವರ್ತಿಸುವುದು; ಜನ್ಮದ ಚಟುವಟಿಕೆಯೊಡನೆ ಜನ್ಮರಹಿತವಾದ ಅವಸ್ಥೆಯ ಮುಕ್ತತೆ-ಶಾಂತಿಗಳನ್ನು ಏಕಕಾಲಕ್ಕೆ ಹೊಂದುವುದು. (ಪದ್ಯ ೯–೧೪).

ಕೆಳಗಣ ಪ್ರಕೃತಿಯ ಎಲ್ಲ ಅಂಗಗಳು ಈ ಸಾಕ್ಷಾತ್ಕಾರಕ್ಕೆ ಒಪ್ಪಬೇಕು. ಬುದ್ಧಿ ಮಾತ್ರ ಒಪ್ಪಿದರೆ ಸಾಲದು. ವಿಶ್ವವಿಶಾಲವಾದ ಪ್ರೀತಿ-ಹರ್ಷಗಳಿಂದ ಹೃದಯ ಒಪ್ಪಬೇಕು. ಸಂವೇದಕ ಚಿತ್ತವು ಈಶ್ವರ ಮತ್ತು ಆತ್ಮದ ಸಾರ್ವತ್ರಿಕ ಸಂವೇದನೆಯಿಂದ ಸ್ಫುರಿಸಬೇಕು. ಜಗತ್ತಿನಲ್ಲಿಯ ಎಲ್ಲ ಗುರಿ ಮತ್ತು ಎಲ್ಲ ಶಕ್ತಿಗಳು ತನ್ನ ಒಂದು ಭಾಗವೆಂದು ತಿಳಿದು ಪ್ರಾಣವು ಸಂಮತಿಸಬೇಕು.

## ಸಕ್ರಿಯವಾದ ಮುಕ್ತಾನಂದ

ಈ ಸಾಕ್ಷಾತ್ಕಾರವು ಕ್ರಿಯೆಯನ್ನೊಪ್ಪಿ ಆದರೆ ದುಃಖ-ಮೋಹಗಳಿಂದ ಮುಕ್ತವಾದ ಸಂಪೂರ್ಣ ಮುಕ್ತಾನಂದವು. ಇದರಲ್ಲಿ ಮೋಹದ ಸಂಭವವೆಷ್ಟೂ ಇಲ್ಲ. ಎಲ್ಲ ಬದುಕಿನ ಹಿಂದಿರುವ ಅಜ್ಞೇಯವನ್ನು ಅರಿತ ಆತ್ಮವು ಸಂಭೂತಿ ಇಲ್ಲವೆ ಆಗುವಿಕೆಯಲ್ಲಿ ಆಸಕ್ತಿಯಿಲ್ಲದಾಗುತ್ತದೆ; ವಿಶ್ವಗತವಾದ ಯಾವುದೇ ಪ್ರತ್ಯೇಕತೆಯಿರಲಿ, ಅದೊಂದು ತನ್ನಷ್ಟಕ್ಕೆ ಇಷ್ಟವಸ್ತುವೇನೊ ಎಂಬಂತೆ ಅದಕ್ಕೆ ಕೇವಲ ಮಹತ್ವದ ಬೆಲೆ ಕೊಡುವುದಿಲ್ಲ. ಎಲ್ಲವೂ ಭೋಗಕ್ಕಾಗಿ ಇದೆ, ಆತ್ಮದ ಆವಿಷ್ಕಾರವೆಂದು; ಅದರಲ್ಲಿ ಅವತರಿಸಿದ ಆತ್ಮದ ಸಲುವಾಗಿ ಅದಕ್ಕೆ ಬೆಲೆಯಿದೆ, ಅವರವರ ಸಲುವಾಗಿ ಅಲ್ಲ.[೬] ಕಾಮ ಮತ್ತು ಮೋಹ ಇವು ಅಳಿದು ಬಿಡುತ್ತವೆ; ಮೋಹದ ಜಾಗದಲ್ಲಿ ಜ್ಞಾನ, ಕಾಮದ ಸ್ಥಳದಲ್ಲಿ ಸಾರ್ವತ್ರಿಕ ಸ್ವಾಮ್ಯದ ಸಕ್ರಿಯವಾದ ಮುಕ್ತಾನಂದವು ಬಂದು ನಿಲ್ಲುತ್ತದೆ. ದುಃಖದ ಸಂಭವವೇ ಇಲ್ಲ; ಯಾಕಂದರೆ ಎಲ್ಲವನ್ನೂ ಸಚ್ಚಿದಾನಂದವೆಂದು ನೋಡಲಾಗುತ್ತದೆ; ಅಂತೆಯೆ ಅನಂತಪ್ರಜ್ಞೆ, ಅನಂತಸಂಕಲ್ಪ, ಅನಂತಸೌಖ್ಯಗಳ ರೂಪದಲ್ಲಿರುತ್ತದೆ. ದುಃಖ-ವೇದನೆಗಳು ಸಹ ಆನಂದದ ವಿಕೃತ ಅಂಶಗಳೆಂದು ತಿಳಿಯಲಾಗಿದೆ. ಯಾವುದನ್ನು ಅವು ಇಲ್ಲಿ ಮರೆಮಾಡುತ್ತವೆಯೋ, ಯಾವುದಕ್ಕಾಗಿ ಕೆಳಗಣ ಬದುಕನ್ನು ಅಣಿಗೊಳಿಸುತ್ತವೆಯೋ (ಯಾಕಂದರೆ ವಿಕಾಸಕ್ರಮದಲ್ಲಿ ಎಲ್ಲ ಯಾತನೆಯೂ ಶಕ್ತಿ-ಸೌಖ್ಯಗಳ ಸಲುವಾದ ಸಿದ್ಧತೆಯಾಗಿದೆ) ಆ ಆನಂದವನ್ನು ಮುಕ್ತವಾದ ಪೂರ್ಣವಾದ ಆತ್ಮವು ಆಗಲೆ ಗ್ರಹಿಸಿಕೊಂಡು ಭೋಗಿಸಿ ಬಿಟ್ಟಿರುತ್ತದೆ. ನಿತ್ಯಸತ್ಯವನ್ನು ಅದು ಪಡೆದಿರುತ್ತದೆ. ಅವೆಲ್ಲ ಅದರ ಆಭಾಸಗಳು ಮಾತ್ರ.

ಹೀಗೆ ಈಶ ಮತ್ತು ಜಗತ್ತುಗಳ ಏಕತೆಯ ಅನುಭೂತಿಯಿಂದ ಬ್ರಹ್ಮನ ಪೂರ್ಣಜ್ಞಾನ ಹೊಂದಿ ಶುದ್ಧಾತ್ಮಕ್ಕೆ ಮತ್ತು 'ಅಸಂಭೂತಿ'ಗೆ ಏರೇರುತ್ತ ಹೋಗಿ ಕಾಮ-ಮೋಹಗಳನ್ನು ತ್ಯಾಗಮಾಡುವುದು, ಅಲ್ಲದೆ ಎಲ್ಲ ಸತ್ತೆಗಳಲ್ಲಿ ಸಚ್ಚಿದಾನಂದದೊಡನೆ ಮುಕ್ತವಾದ ಮತ್ತು ಪ್ರಕಾಶಿತವಾದ ರೀತಿಯಲ್ಲಿ ತಾದಾತ್ಮ್ಯ ಹೊಂದಿ ಪರಮಾತ್ಮನ ಅಭಿವ್ಯಕ್ತಿಯಾದ ವಿಶ್ವದಲ್ಲಿ ಎಲ್ಲ ವಸ್ತುಗಳನ್ನು ಭೋಗಿಸುವುದು ಸಹ ಶಕ್ಯವಾದುದು.

---

೬ ನೋಡು—ಬೃಹದಾರಣ್ಯಕೋಪನಿಷತ್.

## ಸಮಾರೋಪ

ಆದುದರಿಂದ ಎರಡನೆಯ ಚಲನದಲ್ಲಿ ಈ ಉಪನಿಷತ್ತಿನ ಮೊದಲನೆಯ ಪದ್ಯದ ವಿವರಣೆಯಿರುತ್ತದೆ. ಎಲ್ಲ ಜೀವಗಳೆಂದರೆ ವಿಶ್ವದಲ್ಲಿಯ ಪ್ರತಿಯೊಂದು ಪದಾರ್ಥದಲ್ಲಿ ವಾಸಿಸುವ ಒಬ್ಬನೇ ಈಶನೆಂದೂ ಪ್ರತಿವಸ್ತು ವಿಶ್ವಗತ ವಿಶ್ವವೆಂದೂ ಸಾಮಾನ್ಯ ಚಲನದಲ್ಲಿಯ ಒಂದು ಚಲನವೆಂದೂ ಒತ್ತಿಹೇಳುವ ಮೊದಲನೆಯ ಸಾಲನ್ನು ಬ್ರಹ್ಮನೊಡನೆ ಸಮಗ್ರವಾದ ಏಕತೆಯ ಸ್ವರೂಪದಲ್ಲಿ ವಿವರಿಸಲಾಗಿದೆ. ಬ್ರಹ್ಮನು ಜೀವವ್ಯಕ್ತಿಯಲ್ಲಿ ಸಹ ಅತೀತ ಮತ್ತು ಸರ್ವವ್ಯಾಪಿ, ಅನೇಕದಲ್ಲಿ ಏಕ, ಏಕದಲ್ಲಿ ಅನೇಕ, ಸ್ಥಿರ ಮತ್ತು ಗತಿಪರ, ಎಲ್ಲ ವಿರೋಧಗಳನ್ನು ಮೀರಿ ಅವನ್ನು ಹೊಂದಿಕೆಗೊಳಿಸುವಂಥವನು. ಆತ್ಮದಲ್ಲಿ ಎಲ್ಲವನ್ನು ಭೋಗಿಸಬೇಕಾದರೆ ಕಾಮನೆಯ ಸಂಪೂರ್ಣ ತ್ಯಾಗವು ಅವಶ್ಯವೆಂಬ ದಿವ್ಯಜೀವನದ ನಿಯಮವನ್ನು ಸೂಚಿಸುವ ಎರಡನೆಯ ಸಾಲನ್ನು ಆತ್ಮ-ಸಾಕ್ಷಾತ್ಕಾರದ ಸ್ಥಿತಿಯಿಂದ ವಿವರಿಸಲಾಗಿದೆ. ಈ ಆತ್ಮಸಾಕ್ಷಾತ್ಕಾರವೆಂದರೆ ಸ್ವತಂತ್ರ ಮತ್ತು ಅತೀತವಾದ ಆತ್ಮವೇ ತನ್ನ ನಿಜವಾದ ಜೀವನವೆಂದೂ ಆ ಆತ್ಮವು ಸಚ್ಚಿದಾನಂದವೆಂದೂ ಮತ್ತು ವಿಶ್ವವು ಸಚ್ಚಿದಾನಂದದ ಸಂಭೂತಿಯೆಂದೂ ಸರಿಯಾದ ಜ್ಞಾನವನ್ನು ಪಡೆವುದು, ಇನ್ನೆಂದಿಗೂ ಅಜ್ಞಾನವನ್ನು ಪಡೆಯದಂಥದು ಎಂಬಿವೆಲ್ಲ ಬರುತ್ತವೆ. ಅಜ್ಞಾನವೇ ಎಲ್ಲ ಆಕರ್ಷಣೆ-ವಿಕರ್ಷಣೆ, ಶೋಕ-ಮೋಹಗಳ ಕಾರಣವಾಗಿದೆ.

( ಈ ಲೇಖನದ ೨ನೆಯ ಭಾಗವು ಕಳೆದ ವರ್ಷದ 'ಸಮರ್ಪಣ'ದಲ್ಲಿ ಅಚ್ಚಾಗಿದೆ. )

—ರಂ. ಶ್ರೀ. ಮುಗಳಿ

---

**ಈ ಲೇಖನದಲ್ಲಿ ಉಪಯೋಗಿಸಲಾದ ಕೆಲವು ಪ್ರತಿಶಬ್ದಗಳು :**

| | |
|---|---|
| Immutable | = ವ್ಯತ್ಯಾಸರಹಿತ, ಅವಿಕಾರ್ಯ. |
| Causality | = ಕಾರ್ಯಕಾರಣಸಂಬಂಧ. |
| Relativity | = ಸಾಪೇಕ್ಷತಾಸಂಬಂಧ. |
| Cyclic movement | = ಸಂಸಾರ, ಸಂಸರಣ. |
| Consciousness | = ಚೈತನ್ಯ, ಪ್ರಜ್ಞೆ. |
| Active | = ಕ್ರಿಯಾಶೀಲ, ಸಕ್ರಿಯ. |
| Multiplication | = ಗುಣಾಕಾರ. |
| Being | = ಸತ್ತು, ಸತ್ತೆ, ಇರವು (ಇಕೆ). |
| Becoming | = ಸಂಭೂತಿ, ಆಗುವಿಕೆ. |
| Representation | = ನಿರೂಪಣೆ, ಪ್ರತಿಭಾಸ. |
| Representative | = ನಿರೂಪಣಾತ್ಮಕ. |
| Change | = ವಿಕೃತಿ, ಬದಲಾವಣೆ. |
| Transitional | = ಸಂಕ್ರಮಣಾತ್ಮಕ. |
| Pluralistic | = ಬಹುತ್ವಯುತ. |
| Divisible | = ಭಾಗಿಸಲು ಬರುವ, ಭಾಜ್ಯ. |
| Cosmic Consciousness | = ವಿಶ್ವಪ್ರಜ್ಞೆ. |
| Identical | = ಸರಿಸಮಾನ. |
| Receptive | = ಸ್ವೀಕರಣಪರ. |
| Formative | = ರಚನಾತ್ಮಕ. |
| Self-projection | = ಆತ್ಮಪ್ರಸರಣ. |
| Absolute | = ಕೇವಲ (ಬ್ರಹ್ಮ). |
| Separative Ego | = ಭೇದಪರವಾದ ಅಹಂಭಾವ. |
| Co-existence | = ಸಹ-ಅಸ್ತಿತ್ವ. |
| Constituent | = ಮೂಲಘಟಕ. |
| Comprehensive | = ಸರ್ವಸಂಗ್ರಹ. |
| Derivative | = ನಿಷ್ಪನ್ನ. |
| Coincidently | = ಸಮಪಾತವಾಗಿ. |
| Conscious Being | = ಸಚೇತನ, ಪ್ರಜ್ಞಾಯುತ ಸತ್ತು. |
| Self-unfolding | = ಆತ್ಮವಿಕಸನ. |
| Positive and Relative Forces | = ಸಾಧಕ-ಬಾಧಕ ಶಕ್ತಿಗಳು. |
| Counterpart | = ಪ್ರತಿರೂಪ. |
| Sensational | = ಸಂವೇದನಾತ್ಮಕ. |
| Causal Idea | = ಕಾರಣರೂಪ ಕಲ್ಪನೆ. |
| Supramental | = ಅತಿಮಾನಸಿಕ. |
| Knowledge-will | = ಜ್ಞಾನಸಂಕಲ್ಪ, ವಿಜ್ಞಾನ. |
| Involved | = ಅಂತರ್ಹಿತ. |
| Self-concentrated | = ಸ್ವಯಂನಿದಿಧ್ಯಾಸಿತ. |

# ಶ್ರೀ ಅರವಿಂದ ಘೋಷರು

**( ಶ್ರೀ ರವೀಂದ್ರನಾಥ ಠಾಕೂರರಿಂದ )**

ಶ್ರೀ ಅರವಿಂದ ಘೋಷರನ್ನು ಕಾಣಬೇಕೆಂಬ ತೀವ್ರ ಇಚ್ಛೆ ನನ್ನಲ್ಲಿ ಬಹು ಕಾಲದಿಂದ ನೆಲೆಸಿತ್ತು. ಆ ಇಚ್ಛೆ ಇದೀಗ ಈಡೇರಿದೆ. ಈಗ ನನ್ನ ಚಿತ್ತದಲ್ಲಿ ಸ್ಫುರಿಸಿದ ವಿಚಾರಗಳನ್ನು ಬರೆದಿಡಲೇಬೇಕೆಂದು ನನಗನಿಸಿದೆ.

ಕ್ರೈಸ್ತ ಧರ್ಮಗ್ರಂಥದಲ್ಲಿ ಹೀಗೆ ಹೇಳಿದೆ: "ಆದಿಯಲ್ಲಿ ನಾದವಿತ್ತು (Word)". ಆ ನಾದವೇ ಮಂತ್ರವಾಗಿ ಸೃಷ್ಟಿಯ ರೂಪವನ್ನು ಧರಿಸುತ್ತದೆ. ನವಮನ್ವಂತರವನ್ನು ಪಂಚಾಂಗವು ನಿರ್ಮಿಸುವದಿಲ್ಲ. ಉನ್ನತತರ ನಿರ್ಮಿತಿಗೆ, ಇನ್ನೂ ಸವೃದ್ಧವಾದ ಸತ್ಯಾವಿರ್ಭಾವಕ್ಕೆ ಮಾನವನನ್ನು ಕರೆದೊಯ್ಯಬಲ್ಲ ಮಂತ್ರವೇ ಅಂಥ ಮನ್ವಂತರವನ್ನು ತರಬಲ್ಲದು.

ನಮ್ಮ ವೇದೋಪನಿಷತ್ತುಗಳಲ್ಲಿ ಎಲ್ಲ ಶ್ರೇಷ್ಠ ಮಂತ್ರಗಳ ಮೊದಲಿಗೂ ಕೊನೆಗೂ ಓಂಕಾರವಿರುವದುಂಟು. ಸತ್ಯದ ಸ್ವಯಂಭು ಅರ್ಥಶಕ್ತಿಯನ್ನು ಅದು ಪಡೆದಿರುವದು. ಅದು ಸನಾತನದ ಉಸಿರು.

ಒಂದು ಮಹಾವಿಚಾರದ ಸಮುದ್ರದೊಳಗಿಂದ ಬೃಹತ್ತರಂಗವೊಂದು ಹೊರಟು ಭೋರ್ಗರೆಯುತ್ತ ಯುರೋಪ್‌ಖಂಡದ ಮೇಲೆ ಅಪ್ಪಳಿಸಿತು; ಆ ತರಂಗದ ಮೇಲೆ ಫ್ರೆಂಚ್ ಮಹಾಕ್ರಾಂತಿ ತೇಲಿಬಂತು. ಆ ಕಾಲ ನವಯುಗವಾಗಿ ಪರಿಣಮಿಸಿದುದಕ್ಕೆ ಕಾರಣ, ಅಂದಿನ ದೀನದರಿದ್ರರು ತಮ್ಮನ್ನು ತೊತ್ತಳಿದುಳಿದ ಸೊಕ್ಕಿನ ಸಿರಿವಂತರನ್ನು ಮಣ್ಣುಮುಕ್ಕಿಸಿದರೆಂದಲ್ಲ; ಆದರೆ ಆ ಯುಗದ ಆದಿಯಲ್ಲಿ ಅಖಿಲ ಮಾನವಕುಲದ ಮಹಾ ನೈತಿಕ ವಿಮೋಚನೆಯ ಮಂತ್ರವೊಂದು ಕೇಳಿಬಂತೆಂದು.

ಮ್ಯಾಝಿನಿ ಮತ್ತು ಗ್ಯಾರಿಬಾಲ್ಡಿ ಇವರು ಇಟಲಿಯಲ್ಲಿ ನವಯುಗವೊಂದನ್ನು ರೂಪಿಸಿದರು. ಇದಕ್ಕೆ ಕಾರಣವಾದುದು ಆ ದೇಶದ ರಾಜಕೀಯ ಪರಿಸ್ಥಿತಿಯಲ್ಲುಂಟಾದ ಬಾಹ್ಯಪರಿವರ್ತನೆಯ ಸಂಗತಿಯಲ್ಲ, ಆದರೆ ಈ ದ್ರಷ್ಟಾರರು ಉಚ್ಚರಿಸಿದ ಮಂತ್ರವಾಣಿಯೇ ಕಾರಣ. ಆ ವಾಣಿಯು ಕೆಲವೊಂದು ಕರ್ಮವಿಧಾನವನ್ನು ಪ್ರಸ್ತಾಪಿಸಿತು ಮಾತ್ರವಲ್ಲದೆ, ಅದೊಂದು ಆಂತರಿಕ ಪ್ರಾತಿಭಸತ್ಯದ ಸ್ಫೂರ್ತಿಯನ್ನಿತ್ತಿತು. ಕತ್ತಲೆಯಲ್ಲಿ ಸ್ಪರ್ಶಮಾತ್ರದಿಂದ ತನ್ನ ಸಮೀಪದಲ್ಲಿದ್ದ ವಸ್ತುಗಳ ಪರಿಚಯ ಮಾಡಿಕೊಳ್ಳುವದು ಮಾನವನಿಗೆ ಮಾತ್ರ ಸೇರಿದೆ; ಆದರೆ ಸೂರ್ಯಪ್ರಕಾಶವು ವಿಶ್ವದ ಸ್ಪರ್ಶಶಕ್ತಿಯ ಪ್ರತಿನಿಧಿಯಾಗಿದೆ. ಅದು ಪ್ರತಿಯೊಬ್ಬನ ಉಪಯೋಗಕ್ಕೂ ಇರುವದಲ್ಲದೆ ಎಲ್ಲ ವ್ಯಕ್ತಿಗಳ ತಾತ್ಪೂರ್ತಿಕ ಉಪಯೋಗಗಳನ್ನೂ ಮೀರಿ ನಿಂತಿದೆ. ಈ ಪ್ರಕಾಶವು ಆ ಮಂತ್ರಶಕ್ತಿಯ ಪೂರ್ಣ ಸಂಕೇತವಾಗಿದೆ.

---

"ಮಾಡರ್ನ್ ರಿವ್ಯೂ" ಮಾಸಪತ್ರಿಕೆಯ ಜುಲೈ ೧೯೨೮ರ ಸಂಚಿಕೆಯಲ್ಲಿ ಪ್ರಕಟವಾದ ಆಂಗ್ಲ ಲೇಖನದ ಅನುವಾದ.

ಒಂದು ದಿನ ವಿಜ್ಞಾನದೇವತೆಯು ಪಾಶ್ಚಾತ್ಯ ಪ್ರಪಂಚದಲ್ಲಿ ನವಮನ್ವಂತರವನ್ನು ಪ್ರಾರಂಭಿಸಿದಳು. ಸೃಷ್ಟಿಯ ರಹಸ್ಯಗಳನ್ನು ಭೇದಿಸಿ ತೋರಿಸುವಲ್ಲಿ ಮಾನವನಿಗೆ ಆಕೆ ನೆರವಾದಳೆಂದು ಈ ಮನ್ವಂತರ ಪ್ರಾರಂಭವಾಯಿತೆಂದೇನೂ ಅಲ್ಲ; ಆದರೆ ಎಲ್ಲ ಬಿಡಿ ಬಿಡಿ ಸಂಗತಿಗಳಿಗೂ ಶಾಶ್ವತ ಹಿನ್ನೆಲೆಯಾಗಿರುವ ಆ ಸತ್-ಶಕ್ತಿ (Reality) ಯ ವಿಶ್ವಮುಖವನ್ನು ಆಕೆ ಮಾನವನಿಗೆ ಪ್ರಕಟಗೊಳಿಸಿದಳೆಂದು, —ನೋವು-ಸಾವುಗಳನ್ನು ಲೆಕ್ಕಿಸದಿರುವ ಸತ್ಯನಿಷ್ಠೆಯನ್ನು ಆತನಲ್ಲಿ ಆಕೆ ಜಾಗೃತಗೊಳಿಸಿದಳೆಂದು. ವಿಜ್ಞಾನ (Science) ದ ಆಧುನಿಕ ಪ್ರಗತಿಯನ್ನು ಪರಿಶೀಲಿಸಿದವರು ಬಲ್ಲರು--ನಿಜವಾಗಿ ಮತ್ತೊಂದು ನವಮನ್ವಂತರದ ಹೊಸ್ತಿಲಲ್ಲಿ ವಿಜ್ಞಾನದೇವತೆ ನಮ್ಮನ್ನು ಕರೆತಂದಿರುವಳೆಂದು, —ಸೃಷ್ಟಿಯ ಆದ್ಯಮಂತ್ರಧ್ವನಿಯಿಂದ ನಿನದಿಸುತ್ತಿರುವ, ವಿಷಯಗಳ ಆಚೆಗಿನ ದಿವ್ಯಪ್ರಕಾಶದ ಗರ್ಭಗುಡಿಗೆ ಇನ್ನು ಮುಂದೆ ಆಕೆ ನಮ್ಮನ್ನು ಕರೆದೊಯ್ಯುವಳೆಂದು.

ಪ್ರಾಚೀನ ಭಾರತದಲ್ಲಿ ನಿರ್ಮಾಣದ ಯುಗವು (the Age of Creation) ಆರಂಭವಾದುದು ವಿಧಿ-ವಿಧಾನಗಳ ಮಹತ್ವವಡಗಿ, ಅವು ಆಧ್ಯಾತ್ಮಿಕ ಜ್ಞಾನಕ್ಕೆ ಮಾರ್ಗ ಮಾಡಿಕೊಟ್ಟಾಗ. ಯಾವುದು ತನ್ನ ಸವೃದ್ಧಿಯೊಳಗಿಂದ ಹೊಸ ಸೃಷ್ಟಿಯನ್ನು ನಿರ್ಮಿಸಬಲ್ಲದೋ ಅಂಥ ಆತ್ಮಚೈತನ್ಯಕ್ಕೆ ಆ ಯುಗವು ಕರೆ ಕೊಟ್ಟಿತು. ಆಗ ಅಂದಿನ ಮಾನವರು ಎಚ್ಚತ್ತು, ಸನಾತನದ ಹೃದಯದಲ್ಲಿ ವಿಶ್ರಮಿಸುವವರು ಮಾತ್ರ ನಿಜವಾಗಿ ಜೀವಿಸುವವರೆಂದು ಸಾರಿದರು. ಆ ಯುಗದ ಹೃದಯದಿಂದ ಹೊರಹೊಮ್ಮಿದ ವಾಣಿಯಿದು: "ಸತ್ಯವನ್ನು ಸಾಕ್ಷಾತ್ಕರಿಸಿದವರೇ ಅಮೃತತ್ವವನ್ನು ಸಾಕ್ಷಾತ್ಕರಿಸಿದವರು."

ಬೌದ್ಧಯುಗದಲ್ಲೂ ಒಂದು ಮಂತ್ರವು ಆತ್ಯಂತಿಕ ತ್ಯಾಗ ಮತ್ತು ಅಸೀಮ ಪ್ರೇಮ ಇವುಗಳ ಸಂದೇಶದೊಡನೆ ಮುಂಬಂದಿತು. ಮಾನವನ ನೈತಿಕ ಸ್ವಭಾವದಲ್ಲಿ ಪೂರ್ಣತ್ವದ ಆದರ್ಶವೊಂದನ್ನು ಅದು ಪ್ರೇರಿಸಿತು. ಈ ಆದರ್ಶವೇ ಆತನಿಗಾಗಿ ಸ್ವತಂತ್ರ ಕ್ರತುಶಕ್ತಿಯ ಲೋಕವೊಂದನ್ನು ನಿರ್ಮಿಸಲು ಮೊದಲಾಯಿತು.

ಮಾನವನಲ್ಲಿ ಇರುವ ಅಗಾಧವಾದ ಅವ್ಯಕ್ತಸತ್ತೆಯನ್ನು ವ್ಯಕ್ತಗೊಳಿಸಲು ನೆರವು ನೀಡಬಲ್ಲುದೇ ಮಂತ್ರವು. ಪ್ರಾಣಿಗಳು ತಮ್ಮ ಉಪಜೀವನದ ದಿನಗೂಲಿಯನ್ನು ಗಳಿಸುವವರಲ್ಲಿಯೇ ತಮ್ಮ ಪ್ರಯತ್ನವನ್ನು ಮರ್ಯಾದೆಗೊಳಿಸುವಂತೆ ನಿಸರ್ಗವು ಅವುಗಳನ್ನು ಪ್ರಚೋದಿಸುವುದುಂಟು. ಈ ಸಂಕುಚಿತ ಉಪಜೀವನದ ಸುಳಿಯೊಳಗಿಂದ ಮಾನವನನ್ನು ಎತ್ತಿ ಜೀವನದ ವಿಶಾಲ ಸ್ವಾತಂತ್ರ್ಯಕ್ಕೆ ಕರೆದೊಯ್ಯುವದು ಆ ಮಂತ್ರವಾಣಿಯೇ. ಶಾರೀರಿಕ ಸ್ವರಕ್ಷಣೆಯೇ ಮುಖ್ಯ ಕರ್ತವ್ಯವಾಗಿರುವ ಆ ಲೋಕದ ಮಂದಪ್ರಕಾಶವು ನಿಶೆಯ ಲೋಕಕ್ಕಾಗಿ ಉಂಟು; ಆದರೆ ಮಾನವರೇನು ನಿಶಾಜೀವಿಗಳಲ್ಲ.

ತನ್ನ ಶ್ರೇಷ್ಠತೆಯ ಬಗ್ಗೆ ಮಾನವನಿಗಿರುವ ಶ್ರದ್ಧೆ ದೃಢಪಡಲು ಕಾಲಕಾಲಕ್ಕೆ ಹೊಸ ಹೊಸ ಪ್ರಮಾಣಗಳು ಅವನ ಅನುಭವಕ್ಕೆ ಬರಬೇಕಾಗುವದು. ಈ ಶ್ರದ್ಧೆಯೇ ಅನಂತತೆಗೆ ಸಹಜವಾಗಿರುವ ಸ್ವಾತಂತ್ರ್ಯವನ್ನು ಆತನಿಗೆ ತಂದುಕೊಡುವದು. ಜೀವನಸಿದ್ಧಿಯನ್ನು ಪಡೆದಿರುವ ಜೀವಜ್ಯೋತಿಯೊಂದನ್ನು ನೋಡಿದಾಗೆಲ್ಲಾ ಆ ಶ್ರದ್ಧೆಯು ಪುಟಗೊಳ್ಳುವದು. ಆ ಜ್ಯೋತಿರ್ಮಯ ಜೀವಿಯ ಬಲವು ತಾರ್ಕಿಕನ ಕೇವಲ ಬುದ್ಧಿಬಲವಲ್ಲ, ಯೋಜಕನ ಕೇವಲ ಮನೋಬಲವಲ್ಲ, ಕರ್ಮವೀರನ ಕೇವಲ ಕರ್ತೃತ್ವಬಲವಲ್ಲ. ಆದರೆ ಮಂತ್ರಶಕ್ತಿಯೊಡನೆ ಒಂದಾದ ಜೀವನದ ಬಲವು; ಓಂಕಾರವೇ ಉಸಿರಾಗಿರುವ ಇರುವಿಕೆಯ ಬಲವು; ಸತ್ಯಜೀವನವನ್ನು ಸಾಕ್ಷಾತ್ಕರಿಸಿಕೊಂಡ ನಿಶ್ಚಯಾತ್ಮರ ಬಲವು.

ಇಂಥ ದಿವ್ಯಪುರುಷನನ್ನು ಕಣ್ಣಾರೆ ಕಾಣಬೇಕೆಂದು ನಮ್ಮಲ್ಲಿಂದು ಪ್ರಬಲ ಇಚ್ಛೆಯುಂಟಾಗುವದು ಸಹಜವಿದೆ. ಏಕೆಂದರೆ ನಾವು ನಮ್ಮ ಸುತ್ತಲಿನ ಜನರತ್ತ ಕಣ್ಣು ಹೊರಳಿಸಿದರೆ, ಅನಾತ್ಮವಾದದ ಪ್ರಭಾವದಿಂದ

ತಮ್ಮ ಬಗ್ಗೆ ಉಂಟಾಗುವ ಅವಿಶ್ವಾಸವೇ ಎಲ್ಲಿ ನೋಡಿದಲ್ಲಿ ಕಂಡುಬರುತ್ತಿದೆ; ಮಾನವನೆಂದರೆ ಬಾಳುವೆಯ ಕೊನೆಯ ಗಳಿಗೆಯ ವರೆಗೂ ಶುದ್ಧ ಕಾಡುಪಶುವಾಗಿಯೇ ಜೀವಿಸಬೇಕಾದ ಪ್ರಾಣಿ ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ಭಾವ ಎಲ್ಲೆಲ್ಲಿಯೂ ತಲೆಯೆತ್ತಿದೆ; ಮಾನವಕುಲದ ಜೀವನಮೌಲ್ಯಗಳನ್ನು ಸಂತೆಪೇಟೆಯ ಅಳತೆಗಲ್ಲುಗಳಿಂದ ತೂಗಿ ನೋಡುವದು ನಡೆದಿದೆ.

ತಾತ್ಕಾಲಿಕ ಪ್ರಯೋಜನಗಳಿಗಾಗಿ ಗುದ್ದಾಡಿ ಗಡಿಬಿಡಿಯಿಂದ ದೋಚಿಕೊಳ್ಳುವ ಯಶಸ್ಸಿನಲ್ಲಿಯೇ ಸಕಲ ಪುರುಷಾರ್ಥವುಂಟೆಂದು ತಿಳಿಯುವ ಭಾವಗಳೇ ಇಂದು ಪ್ರಬಲವಾಗಿದ್ದು, ಸತ್ಯವು ಅವುಗಳಿಗೆ ಸತತವೂ ಅಧೀನವಾಗಿ ಬಾಳಬೇಕಾಗಿದೆ. ಇಂಥ ಕಾಲದಲ್ಲಿ ನಮ್ಮ ಲೋಭಕ್ಕೆ ನಿಯಂತ್ರಣವೇ ಉಳಿಯುವದಿಲ್ಲ. ಲೋಭವು ದುಡುಕುತ್ತ ಹೊರಟಿತೆಂದರೆ, ಸಿದ್ಧಿಯ ಸ್ವಾಭಾವಿಕ ಗತಿಯಲ್ಲಿ ಕಂಡುಬರುವ ಸಾಮರಸ್ಯದೊಡನೆ ನಿಧಾನವಾಗಿ ಹೆಜ್ಜೆ ಹಾಕಲಿಕ್ಕೆ ಅದು ಎಂದೂ ಒಪ್ಪುವದಿಲ್ಲ. ಇಷ್ಟೇ ಅಲ್ಲ, ಹೊಣೆಗೇಡಿ ವೇಗದ ಎಲ್ಲ ಬಗೆಯ ಸಾಧನಗಳ ಉಪಯೋಗವನ್ನು ಅದು ಮಾಡಿಕೊಳ್ಳುತ್ತದೆ; ಇಂಥ ಸಾಧನಗಳಲ್ಲಿ ಆತ್ಮವಂಚನೆಯ ಪ್ರಚಾರವೂ ಒಂದಾಗಿದೆ. ಮಹತ್ತ್ವಾಕಾಂಕ್ಷೆಯು ಯಶಸ್ಸಿನ ಒಳದಾರಿಯನ್ನು ಹುಡುಕುತ್ತಿರುತ್ತದೆ; ಏಕೆಂದರೆ ದಾರಿ ಮುಗಿದ ಮೇಲೆಯೇ ಅದಕ್ಕೆ ಲಾಭವುಂಟು. ಆದರೆ ಸತ್ಯದ ರೀತಿಯೇ ಬೇರೆ. ಹೂವು ತನ್ನ ದೇಟಿನೊಡನೆ ತಾದಾತ್ಮ್ಯ ಹೊಂದಿರುವಂತೆ ಸತ್ಯವು ತನ್ನನ್ನು ತಾನು ಹುಡುಕುವದರಲ್ಲಿಯೇ ತೃಪ್ತಿಯ ಆನಂದವನ್ನು ಅನುಭವಿಸುತ್ತದೆ. ಆದರೆ ಸತ್ಯವನ್ನು ಒಂದು ಪ್ರಯೋಜನಕ್ಕಾಗಿ ಸಾಧನವಾಗಿ ಮಾಡಿಕೊಂಡೆವೆಂದರೆ, ಸತ್ಯವು ತನ್ನ ಒಡನಾಡಿಯಾದ ಪ್ರೇಮವನ್ನೂ ಕಳೆದುಕೊಂಡು, ಆಶುಪ್ರಯೋಜನದ ವ್ಯರ್ಥತೆಯನ್ನು ಬಯಲಿಗೆಳೆಯುತ್ತದೆ.

ರಾಮಾಯಣ ಮಹಾಕಾವ್ಯದ ನಾಯಕನಾದ ರಾಮಚಂದ್ರನು ತನ್ನ ಸುದೀರ್ಘ ವನವಾಸದ ಅಲೆದಾಟದಲ್ಲಿ ಒಂದೇ ಸವನೆ ಒದಗಿದ ವಿಪತ್ತುಗಳ ಫಲವಾಗಿ ತನ್ನ ಆಪತ್ಕಾಲದ ಸಹಚರಿಯಾದ ಸೀತೆಯ ಪತಿಭಕ್ತಿಯನ್ನು ಸ್ವಾನುಭವದಿಂದ ಅರಿತಿದ್ದನು. ನಿತ್ಯವೂ ಪರಿಪಕ್ವಗೊಳ್ಳುತ್ತಿರುವ ಅನುಭವದ ದುರ್ಗಪಥದಲ್ಲಿ ಆಕೆಯ ಸತ್ಯಭಕ್ತಿಯನ್ನು ಪರೀಕ್ಷಿಸಲು ವನವಾಸವೊಂದು ಉತ್ತಮ ಸಾಧನವಾಗಿತ್ತು. ರಾಮನು ಅಯೋಧ್ಯೆಗೆ ಮರಳಿದ ಬಳಿಕ ರಾಜಕೀಯ ಪರಿಸ್ಥಿತಿಯ ತಾತ್ಕಾಲಿಕ ಒತ್ತಾಯದಿಂದಾಗಿ, ತನ್ನ ಸತ್ಯವಂತಿಕೆಯನ್ನು ಸಾಶಂಕ ಜನಸಮೂಹದೆದುರಿಗೆ ಅಗ್ನಿಪರೀಕ್ಷೆಯ ದಿವ್ಯದಲ್ಲಿ ಸಿದ್ಧಮಾಡಿ ಕೊಡಬೇಕೆಂದು ಸೀತೆಗೆ ಕೇಳಿದನು. ಆಕೆ ಇದಕ್ಕೆ ಒಪ್ಪಲಿಲ್ಲ. ಹಾಗೆ ಮಾಡುವದೆಂದರೆ ಅಸತ್ಯದ ಕ್ರೂರ ನಾಟಕದಿಂದ ಸತ್ಯಕ್ಕೆ ಮಾಡುವ ಅಪಮಾನವೆಂದೇ ಆಕೆ ಭಾವಿಸಿ, ಕೂಡಲೆ ಭೂಗರ್ಭದಲ್ಲಿ ಕಣ್ಮರೆಯಾದಳು.

ಈ ಪ್ರಸಂಗದಲ್ಲಿ ನನ್ನ ಮಿತ್ರರಾದ ಶ್ರೀ. ಕ್ಷಿತಿಮೋಹನ ಸೇನರು ತಮ್ಮ ಅಮೌಲ್ಯ ಸೂಕ್ತಿಸಂಗ್ರಹದೊಳಗಿಂದ ನನಗಾಗಿ ಆಯ್ದು ತೆಗೆದು ಕೊಟ್ಟ ಒಂದು ಪ್ರಾಚೀನ ವಂಗಗೀತದ ಪ್ರಾರಂಭದ ಚರಣವು ಸ್ಮರಣೆಗೆ ಬರುತ್ತಿದೆ. ಅದರ ಭಾವಾನುವಾದವನ್ನು ಹೀಗೆ ಮಾಡಬಹುದು :

" ಅವಸರದ ಅಗತ್ಯಗಳನ್ನು ಬೆಂಬತ್ತಿದ ಎಲೈ ಕ್ರೂರ ಮಾನವನೆ, ಇನ್ನೂ ಮೊಗ್ಗೆಯಾಗಿರುವ ಮನವನ್ನು ನಿನ್ನ ಗಡಿಬಿಡಿಗಾಗಿ ಬೆಂಕಿಯಲ್ಲಿ ಏಕೆ ಸುಟ್ಟುಬಿಡುವೆ ? "

ಇನ್ನೂ ಪಕ್ವವಾಗಲಿರುವ ಚಿತ್ತದಲ್ಲಿ ಸುಪ್ತಾವಸ್ಥೆಯಲ್ಲಿರುವ ಪರಿಪೂರ್ಣತೆಯ ಸ್ವರೂಪವು ಮನದಟ್ಟಾಗಲು ಸಾಕಷ್ಟು ಕಾಲಾವಧಿ ಬೇಕು. ಆದರೆ ಆತ್ಯವಸರದ ಅಗತ್ಯವು ನಿರ್ದಯವಾದುದು. ಅದು ಒತ್ತಾಯದಿಂದ ಒಬ್ಬರನ್ನು ಒರೆಗೆ ಹಚ್ಚಿ ನೋಡಲು ಆತುರದಿಂದ ಧಾವಿಸುತ್ತದೆ. ಆಗ ಪಕ್ವವಾಗಬೇಕಾದ

ಚಿತ್ತವೆಲ್ಲಿಯೋ ಮಾಯವಾಗಿ, ಕೂಡಿದ ಜನಜಂಗುಳಿಯು ಪೂರ್ವ ಸಿದ್ಧತೆಯ ಆರ್ಭಟಿಯನ್ನೇ ಕಂಡು ಬೆರಳು ಕಚ್ಚುತ್ತ ನಿಲ್ಲುತ್ತದೆ. ಈ ದುರಾಶೆಯ ಗಡಿಬಿಡಿಯು ತನ್ನ ರಥದ ಗಾಲಿಗಳಿಗೆ ಸತ್ಯವನ್ನು ಕಟ್ಟಿ ಅಡ್ಡದಾರಿಗಳ ಧೂಳಿಯಿಂದಿಡಿಕಿರಿದ, ಭ್ರಮೆಯ ಅಡ್ಡದಾರಿಗುಂಟ ದರದರ ಎಳೆಯುತ್ತಿರುವುದನ್ನು ನಾವು ಇಂದು ಎಲ್ಲ ಕಡೆಗೂ ನೋಡುತ್ತಿದ್ದೇವೆ. ಇಂಥ ಸಂದುಕಟ್ಟಿನಲ್ಲಿ ಈ ಲೋಭದ ಗಡಿಬಿಡಿಯನ್ನು ತಡೆಗಟ್ಟಲು, ಕೇವಲ ತರ್ಕಬುದ್ಧಿಗೆ ಮೊರೆಹೊಗುವದು ನಿಷ್ಫಲವೇ ಎಂದು ತೋರುವದು; ಅಲ್ಲದೆ, ಆಗತ್ಯ-ಅವಸರಗಳ ಆಕರ್ಷಣೆಯನ್ನು, ಸಂಖ್ಯಾ ಬಲದ ಮೋಹವನ್ನು ತನ್ನ ಗಾಢ ಶ್ರದ್ಧೆಯ ನಿಶ್ಚಲ ಶಕ್ತಿಯಿಂದ ಇದಿರಿಸಬಲ್ಲ ನಿಜವಾದ ಮಾನವನೊಬ್ಬನು ಬೇಕೆಂದು ಅನಿಸುವದು.

ಮಾನವ ಜೀವನದ ಗೌರವವನ್ನು ಇಂದು ಸ್ಥಾಪಿಸಬೇಕಾಗಿದ್ದಲ್ಲಿ ಮಾನವ ಜೀವನದ ಪರಿಪೂರ್ಣತೆಯನ್ನು ಎತ್ತಿಹಿಡಿಯುವ ಬೋಧಕನೊಬ್ಬನು ಅಗತ್ಯವಾಗಿ ಬೇಕಾಗಿದ್ದಾನೆ. ಮಾನವನ ವ್ಯಕ್ತಿತ್ವವು ಬರಿ ಸರಳವಾಗಿರದೆ, ಅಗಾಧ ಅಸಂಖ್ಯ ವಿವಿಧತೆಗಳಿಂದ ತುಂಬಿಕೊಂಡಿದೆಯೆಂಬುದು ಸ್ವತಃಸಿದ್ಧ ಪ್ರಮೇಯವಾಗಿದೆ. ಮಾನವನ ಸತ್ತ್ವಸಮೃದ್ಧಿಯನ್ನೆಲ್ಲ ಸುಲಿದು, ಅವನನ್ನು ತೀರ ಸಂಕುಚಿತ ಜೀವನದೊಂದು ಪಡಿಯಚ್ಚನ್ನಾಗಿ ಸುಲಭವಾಗಿ ಮಾರ್ಪಡಿಸಿ, ಅತ್ಯಂತ ಸರಳತೆಗೆ ಅವನನ್ನು ಇಳಿಸಿಬಿಡುವದೇನೋ ಸಾಧ್ಯವಿದೆ. ಆದರೆ ಮಾನವನ ವ್ಯಕ್ತಿತ್ವವು ಅನೇಕಾಂಗವುಳ್ಳದ್ದು (complex) ಎಂಬುದನ್ನು ಮರೆಯುವಂತಿಲ್ಲ. ಅಂತೆಯೇ ಮಾನವನ ಸಮಸ್ಯೆಗಳನ್ನು ಒಂದು ಬಗೆಯ ಕೊಡುಕೊಳ್ಳುವಿಕೆಯಿಂದಲೇ ಬಿಡಿಸಬೇಕೇ ಹೊರತು, ಅವನಲ್ಲಿಯ ವೈವಿಧ್ಯವನ್ನು ಹತ್ತಿಕ್ಕುವದರಿಂದಾಗಲಿ ಅವನ ವಿಕಾಸದ ಅವಕಾಶವನ್ನು ಸಂಕುಚಿತಗೊಳಿಸುವದರಿಂದಾಗಲಿ ಅಲ್ಲ. ನಮ್ಮ ಪ್ರಾರ್ಥನೆಯೊಳಗಿಂದ ಬುದ್ಧಿ-ಭಾವನೆಗಳೆರಡನ್ನೂ ತೆಗೆದುಹಾಕಿ, ಅದನ್ನು ತೀರ ಯಾಂತ್ರಿಕ ಸುಲಭತೆಗಿಳಿಸುವದು ಸಾಧ್ಯವಿದೆ. ತಿಬೇಟದಲ್ಲಿ ಪ್ರಾರ್ಥನೆಯ ಕೆಲಸವನ್ನು ಸಾಗಿಸಲು, ಪ್ರಾರ್ಥನಾ ಚಕ್ರವೊಂದನ್ನು ತಿರುಗಿಸುತ್ತಾರೆ. ಇಂಥ ಕಾರ್ಯದ ಕಠಿನತೆಯೇನೋ ಕಡಿಮೆಯಾಗುವದು; ಆದರೆ ಆ ಕಾರ್ಯ ಮಾಡುವವನ ಮಾನವೀಯತೆಯೂ ಆ ಪ್ರಮಾಣದಲ್ಲಿ ಕಡಿಮೆಯಾಗುವದು. ಮಕ್ಕಳಿಗೆ ಗಿಳಿಪಾಠ ಮಾಡಿಸುವದರಿಂದ ಹಾಗೂ ಅವರ ಕುತೂಹಲಬುದ್ಧಿಯನ್ನು ಹೊಚ್ಚಿ ಮಲಗಿಸಿ ಬಿಡುವದರಿಂದ, ಅಧ್ಯಾಪನ ಕಾರ್ಯವನ್ನೇನೋ ತುಂಬಾ ಹಗುರಾಗಿಸಬಹುದಾಗಿದೆ; ಮಕ್ಕಳನ್ನು ಪರೀಕ್ಷಾಯಂತ್ರದೊಳಗಿಂದ ಸುರಕ್ಷಿತವಾಗಿ, ಯಶಸ್ವಿಯಾಗಿ ಪಾರುಮಾಡುವ ಈಗಿನ ಶಿಕ್ಷಕ ಜನರಿಗೆ ಈ ಮಾತು ಗೊತ್ತೇ ಇದೆ. ಇಂಥ ಅಧ್ಯಾಪನವು 'ಯಶಸ್ಸಿ'ನ ದಾರಿ ತೋರುತ್ತಿದೆಯಾದರೂ, ನಿಜವಾದ ಶಿಕ್ಷಣಕ್ಕೆ ಸೊನ್ನೆ ಸುತ್ತಿಬಿಡುತ್ತದೆ. ಇಂದಿನ ನಮ್ಮ ರಾಜಕಾರಣವಾದರೂ ಇದೇ ದಾರಿಯನ್ನು ಹಿಡಿದಿದೆ; ತನ್ನ ನಿರ್ದಯ ಸರಲತೆಯಿಂದ, ನೀತಿಗೆ ಅದು ಹಾಕಿದ ಬಹಿಷ್ಕಾರದಿಂದ ಜಗತ್ತಿಗೊಂದು ಗಂಡಾಂತರವಾಗಿ ಪರಿಣಮಿಸಿದೆ. ಇಂದಿನ ಯಂತ್ರಪ್ರಧಾನ ಔದ್ಯೋಗಿಕ ಸಂಸ್ಕೃತಿಯಾದರೂ ಮಾನವನ ಸೌಂದರ್ಯಾಸಕ್ತಿಯನ್ನು ಚಿವುಟಿಬಿಟ್ಟು, ಜಿಪುಣ ವಿರಕ್ತನಂತೆ ತನ್ನ ಹೊಣೆಯನ್ನು ಹಗುರಮಾಡಿಕೊಂಡು ಬಿಟ್ಟಿದೆ. ತದ್ವಿರುದ್ಧವಾಗಿ, ಪ್ರಾಥಮಿಕ ಉತ್ಪಾದನಸಾಧನಗಳ ಪುರಸ್ಕರ್ತರು ವಿಜ್ಞಾನವನ್ನು ದೂರ ದೂಡಹೋಗಿ, ತಮ್ಮೊಂದು 'ಸರಲತೆ'ಯ ಪ್ರಪಂಚವನ್ನು ನಿರ್ಮಿಸುವರು; ಅವರೂ ಅಷ್ಟರ ಮಟ್ಟಿಗೆ ಮಾನವಜಾತಿಯ ಸಾಂಸ್ಕೃತಿಕ ದರಿದ್ರತೆಗೆ ಕಾರಣರಾಗುವರು. ಮಾನವನ ಚೈತನ್ಯ ಶಕ್ತಿಯನ್ನು ಆದಷ್ಟು ಕಡಿಮೆ ಬಳಸಬೇಕೆಂದು ಹೇಳುವವನು ನಿಜವಾದ ಬೋಧಕನಾಗಲಾರನು; 'ದುರ್ಗಂ ಪಥಸ್ತತ್'— ಮಾನವನ ಜೀವನಸಿದ್ಧಿಯ ದಾರಿ ಕಡಿದಾದುದೆಂಬ ವೀರವ್ರತವನ್ನು ಬೋಧಿಸುವವನೇ ನಿಜವಾದ ಗುರು. ಜೀವನ ಸಮುದ್ರದ ಪೃಷ್ಠಭಾಗದಲ್ಲಿ ತೇಲುವ ತೀರ್ಯಗ್ಜೀವಿಗಳ ಇರುವಿಕೆಯ ರೀತಿಯನ್ನು ಬಾಳೆಯ ದಿಂಡುಗಳಿಂದ ಮಾಡಿದ ತೆಪ್ಪಕ್ಕೆ ಹೋಲಿಸಬಹುದು; ಆದರೆ ಮಾನವಜೀವನವನ್ನು, ಹುಟ್ಟು-ಚುಕ್ಕಾಣಿ-ಹಾಯಿ ಪ್ರವಾಸದ ಹಗ್ಗ-ಹಾಗುಗಳೇ ಮೊದಲಾದ ವಿವಿಧ ಸಾಧನಗಳೊಂದಿಗೆ ನೀರು-ನೆಲ-ಗಾಳಿಗಳೆಂಬ ಮೂರು ಮಹಾ

ಭೂತಗಳನ್ನು ಜಯಿಸಿ ಸಾಗುವ, ರಚನಾಕೌಶಲ್ಯಯುತ ನೌಕೆಗೇ ಹೋಲಿಸಬಹುದಾಗಿದೆ. ನೌಕೆಯ ರಚನೆಯಲ್ಲಿ ವಿಜ್ಞಾನದ ಸಮತೂಕದ ತತ್ತ್ವವೂ ಮಾನವನ ಸಹಜ ಕಲಾಪ್ರವೃತ್ತಿಯೂ ಕೈಕೈ ಕೂಡಿಸಿದುದನ್ನು ಕಾಣಬಹುದು. ವಿರುದ್ಧಶಕ್ತಿಗಳ ಸಮತೂಕವನ್ನು ಸಾಧಿಸುವಲ್ಲಿ ಮಾನವನ ಬುದ್ಧಿಶಕ್ತಿಯ ದಕ್ಷತೆಯು ತೋರಿಬರುತ್ತಿದ್ದರೆ, ನಿರ್ಹೇತುಕ ಆನಂದದಿಂದ ರೂಪ ಸಾಮರಸ್ಯವನ್ನು ಸಾಧಿಸುವಲ್ಲಿ ಆತನ ಪ್ರಾತಿಭ ಶಕ್ತಿಯ ವಿಲಾಸವು ತೋರಿಬರುತ್ತದೆ. ಆಧ್ಯಾತ್ಮಿಕ ಪರಿಪೂರ್ಣತೆಯಲ್ಲಿ ಜೀವನದ ಸಕಲ ಸಮೃದ್ಧತೆಯೂ ಬರುವದೆಂಬದನ್ನೂ ಅದರಿಂದಲೇ ಆ ಸಮೃದ್ಧತೆಯು ಸಾರ್ಥವಾಗುವುದೆಂಬದನ್ನೂ ಮರೆಯಕೂಡದು.

ಇಂಥ ವಿಚಾರಗಳಲ್ಲಿ ನನ್ನ ಮನವು ಮಗ್ನವಾದಾಗ, ನಾನು ಪ್ರಯಾಣ ಮಾಡುತ್ತಿದ್ದ ಫ್ರೆಂಚ್ ಉಗೆ ಹಡಗವು ಪಾಂಡಿಚೇರಿಯ ದಂಡೆಗೆ ಬಂದು ತಲುಪಿತು. ನಾನು ಅರವಿಂದರನ್ನು ಕಂಡೆನು. ಪ್ರಥಮ ದರ್ಶನದಲ್ಲಿಯೇ ನನಗೆ ಅರಿವಾಯಿತು,—ಇವರೊಬ್ಬ ಅಧ್ಯಾತ್ಮಶೋಧಕರೂ ತಮ್ಮ ಗುರಿಯನ್ನು ಮುಟ್ಟಿದವರೂ ಎಂಬುದು; ಈ ಸುದೀರ್ಘ ಸಾಧನಾಕ್ರಮದಲ್ಲಿ ಅದೊಂದು ಮೌನ ಪ್ರೇರಣಾಶಕ್ತಿಯನ್ನು ಅವರು ಸಂಚಯಿಸಿಕೊಂಡಿದ್ದರೆಂಬುದು. ಅಂತಃಪ್ರಕಾಶದ ದಿವ್ಯ ತೇಜವು ಅವರ ಮುಖದಲ್ಲಿ ಉಕ್ಕುತ್ತಿತ್ತು. ಜೀವನವನ್ನು ಹಿಂಸಿಸುವದರಲ್ಲಿಯೇ ಸಂತಸಬಡುವ ಯಾವ ನೀರಸ ತತ್ವವಿಚಾರವೂ ಅವರ ಆತ್ಮದ ಮೇಲೆ ಪ್ರಭಾವ ಬೀರಿದ್ದಿಲ್ಲವೆಂಬುದಕ್ಕೆ ಅವರ ಆ ಪ್ರಶಾಂತ ಸಾನ್ನಿಧ್ಯವೇ ಸಾಕ್ಷಿಯಾಗಿದ್ದಿತು. ಯುರೋಪಿನ ಜೀವನ-ವಿಮುಖ ಕ್ರಿಸ್ತೀ ವಿರಕ್ತ ಸಂಪ್ರದಾಯದಿಂದ ಅವರು ಪಾಠಗಳನ್ನು ಕಲಿತಿರಲಿಲ್ಲನೆಂಬುದು ವ್ಯಕ್ತವಾಗುತ್ತಿದ್ದಿತು. ಜೀವನಾನಂದವನ್ನು ಹೋಮ ಮಾಡಬೇಕೆನ್ನುವ ತತ್ತ್ವಜ್ಞಾನ, ಭೋಗದಾಸದ ತೃಷ್ಣೆ ಇವು ಪರಸ್ಪರ ವಿರುದ್ಧವಾಗಿ ತೋರಿದರೂ, ಒಂದೇ ಬೆನ್ನಿದ್ದು ವಿರುದ್ಧ ದಿಕ್ಕಿಗೆ ಮುಖವಿರುವ ಅವಳಿಜವಳಿ ಸೋದರಿಯರಂತೆ ಇವೆ.

ಪ್ರಾಚೀನ ಋಷಿಗಳ ವಾಣಿಯು ಶ್ರೀ ಅರವಿಂದರ ಮುಖದಿಂದ ನುಡಿಯುತ್ತಿರುವಂತೆ ಅನಿಸಿತು; ಭೂಮಾನಂದದಲ್ಲಿ ಭಾಗಿಯಾಗಲು ಮಾನವನ ಆತ್ಮವು ಪಡೆಯಬೇಕಾದ ಪ್ರಶಾಂತ ಸ್ಥಿತಿಯ ಸಂದೇಶವನ್ನು ಬೀರುತ್ತಿರುವಂತೆ ಅನಿಸಿತು. ನಾನು ಶ್ರೀ ಅರವಿಂದರಿಗಂದೆ: “ನೀವು ಮಂತ್ರವನ್ನು ಪಡೆದವರಾಗಿದ್ದೀರಿ; ನಿಮ್ಮಿಂದ ಅದನ್ನು ಸ್ವೀಕರಿಸಲು ಆತುರರಾಗಿದ್ದೇವೆ. ನಿಮ್ಮ ವಾಣಿಯ ಮೂಲಕ ಭಾರತವೆ ಜಗತ್ತಿಗೆ ಕರೆದು ಹೇಳುವದು : ‘ನನ್ನ ಮಾತನ್ನು ಲಾಲಿಸು!’ ”

ಶಕುಂತಲೆಯು ಕಣ್ವಾಶ್ರಮದಲ್ಲಿಯ ತನ್ನ ಪೂರ್ವಜೀವನದಲ್ಲಿ ಯೌವನಸಹಜವಾದ ಜೀವನಜಾಗೃತಿಯನ್ನು ಪಡೆದಳು; ಮುಂದೆ ಉತ್ತರಜೀವನದಲ್ಲಿ ಜೀವನಸಾಫಲ್ಯವನ್ನು ಪಡೆದಳು. ಹಲವು ವರ್ಷಗಳ ಹಿಂದೆ ಅರವಿಂದರನ್ನು, ಅವರ ತಾರುಣ್ಯದ ವೀರಜೀವನದ ವಾತಾವರಣದಲ್ಲಿ ಕಂಡು ಹಾಡಿದ್ದೆನು :—

“ಅರವಿಂದರೇ, ರವೀಂದ್ರನ ವಂದನೆಯನ್ನು ಸ್ವೀಕರಿಸಿರಿ.”

ಇಂದು ಜ್ಞಾನನಿರ್ಭರವಾದ ಅವರ ತುಂಬುಜೀವನವನ್ನು ಕಂಡು ಮತ್ತೆ ಮೌನದಲ್ಲಿ ಹಾಡಿದೆನು :—

“ಅರವಿಂದರೇ, ರವೀಂದ್ರನ ವಂದನೆಯನ್ನು ಸ್ವೀಕರಿಸಿರಿ.”

ಎಸ್. ಎಸ್. ಶಾಂಟಲಿ
ಮೇ ೨೯, ೧೯೨೮.

# ಮಹಾವಿಜ್ಞಾನಯೋಗಿ ಮಹರ್ಷಿ ಅರವಿಂದರು

**ಮೀರಿದ ಉನ್ಮನಿ ಏರಿರಬೇಕು ।**
**ಸ್ವಾನುಭವದಿಂದೇ ತಿಳಿದಿರಬೇಕು ॥**
**ಛಂದಛಂದದಿ ನೋಡಿರಬೇಕು ।**
**ಹೊಂದಿ ಬಾಳನಾ ಮುದ್ದಿಡಬೇಕು ॥**

**—ನಿಜಾನಂದಯೋಗಿ ಸದ್ಗುರು ಬಾಲಮುಕುಂದ**

ಸತ್ಯವು ಅನಂತವಾದುದು, ನಿತ್ಯವಾದುದು. ನಿತ್ಯವಾದ ಅನಂತ ಸತ್ಯದ ಅನುಭವವೇ ಆತ್ಮಾನುಭವವು. ಆತ್ಮಾನುಭವದ ಜ್ಞಾನವೇ ಅಧ್ಯಾತ್ಮಜ್ಞಾನವು. ಅಧ್ಯಾತ್ಮಜ್ಞಾನವನ್ನು ತಿಳಿಸಿಕೊಡುವ ವಿದ್ಯೆಯೇ ಅಧ್ಯಾತ್ಮವಿದ್ಯೆ. ಆತ್ಮಾನುಭವವನ್ನು ಪಡೆಯುವ ಮಾರ್ಗವನ್ನು ಸಾಧಿಸುವ ಉಪಾಯವೇ ಯೋಗ. ಆತ್ಮಯೋಗದ ಸಾಧನೆಯಿಲ್ಲದೆ ಆತ್ಮಾನುಭವವಿಲ್ಲ. ಆತ್ಮಾನುಭವವಿಲ್ಲದೆ ಅಧ್ಯಾತ್ಮವಿದ್ಯೆ ತಿಳಿಯುವದಿಲ್ಲ. ಅಧ್ಯಾತ್ಮವಿದ್ಯೆ ತಿಳಿಯದೆ ಅನಂತಸತ್ಯದ ನಿತ್ಯಪರಿಚಯವು, ಅಖಂಡ ಜ್ಞಾನವು ಆಗುವದು ಶಕ್ಯವಿಲ್ಲ.

ಅಖಂಡ ಸತ್ಯದ, ಅಧ್ಯಾತ್ಮಜ್ಞಾನದ ತವರುಮನೆಯಾದ ನಮ್ಮೀ ಭರತಖಂಡದಲ್ಲಿ, ಅತಿ ಪೂರ್ವದಿಂದಲೂ ಕಾಲಕಾಲಕ್ಕೆ ಅನೇಕ ಸತ್ಪುರುಷರು, ಸಾಧುಪುರುಷರು, ಯೋಗಿಗಳು, ಮಹರ್ಷಿಗಳು ಜನ್ಮವನ್ನು ತಾಳಿ ಅಜ್ಞಾನಿ ಜನರಿಗೆ, ಸಂಸಾರಬದ್ಧ ಜನರಿಗೆ ಸತ್ಯದ ಪರಿಚಯವನ್ನು ಮಾಡಿಕೊಟ್ಟು, ಸುಖದುಃಖ ಪರಂಪರೆಯ ಸಂಸಾರದಿಂದ ಮುಕ್ತರಾಗುವ ಅನೇಕ ಉಪಾಯಗಳನ್ನು ತೋರಿಸಿ, ತಮ್ಮ ಮತ್ತು ಜಗತ್ತಿನ ಹಿತವನ್ನು ಸಾಧಿಸುವ ಮಾರ್ಗಕ್ಕೆ ಜನರನ್ನು ಹಚ್ಚುತ್ತ ಬಂದಿದ್ದಾರೆ. ಭಾರತಮಾತೆಯ ಇಂತಹ ಲೋಕೋಪಕಾರಕ ಅಧ್ಯಾತ್ಮವಿದ್ಯೆಯ ಸತ್ಪುತ್ರರಲ್ಲಿ, ಸತ್ಪುರುಷರಲ್ಲಿ ಶ್ರೀ ಅರವಿಂದರು ಒಬ್ಬರು.

ಸತ್ಪುರುಷರ ಚರಿತ್ರೆ, ಸತ್ಪುರುಷರ ಬೋಧವಚನಗಳು ಅವುಗಳನ್ನು ಓದುವ, ಕೇಳುವ, ತಿಳಿದುಕೊಳ್ಳುವ, ತಿಳಿದದ್ದನ್ನು ಆಚರಣೆಯಲ್ಲಿ ಇರಿಸುವ ಸಕಲ ಜನರನ್ನೂ ಪಾವನ ಮಾಡತಕ್ಕವುಗಳು, ಉದ್ಧಾರ ಮಾಡುವ ಸಾಮರ್ಥ್ಯವನ್ನಿಟ್ಟುಕೊಂಡವುಗಳು. ಇದಕ್ಕೆ ಕಾರಣವೇನು ? ಸತ್ಯದ ಶೋಧಕ್ಕಾಗಿ, ಸತ್ಯದ ಬೋಧಕ್ಕಾಗಿ, ಸತ್ಯದ ಅನುಭವವನ್ನು ಪಡೆಯುವದಕ್ಕಾಗಿ, ಸತ್ಯದ ಪ್ರಸಾರವನ್ನು, ಜ್ಞಾನದ ದಾನವನ್ನು ಮಾಡುವದಕ್ಕಾಗಿ, ಅವರು ತಮ್ಮ ಜೀವನವನ್ನು ಎಡೆಬಿಡದೇ ಅವ್ಯಾಹತವಾಗಿ ಅರ್ಪಿಸಿ ಸವಿಸುವದೇ ಕಾರಣ.

ಸಾಮಾನ್ಯ ಮನುಷ್ಯನು ಸುಖಪ್ರಿಯನು, ಸತ್ಯಪ್ರಿಯನಲ್ಲ. ಸತ್ಪುರುಷರು ಸತ್ಯಪ್ರಿಯರು, ಸುಖಪ್ರಿಯರಲ್ಲ. ಹಾಗಾದರೆ ಸತ್ಯದಲ್ಲಿ ಸುಖವಿಲ್ಲವೊ ? ಸತ್ಯದಲ್ಲಿ ಅನಂತಸುಖವಿದೆ, ಅಖಂಡ ಆನಂದವಿದೆ. ಆದರೆ ಸುಖದಲ್ಲಿ ಮಾತ್ರ ಅನಂತವಾದ ಸತ್ಯವಿಲ್ಲ, ಅಂದರೆ ಅನಂತ ಸತ್ಯದ ಜ್ಞಾನವಿಲ್ಲ, ಅಖಂಡವಾದ ಆನಂದವಿಲ್ಲ, ಅಜೇಯವಾದ ಸಾಮರ್ಥ್ಯವಿಲ್ಲ. ಅನ್ನವನ್ನು ಉಣ್ಣುವದರಿಂದ ಸುಖವಾಗುವದು ನಿಜ. ಅನ್ನದಲ್ಲಿ ಹಸಿವೆಯನ್ನು ಕಳೆಯುವ ನಾಶಮಾಡುವ ಗುಣವಿರುವದು ನಿಜ. ದೇಹಕ್ಕೆ ಅನ್ನವು ಪೋಷಕವಾಗಿರುವದು ನಿಜ. ಪ್ರಾಣಶಕ್ತಿಗಳಿಗೂ ಅನ್ನವು ಪೂರಕವಾಗಿರುವದು ನಿಜ. ಮನಸ್ಸಿಗೂ ಅನ್ನವು ಸಂತೋಷಕಾರಕವಾಗಿರುವದು

ನಿಜ. ಅನ್ನದಿಂದ, ಆಹಾರದಿಂದ ಮನುಷ್ಯನ ಶರೀರ, ಪ್ರಾಣ ಮತ್ತು ಮನಸ್ಸುಗಳಿಗೆ ಸುಖವಾಗುವದು ನಿಜವೇ. ಆಹಾರದಿಂದ ಬರುವ ಸುಖವು ನಿಜವಾದಮಾತ್ರಕ್ಕೇ ಆ ಸುಖದಲ್ಲಿ ಅನಂತಸತ್ಯದ ಅನುಭವವಿದೆಯೆಂದು, ಜ್ಞಾನವಿದೆಯೆಂದು ಹೇಳಲಿಕ್ಕಾಗುವದೊ? ಇಲ್ಲ. ಹಾಗಿದ್ದ ಪಕ್ಷಕ್ಕೆ ಊಟದ ಸುಖವನ್ನು ದಿನಾಲೂ ಅನುಭವಿಸುವ ಪ್ರತಿ ಒಬ್ಬನಿಗೂ ಸತ್ಯದ ಪೂರ್ಣ ಜ್ಞಾನವಾಗಬೇಕಿತ್ತು. ಹಾಗೆ ಆಗುವದೋ? ಇಲ್ಲ. ಅನ್ನವು ಉತ್ಪನ್ನವಾಗುವದಕ್ಕೆ ಕಾರಣವೇನು, ಅದು ಉತ್ಪನ್ನವಾಗುವದು ಹೇಗೆ? ಹಸಿವೆ ಆಗುವದಕ್ಕೆ ಕಾರಣವೇನು, ಅನ್ನಕ್ಕೂ ಹಸಿವೆಗೂ ಇರುವ ಸಂಬಂಧವೇನು, ಪ್ರಯೋಜನವೇನು, ಪರಿಣಾಮವೇನು? ಇವೆಲ್ಲವುಗಳ ಯಥಾರ್ಥ ಜ್ಞಾನವು ಅನ್ನದ ಸುಖವನ್ನು ಅನುಭವಿಸುವ ಸಾಮಾನ್ಯ ಜೀವಿಗೆ ಸಾಮಾನ್ಯವಾಗಿ ಆಗುವದಿಲ್ಲ. ಅನ್ನದಿಂದ ಬರುವ ಸಾಮಾನ್ಯ ಸುಖದ ನಿಜವಷ್ಟೇ, ಸತ್ಯವಷ್ಟೇ, ಸಾಮಾನ್ಯನಿಗೆ ಗೊತ್ತು. ಸತ್ಯದ ನಿಜ ಸ್ವರೂಪ, ಸತ್ಯದಲ್ಲಿದ್ದ ಸುಖ ಸಾಮಾನ್ಯ ಮನುಷ್ಯನಿಗೆ ತಿಳಿಯದೇ ಇದ್ದ ವಿಷಯವೇ. ಸತ್ಯದಲ್ಲಿ ಅನಂತಸುಖವಿದೆ, ಆದರೆ ಸುಖದಲ್ಲಿ ಅನಂತತೆಯ ಸತ್ಯವಿಲ್ಲ ಎಂದು ಹೇಳುವದರ ತಾತ್ಪರ್ಯವಿಷ್ಟೆ. ಹತ್ತು ಗಂಟೆಗೆ ಊಟ ಮಾಡುವದರಿಂದ ಬಂದ ಸುಖವು ನಾಲ್ಕು ಘಂಟೆಗೆ ಇರುವದಿಲ್ಲ. ನಾಲ್ಕು ಘಂಟೆಗೆ ಪುನಃ ಹಸಿವೆ, ಹಸಿವೆಯ ದುಃಖ ಇದ್ದೇ ಇದೆ. ಅನ್ನದಿಂದ ಬಂದ ಸುಖ ಕಾಲಾಧೀನವಾದದ್ದು, ಶಾಶ್ವತವಾದದ್ದಲ್ಲ, ಅಖಂಡವಾದದ್ದಲ್ಲ. ಅಖಂಡವಾದ ಸುಖ, ಶಾಶ್ವತವಾದ ಸುಖ, ಕಾಲಾಧೀನವಲ್ಲದ ಸುಖ, ವಿಷಯವಸ್ತುವಿಗೆ ಪರಾಧೀನವಲ್ಲದ ಸುಖವೇ ಆನಂದವು. ಆನಂದವು ಸತ್ಯದಲ್ಲಿದ್ದ ಸ್ವತಃಸಿದ್ಧವಾದ ಸುಖವು. ಆನಂದದಲ್ಲಿ ಅಖಂಡ ಸುಖವಿದೆ, ಆದರೆ ಸುಖದಲ್ಲಿ ಅಖಂಡತೆಯ ಆನಂದವಿಲ್ಲ, ಎಂದು ಅದಕ್ಕಾಗಿಯೇ ಹೇಳುವದು. ಊಟ ಮಾಡುವದರಿಂದ ಬಂದ ಸಾಮರ್ಥ್ಯವು ಆಹಾರಕ್ಕೆ ಅಧೀನವಾದದ್ದು, ಕೆಲಸ ಮಾಡುವದರಿಂದ ಕ್ಷಯವನ್ನು ಹೊಂದತಕ್ಕದ್ದು. ಅನ್ನದಿಂದ ಬಂದ ಶಕ್ತಿಗೆ ಒಂದು ಮಿತಿಯಿದೆ, ಬಲದ ಮಿತಿಯೂ ಇದೆ, ಕಾಲದ ಪರಿಮಿತಿಯೂ ಇದೆ, ವಿಷಯವಸ್ತುವಿನ ಪರಾಧೀನತೆಯೂ ಇದೆ: ಆಹಾರದಿಂದ ಬಂದ ಬಲವು ವ್ಯಯದಿಂದ ಕ್ಷಯವಾಗುವಂತಹದು, ಕಾಲವು ಗತಿಸಿದಂತೆ ನಾಶವನ್ನು ಹೊಂದತಕ್ಕದ್ದು. ಕ್ಷಯರಹಿತವಾದ, ನಾಶರಹಿತವಾದ ಶಕ್ತಿಯೇ ಅಜೇಯವಾದ ಸಾಮರ್ಥ್ಯವು. ಅಜೇಯವಾದ ಸಾಮರ್ಥ್ಯವು ಆನಂದದ ಅವಿರತವಾದ ಸಹಜಸ್ಫುರಣದಲ್ಲಿ ಸಹಜವಾಗಿಯೇ ಇದ್ದದ್ದು. ಅಜೇಯವಾದ ಸಾಮರ್ಥ್ಯದಲ್ಲಿ ಅವಿರತವಾದ ಸುಖವಿದೆ, ಆದರೆ ಸುಖದಲ್ಲಿ ಮಾತ್ರ ಅಜೇಯವಾದ ಸಾಮರ್ಥ್ಯವಿಲ್ಲ, ಎಂದು ಹೇಳುವದರ ಅರ್ಥವಿಷ್ಟೆ. ಅನ್ನದ ಪ್ರಕೃತಿದತ್ತವಾದ ಸ್ವಭಾವಸಿದ್ಧವಾದ ಗುಣದ ಪ್ರಭಾವದಿಂದ ಅನ್ನದ ಸ್ಥಿತಿ-ಗತಿಗಳು, ಅವಸ್ಥೆ ಪರಿಣಾಮಗಳು ಪ್ರಕೃತಿ-ಪರಿಸ್ಥಿತಿಗಳ ನಿಯಮಗಳಿಗನುಸಾರವಾಗಿ ಬದಲಾಗತಕ್ಕವು, ನಾಶ ಹೊಂದತಕ್ಕವು. ಇಂದು ಮಾಡಿಟ್ಟ ಅನ್ನವು ನಾಳೆಗೆ ಹಳಸುವುದು. ಇವತ್ತು ಕಾಸಿಟ್ಟ ಹಾಲು ಎರಡು ದಿನದ ಮೇಲೆ ನೋಡಿದರೆ ಕೆಟ್ಟು ಹೋಗಿರುವದು. ನಮ್ಮ ಸ್ಥೂಲದೇಹದ ಪ್ರಕೃತಿಗತ ಗುಣವೂ ಬದಲಾವಣೆಯನ್ನು ಹೊಂದುವದು, ನಾಶವಾಗುವದೇ ಆಗಿದೆ. ನಮ್ಮ ಸ್ಥೂಲದೇಹವೂ ನಶ್ವರ, ನಾವು ತಿನ್ನುವ ಅನ್ನವೂ ನಶ್ವರ. ಸ್ಥೂಲದೇಹದ ತಾಯಿತಂದೆಗಳ ಸಹಾಯದಿಂದಲೇ, ಆಧಾರ, ಆಶ್ರಯದಿಂದಲೇ, ನಮ್ಮ ಈ ಸ್ಥೂಲದೇಹದ ಉತ್ಪತ್ತಿ ಇದೆ. ಸ್ಥೂಲ ಭತ್ತದ ಸಹಾಯದಿಂದಲೇ ಅಕ್ಕಿಯ ಉತ್ಪತ್ತಿ ಅಭಿವೃದ್ಧಿ ಇದೆ. ಇದು ಎಲ್ಲರಿಗೂ ಗೊತ್ತಿದ್ದ ಮಾತೇ. ಸ್ಥೂಲ ನಶ್ವರ ದೇಹದಿಂದ ಹುಟ್ಟಿದ ನಮ್ಮ ಈ ಸ್ಥೂಲ ಶರೀರವು, ಸ್ಥೂಲ ನಶ್ವರ ಅನ್ನವನ್ನು ತಿಂದೇ ಬದುಕುವದು, ಬೆಳೆಯುವದು ಮತ್ತು ಕೊನೆಗೆ ನಾಶ ಹೊಂದುವದು. ನಾಶವಂತ ಪ್ರಕೃತಿಯ ಸಹಾಯದಿಂದ ಹುಟ್ಟಿದ ದೇಹವೂ ನಶ್ವರವೇ, ಅನ್ನವೂ ನಶ್ವರವೇ. ನಶ್ವರದಿಂದ ನಶ್ವರವಾದದ್ದೇ ಹುಟ್ಟುವದು ಸ್ವಾಭಾವಿಕವಾದದ್ದು. ನಶ್ವರದಿಂದ ಪೋಷಿತವಾದದ್ದು, ನಶ್ವರದ ಆಧಾರದ ಮೇಲೆಯೇ ನಿಂತದ್ದು ಒಂದು ದಿನ ನಾಶವಾಗಿ ಹೋಗತಕ್ಕದ್ದೇ. ಹಾಗಾದರೆ ಶಾಶ್ವತದಿಂದ ಉತ್ಪನ್ನವಾದದ್ದು, ವಿನಾಶರಹಿತವಾದ ಆಹಾರದಿಂದ ಪೋಷಿತವಾದದ್ದು, ಮರಣರಹಿತವಾದ ಅಮರ ನಿತ್ಯ ತತ್ವದ ಆಧಾರದಮೇಲೆ ನಿಂತದ್ದು, ಶಾಶ್ವತವಾಗಿ, ಅವಿನಾಶಿಯಾಗಿ, ಅಮರವಾಗಿಯೇ ನಿತ್ಯವಾಗಿಯೇ ಇರಬೇಕಲ್ಲವೇ? ನಿಸ್ಸಂಶಯವಾಗಿ ಹೌದು.

ಅಶಾಶ್ವತವಾದ ಸ್ಥೂಲ ದೇಹದ ಮತ್ತು ಸೂಕ್ಷ್ಮ ಮನಸ್ಸಿನ, ಭಾವ-ವಿಚಾರಗಳ ಉತ್ಪತ್ತಿಗೂ, ಅಸ್ತಿತ್ವಕ್ಕೂ, ನಾಶಕ್ಕೂ ಮೂಲ ಕಾರಣವು ಪ್ರಕೃತಿ. ಮೂಲ ಪ್ರಕೃತಿಯು, ಮತ್ತು ಅದೇ ಅವ್ಯಕ್ತ ಪ್ರಕೃತಿಯಲ್ಲಿ ಪ್ರಕೃತ್ಯಭಿನ್ನವಾಗಿ ಮೂರು ವಿಧವಾಗಿ ಅಭಿವ್ಯಕ್ತವಾಗುವ ಸಾಮರ್ಥ್ಯವನ್ನಿಟ್ಟುಕೊಂಡ ತ್ರಿಗುಣಗಳ, ಕ್ರಿಯಾವ್ಯಾಪಾರದ ಪರಿಣಾಮವೇ ನಮಗೆ ಕಂಡುಬರುವ ಸ್ಥೂಲ-ಸೂಕ್ಷ್ಮ ಪ್ರಪಂಚಗಳು. ನಮ್ಮ ಸ್ಥೂಲ-ಸೂಕ್ಷ್ಮ ಶರೀರದ ಉತ್ಪತ್ತಿಗೂ, ನಮ್ಮ ಸುತ್ತುಮುತ್ತಲಿರುವ ಸ್ಥೂಲ-ಸೂಕ್ಷ್ಮ ವಸ್ತುಗಳ ಉತ್ಪತ್ತಿಗೂ, ಸ್ಥೂಲ-ಸೂಕ್ಷ್ಮ ಲೋಕಗಳ ರಚನೆ ವ್ಯವಹಾರಗಳಿಗೂ, ಮೂಲ ಕಾರಣವು ಮೂಲ ಪ್ರಕೃತಿಯೇ. ಮೂಲ ಪ್ರಕೃತಿಯ ಸತ್ವ, ರಜ, ತಮೋರೂಪಿಯಾದ ಮೂರು ಗುಣಗಳ ಕ್ರಿಯೆಯೇ ಕಾರಣವು. ಹದಿನಾಲ್ಕು ಲೋಕಗಳ, ಎಂಭತ್ತುನಾಲ್ಕು ಲಕ್ಷ ಯೋನಿಗಳ ಕ್ರಿಯಾವ್ಯಾಪಾರಗಳು, ಜೀವನ ವ್ಯವಹಾರವು ಈ ಮೂಲ ಪ್ರಕೃತಿಯ ಅಸ್ತಿತ್ವವನ್ನೇ ಅವಲಂಬಿಸಿವೆ, ಈ ತ್ರಿಗುಣಗಳ ಕ್ರಿಯಾಧೀನವೇ ಆಗಿವೆ.

ಅತಿ ಸೂಕ್ಷ್ಮವಾದ ಬುದ್ಧಿಯಿಂದ ಮೊದಲು ಮಾಡಿಕೊಂಡು ಅತಿ ಸ್ಥೂಲವಾದ ಜಡವಾದ ಕಲ್ಲು ಮಣ್ಣುಗಳ ವರೆಗೆ, ಎಲ್ಲವೂ ಮೂಲ ಪ್ರಕೃತಿಯಿಂದ ಉತ್ಪನ್ನವಾದ ತತ್ವಗಳೇ, ಅಂತಃಕರಣಗಳೇ, ಇಂದಿಯಗಳೇ, ವಸ್ತುವಿಷಯಗಳೇ. ಸ್ಥೂಲವೇ ಆಗಲಿ, ಸೂಕ್ಷ್ಮವೇ ಆಗಲಿ, ಇವೆಲ್ಲವುಗಳ ಅನುಭವ ಆಗುವದು ಯಾರಿಗೆ? ಪುರುಷನಿಗೆ. ನೀರಡಿಕೆ ಆದಾಗ ನೀರು ಕುಡಿದರೆ ಸುಖವೆನಿಸುವದು, ಕಾಲಿಗೆ ಮುಳ್ಳು ಚುಚ್ಚಿದಾಗ ದುಃಖವೆನಿಸುವದು. ಯಾರಿಗೆ? ಪುರುಷನಿಗೆ. ಪರೀಕ್ಷೆಯಲ್ಲಿ ಪಾಸಾದ ಸುದ್ದಿಯು ತಿಳಿಯಿತು, ಹರ್ಷವಾಯಿತು. ಹರ್ಷವೆನಿಸಿದ್ದು ಯಾರಿಗೆ? ಪುರುಷನಿಗೆ. ತಾಯಿಯು ಸತ್ತು ಹೋದ ತಾರು ಬಂತು. ಬಹಳ ಶೋಕವಾಯಿತು. ಶೋಕವೆನಿಸಿದ್ದು ಯಾರಿಗೆ? ಪುರುಷನಿಗೆ. ಸುಖದುಃಖ, ಶೋಕ ಹರ್ಷಗಳ ಅನುಭವ ಬಂದದ್ದು, ಅನಿಸಿದ್ದು ಯಾರಿಗೆ? ಪುರುಷನಿಗೆ. ಇಲ್ಲಿ ಪುರುಷ ಶಬ್ದವು ಲಿಂಗವಾಚಕವಲ್ಲ. ಗಂಡಸು-ಹೆಂಗಸು ಎಂಬ ಭೇದವರ್ಶಕವಲ್ಲ. ಸುಖ ದುಃಖದ ಅನುಭವ ಯಾವದಕ್ಕೆ ಬರುವದೋ ಅದು ಪುರುಷ. ಗಂಡಸಿಗೂ ದುಃಖದ ಅನುಭವ ಇದೆ, ಹೆಂಗಸಿಗೂ ಇದೆ, ಹುಡುಗರಿಗೂ ಇದೆ, ಪಶುಪಕ್ಷಿಗಳಿಗೂ ಇದೆ. ಪುರುಷನ ಅಸ್ತಿತ್ವ ಇಲ್ಲವಲ್ಲಿ ಸುಖದುಃಖದ ಅನುಭವ ಇಲ್ಲ. ಸುಖದುಃಖದ ಅನುಭವ ಎಲ್ಲ ಸಾಮಾನ್ಯ ಮನುಷ್ಯರಿಗೆ ಇದೆ. ಆದರೆ ಸುಖದುಃಖವನ್ನು ಅನುಭವಿಸುವ ಪುರುಷನ ನಿಜಸ್ವರೂಪದ ಜ್ಞಾನವು ಸಾಮಾನ್ಯ ಮನುಷ್ಯನಿಗೆ ಸಾಮಾನ್ಯವಾಗಿ ಇಲ್ಲ. ಯಾಕೆ? ಯಾಕಂದರೆ ಸಾಮಾನ್ಯ ಮನುಷ್ಯನು ಸಾಮಾನ್ಯವಾಗಿ ಬಹಿರ್ಮುಖವೃತ್ತಿ ಇದ್ದವನು, ಸ್ಥೂಲ ದೃಷ್ಟಿ ಉಳ್ಳವನು, ಜಡವಾದ ವಿಷಯವಸ್ತುಗಳ ಭೋಗದಲ್ಲಿ ತಲ್ಲೀನನಾದ ಅವನ ಬುದ್ಧಿಯೂ ಜಡಪ್ರಧಾನವೇ ಆಗಿರುವದು. ಸೂಕ್ಷ್ಮವಿಚಾರ, ಅತಿಸೂಕ್ಷ್ಮವಿಮರ್ಶೆ, ಮನಸ್ಸು ಅಂತರ್ಮುಖವನ್ನಾಗಿ ಮಾಡುವ ಅಭ್ಯಾಸ, ಸಾಮಾನ್ಯ ಮನುಷ್ಯನಿಗೆ ಸಾಮಾನ್ಯವಾಗಿ ಇಲ್ಲದಿರುವದೇ ಇದರ ಕಾರಣ. ಸೂಕ್ಷ್ಮವಿಚಾರವೇ ಆಗಲಿ, ಸಯಥಾರ್ಥ ವಿಮರ್ಶೆಯೇ ಆಗಲಿ, ಬಾ ಅಂದಕೂಡಲೇ ಬರುವ ವಿಷಯವೇ? ಎಂದಿಗೂ ಅಲ್ಲ. ಸುವಿಚಾರ ಬುದ್ಧಿಯ ಸದ್ವಿಮರ್ಶೆಯ ಶಕ್ತಿಯು ಬರಬೇಕಾದರೆ, ಪುರುಷನ ನಿಜಸ್ವರೂಪದ ಜ್ಞಾನವು ಆಗಬೇಕಾದರೆ ಸಯುಕ್ತಿಕವಾದ ಅವಿಶ್ರಾಂತ ಸಾಧನೆ ಬೇಕು, ಸತ್‌ಶ್ರದ್ಧೆ ಬೇಕು, ಸತ್ಸಂಗ ಬೇಕು. ಆಗಲೇ ಹುಟ್ಟಿದ ಮಗುವು ಉಸಿರಾಡಿಸುವದಕ್ಕೂ ತಾಯಿಯ ಮೊಲೆಯಿಂದ ಹಾಲು ಕುಡಿಯುವದಕ್ಕೂ ಕಲಿಯುವದಕ್ಕಾಗಿ ಯಾವ ಸಾಧನೆಯನ್ನಾದರೂ ಮಾಡಬೇಕಾಗುವದೊ? ಯಾವ ಸಾಲೆ ಕಾಲೇಜುಗಳಿಗಾದರೂ ಹೋಗಿ ಕಲಿಯಬೇಕಾಗುವದೊ? ಇಲ್ಲ. ಯಾಕೆ? ಉಸಿರಾಡಿಸುವದು, ಊಟಮಾಡುವದು, ಮಲಗುವದು, ಮಲಮೂತ್ರವಿಸರ್ಜನ ಮಾಡುವದು, ಈ ಕ್ರಿಯೆಗಳು ಮಗುವಿಗೆ ನೈಸರ್ಗಿಕವಾಗಿ ಸ್ವಭಾವಗತವಾಗಿ ಬಂದ ಗುಣಗಳು. ಅನೇಕ ಜನ್ಮಗಳ ದೀರ್ಘಕಾಲದ ಅನುಭವ ಅಭ್ಯಾಸಗಳ ಪರಿಣಾಮವಾಗಿ ಯಾವ ಗುಣಗಳು ಎಲ್ಲ ಮನುಷ್ಯರಲ್ಲಿಯೂ ಯಾವ ಸಾಧನೆಯಿಲ್ಲದೇ, ಪ್ರಯಾಸ ತಡೆ ತೊಂದರೆಗಳಿಲ್ಲದೆ ಕಂಡುಬರುವವೊ ಅವು ನೈಸರ್ಗಿಕವಾಗಿ ಬಂದ ಗುಣಗಳು. ಆಹಾರ, ನಿದ್ರಾ, ಭಯ,

ಮೈಥುನಾದಿ ಕ್ರಿಯೆಗಳು, ನೈಸರ್ಗಿಕವಾಗಿ ಬಂದ ಗುಣಗಳ ವರ್ಗಕ್ಕೇ ಸೇರಿದವುಗಳು. ಒಬ್ಬ ಮನುಷ್ಯನು ಹುಟ್ಟಿದಾಗಿನಿಂದ ಶೀಘ್ರಕೋಪಿಯಾಗಿರುವನು, ಇನ್ನೊಬ್ಬನು ದಯಾರ್ದ್ರಹೃದಯದವನಿರುವನು, ಮತ್ತೊಬ್ಬನು ಅತಿ ಜಿಪುಣನಾಗಿರುವನು. ಒಬ್ಬನಿಗೆ ಸಂಗೀತವಲ್ಲಿ ಅಭಿರುಚಿ ಇದ್ದರೆ, ಇನ್ನೊಬ್ಬನಿಗೆ ಗಣಿತದಲ್ಲಿ. ವಿಶೇಷ ಶ್ರಮವಿಲ್ಲದೆ ವಿಶಿಷ್ಟವಾಗಿ ಕಂಡುಬರುವ ಈ ಗುಣಗಳು ಅವರವರ ಸ್ವಭಾವವನ್ನು ಅವಲಂಬಿಸಿವೆ. ನೈಸರ್ಗಿಕವಾದ ಗುಣಗಳು ಇಡೀ ವರ್ಗಕ್ಕೇ ಸೇರಿದವುಗಳು. ಸ್ವಾಭಾವಿಕವಾದ ಗುಣಗಳು ಒಬ್ಬೊಬ್ಬ ವ್ಯಕ್ತಿಗೆ ಸಂಬಂಧಪಟ್ಟವುಗಳು. ನೈಸರ್ಗಿಕವಾದ ಗುಣಗಳೇ ಆಗಲಿ ಸ್ವಾಭಾವಿಕವಾದ ಗುಣಗಳೇ ಆಗಲಿ, ಎರಡಕ್ಕೂ ಪೂರ್ವಾಭ್ಯಾಸ, ಪುನಃಪುನರಾನುಭವಗಳೇ ಕಾರಣ.

ಸಾಮಾನ್ಯ ಮನುಷ್ಯನು, ಪುರುಷನೇ ಆಗಲಿ ಸ್ತ್ರೀಯೇ ಆಗಲಿ, ಸಾಮಾನ್ಯವಾಗಿ ಸುಖದುಃಖಗಳ ವಶದಲ್ಲಿದ್ದವನು, ರಾಗದ್ವೇಷಗಳ ಅಧೀನತೆಗೆ ಒಳಪಟ್ಟವನು, ಸ್ಥೂಲ ಲಾಭ-ಹಾನಿಗಳ ದೃಷ್ಟಿಯನ್ನು ಇಟ್ಟುಕೊಂಡವನು, ಅನುಕೂಲತೆಯಲ್ಲಿ ಉತ್ತೇಜನ-ಉತ್ಸಾಹಗಳನ್ನೂ, ಪ್ರತಿಕೂಲತೆಯಲ್ಲಿ ಉದ್ವಿಗ್ನತೆ-ವಿಷಾದಗಳನ್ನೂ ಹೊಂದತಕ್ಕವನು. ಇಂತಹ ಸಾಮಾನ್ಯ ಸ್ತ್ರೀ-ಪುರುಷರಿಗೆ, ಶುದ್ಧವಾದ-ನಿತ್ಯವಾದ, ಏಕವಾದ, " ಸದ್‌ಘನಂ ಚಿದ್‌ಘನಂ ನಿತ್ಯಂ। ಆನಂದಘನಮವ್ಯಯಂ ॥" ಸಚ್ಚಿದಾನಂದ ಚೈತನ್ಯದಲ್ಲಿ ನಮ್ಮ ಒಳಹೊರಗಿನ ಸ್ಥೂಲ-ಸೂಕ್ಷ್ಮ ಪ್ರಪಂಚದ, ಸೃಷ್ಟಿಯ ರಚನೆಯು ಯಾಕೆ ಉತ್ಪನ್ನವಾಯಿತು, ಹೇಗೆ ಉತ್ಪನ್ನವಾಯಿತು, ಅದರ ಗುಪ್ತ ರಹಸ್ಯವು ಏನು, ತತ್ವಗಳು ನಿಯಮಗಳು ಯಾವವು – ಇತ್ಯಾದಿ ಪ್ರಶ್ನೆಗಳ ಯಥಾರ್ಥ ಜ್ಞಾನವಂತೂ ಇರಲಿ, ಕೊನೆಗೆ ಇವುಗಳನ್ನು ತಿಳಿದುಕೊಳ್ಳುವ ನಿಜವಾದ ಸತ್ಯದ ಹಸಿವು (ಇದಕ್ಕೇ ಜಿಜ್ಞಾಸೆ ಎನ್ನುವರು) ಸಾಮಾನ್ಯವಾಗಿ ಕಂಡುಬರುವದಿಲ್ಲ. ಅಜ್ಞಾನದಲ್ಲಿಯೇ ಯಾವನಿಗೆ ತೃಪ್ತಿ ಇದೆಯೋ ಅವನಲ್ಲಿ ಜ್ಞಾನಕ್ಕಾಗಿ ಉತ್ಕಟವಾದ ಇಚ್ಛೆಯ ಉದಯವಾಗುವದು ಅಸಂಭವ. ಅಜ್ಞಾನದ ನಿಜವಾದ ಅತೃಪ್ತಿಯಲ್ಲಿಯೇ, ಅಪೂರ್ಣತೆಯ ಅಸಂತುಷ್ಟಿಯಲ್ಲಿಯೇ, ಅಸತ್ಯದ ಅಸಹನತೆಯಲ್ಲಿಯೇ, ಮಿಥ್ಯಾಜ್ಞಾನದ ತಿರಸ್ಕಾರದಲ್ಲಿಯೇ, ಜ್ಞಾನಾಭಿಲಾಷೆಯ ಮೂಲವು — ಜಿಜ್ಞಾಸೆಯು ಹುಟ್ಟುವದು, ಹುಟ್ಟಿ ಬೆಳೆದು ವೃದ್ಧಿಯನ್ನು ಹೊಂದುವದು. ಜ್ಞಾನದ ಸಿದ್ಧಿಯು, ಸತ್ಯದ ಪೂರ್ಣ ಬೋಧ. ಸಂಪೂರ್ಣ ಅನುಭವವು ಒಂದು ದಿವಸದಲ್ಲಿ ಆಗುವ ವಿಷಯವಲ್ಲ, ಸತ್ಯಜ್ಞಾನದ ನಿತ್ಯ ಅನುಭವಕ್ಕಾಗಿ, ಅಜ್ಞಾನದ ಅವಿವೇಕದಿಂದ ಮುಕ್ತರಾಗುವದಕ್ಕಾಗಿ, ಜನ್ಮ-ಜನ್ಮಾಂತರಗಳ ಸಿದ್ಧಿಯು ಬೇಕು, ತತ್ಪರತೆಯು — ಏಕನಿಷ್ಠತೆಯು ಯೋಗವು ಬೇಕು, ಪ್ರತಿಕೂಲತೆಯಿಂದ ಎದೆಗುಂದದ ಧೈರ್ಯವು ಬೇಕು, ಧ್ಯೇಯಾನುಸಂಧಾನದ ಸತತ ಸಾಧನೆಯು ಬೇಕು.

ಸಾಮಾನ್ಯಮನುಷ್ಯನ ಜೀವನಕ್ರಮಕ್ಕೂ ಸಾಧಕನ ಜೀವನಕ್ರಮಕ್ಕೂ ಅಜಗಜಾಂತರವಿದೆ. ಸಾಮಾನ್ಯ ಮನುಷ್ಯನಿಗೆ ಸಾಧಾರಣವಾಗಿ ಯಾವ ವಿಶಿಷ್ಟ ಧ್ಯೇಯವೂ ಇರುವದಿಲ್ಲ: ತಾನು ಸೇರಿದ ವರ್ಗಕ್ಕೆ ಒಪ್ಪಿದ ರೀತಿಯಲ್ಲಿ ಜೀವಿಸುತ್ತ, ಸಾಧ್ಯವಾದರೆ ನಾಲ್ಕು ಜನರಿಗಿಂತ ಸ್ವಲ್ಪ ಹೆಚ್ಚಿನ ಧನ–ಮಾನ–ಪ್ರತಿಷ್ಠೆಯನ್ನು ಗಳಿಸುವದೇ ಅವನ ಜೀವನದ ಧೋರಣೆ. ಇವಾದರೂ ಎಲ್ಲರಿಗೂ ಸಾಧ್ಯವಾಗುವವೊ ? ಇಲ್ಲ. ಇವು ದೊರಕದೇ ಹೋದ ಪಕ್ಷದಲ್ಲಿ ದೈವದ ಮೇಲೆ ಅನುಕೂಲ-ಪ್ರತಿಕೂಲತೆಯ ಆರೋಪವನ್ನು ಹೊರಿಸಿ ಸಮಾಧಾನ ಹಚ್ಚಿಕೊಳ್ಳುವದೇ ಸಾಮಾನ್ಯ ಜೀವಿಯ ಸ್ವಭಾವ. ಐಹಿಕ ಭೋಗಸಾಮಗ್ರಿಗಳ ವಿಪುಲ ಸಂಪತ್ತಿ ಇದ್ದ ಸಾಮಾನ್ಯ ಮನುಷ್ಯನೇ ಆಗಲಿ, ಅಥವಾ ಇವಿಲ್ಲದ ಶತದರಿದ್ರ ಸಾಮಾನ್ಯ ಮನುಷ್ಯನೇ ಆಗಲಿ,ಇಬ್ಬರಿಗೂ ಭೋಗದ ಆಶೆಯು ಬಿಟ್ಟಿಲ್ಲ; ಆಶೆಯ ನಿಜ ಸ್ವರೂಪವನ್ನು ತಿಳಿದುಕೊಳ್ಳುವ,ತಿಳಿದುಕೊಂಡು ಅದನ್ನು ಬಿಟ್ಟುಬಿಡುವ ಇಚ್ಛೆ-ಪ್ರಯತ್ನಗಳು ಇಬ್ಬರಲ್ಲಿಯೂ ಇಲ್ಲ. ಧನಿಕರು ತೃಪ್ತಿಯಿಂದ ಆಶೆಯ ಪಾಶದಲ್ಲಿ ಸಿಕ್ಕುಬಿದ್ದರೆ, ದರಿದ್ರನು ಅತೃಪ್ತಿಯಿಂದ ಆಶೆಯ ಜಾಲದಲ್ಲಿ ಬದ್ಧನಾಗುವನು. ಇಬ್ಬರಿಗೂ ವಿಷಯವಸ್ತುಗಳಿಗೆ ಅಧೀನವಲ್ಲದ, ಸ್ವತಂತ್ರವಾದ

ಶಾಶ್ವತವಾದ, ತಮ್ಮ ಹೃದಯದಲ್ಲಿಯೇ ಸ್ಥಿತವಾದ ಚೈತನ್ಯದ ಅಪಾರವಾದ ಆನಂದದ, ಶಾಂತಿಯ ಕಲ್ಪನೆಯಾಗಲಿ, ಅನುಭವವಾಗಲಿ ಇಲ್ಲ.

"ಸಂತ್ಯಜ್ಯ ಹೃದ್ಗುಹೇಶಾನಂ ದೇವಮನ್ಯಂ ಪ್ರಯಾಂತಿ ಯೇ। ತೇ ರತ್ನಮಭಿವಾಂಛಂತಿ ತ್ಯಕ್ತ್ವಹಸ್ತಸ್ಥಕೌಸ್ತುಭಾಃ॥" ಹೃದಯದ ಗುಹೆಯಲ್ಲಿ ವಾಸಿಸುವ ಸರ್ವೇಶ್ವರನನ್ನು ತ್ಯಜಿಸಿ, ಬೇರೆ ದೇವತೆಗಳಿಂದ ಶಾಶ್ವತವಾದ ಶಾಂತಿ, ಅಪಾರವಾದ ಆನಂದ, ಅನಂತವಾದ ಜ್ಞಾನ, ಅಜೇಯವಾದ ಶಕ್ತಿಗಳನ್ನು ಅಪೇಕ್ಷಿಸುವ ಮನುಷ್ಯನು, ಕೈಯಲ್ಲಿದ್ದ ಕೌಸ್ತುಭ ಚಿಂತಾಮಣಿಯನ್ನು ಬಿಸಾಟಿಬಿಟ್ಟು, ಕ್ಷುದ್ರ ರತ್ನಮಣಿಯನ್ನು ಹುಡುಕುತ್ತ ಹೊರಟ ಮೂರ್ಖನಂತೆಯೇ ಸರಿ.(ಸಿದ್ಧಗೀತಾ) ನಮ್ಮ ಹೃದಯದಲ್ಲಿದ್ದ ಸರ್ವೇಶ್ವರನೊಬ್ಬ ಬೇರೆ, ಇತರರ ಹೃದಯದಲ್ಲಿದ್ದ ಸರ್ವೇಶ್ವರನೊಬ್ಬ ಬೇರೆ ಅಲ್ಲ. ಶುದ್ಧ ಸಚ್ಚಿದಾನಂದ ಚೈತನ್ಯದ ಅನುಭವವು ಮೊದಲು ಎಲ್ಲಿ ಆಗುವದೋ ಅದಕ್ಕೇ ಹೃದಯದ ಗುಹೆಯೆಂದು ಹೇಳಿರುವರು. ಸಾಮಾನ್ಯ ಮನುಷ್ಯನಿಗೆ ಸಾಮಾನ್ಯ ಸುಖದುಃಖಗಳನ್ನು ಅನುಭವಿಸುವ ಸಾಮಾನ್ಯ ಹೃದಯದ ಪರಿಚಯವಿದೆ. ಆತ್ಮಾನುಭವದ, ಸರ್ವಭೂತಾಂತರಾತ್ಮಾನುಭವದ, ಮೂಲವಾದ ಹೃದಯಗುಹೆಯ ಪರಿಚಯವೂ ಅವನಿಗಿಲ್ಲ, ಅನುಭವವೂ ಇಲ್ಲ, ಸಾಧನೆಯೂ ಇಲ್ಲ. ಹಸಿವೆಯ ಅನುಭವವು, ಹಸಿವೆಯ ಒತ್ತಾಯವು ಹೇಗೆ ನಿಸರ್ಗದ ನಿಯಮಗಳಿಗಧೀನನಾದ ಮನುಷ್ಯನಿಗೆ ಸಹಜವೋ, ಹಾಗೆ ಯಾವಾಗ ಆತ್ಮ-ಪರಮಾತ್ಮಾನುಭವದ ಹಸಿವೆ, ಒತ್ತಾಯವು ಬಲವತ್ತರವಾಗಿ ಸಹಜವಾಗುವದೋ, ಆಗ ಮನುಷ್ಯನಲ್ಲಿ ಅಧ್ಯಾತ್ಮಸಾಧನೆಯ ವಿಷಯವಾಗಿ ವಿಚಾರ ಆಚಾರಗಳ ಅಂಕುರವು ಹುಟ್ಟುವದು ಸಹಜ. ಮತ್ತು ಈ ಅಧ್ಯಾತ್ಮದ ಅಂಕುರಕ್ಕೆ ಯಾವ ಪ್ರಕಾರದ ಶ್ರದ್ಧೆಯ ಬೆಂಬಲವು, ವಿಶ್ವಾಸದ ಗೊಬ್ಬರವು, ಸಾಧನೆಯ ನೀರು, ಪರಮಾತ್ಮನ ಕೃಪಾಕಿರಣದ ಸಹಾಯ, ಸದ್ಗುರು ಸತ್ಸಂಗದ ಆಶೀರ್ವಾದರಕ್ಷಣೆ ದೊರಕುವವೋ ಆ ಪ್ರಕಾರವಾಗಿ ಅದು ಅಭಿವೃದ್ಧಿಯನ್ನು ಹೊಂದಿ,ಅನೇಕ ಮಂಗಳಮಯ ಕಲ್ಯಾಣಮಯ ಫಲಗಳನ್ನು ಕೊಡುವದು. ಶ್ರದ್ಧೆಯ ಆಧಾರವೇ ಎಲ್ಲಿ ಇಲ್ಲವೊ ಅಲ್ಲಿ ಅಧ್ಯಾತ್ಮಸಾಧನೆಯ ಬೀಜವು ಕಲ್ಲಿನ ಮೇಲೆ ಎಸೆದ ಬೀಜದಂತೆಯೇ ಸರಿ. ಕಲ್ಲಿನ ಮೇಲೆ ಬಿದ್ದ ಬೀಜವು ಪ್ರತಿಕೂಲತೆಯ ಗಾಳಿಯಿಂದ ಸ್ಥಾನಭ್ರಷ್ಟವಾಗುವದು, ಸಂಶಯದ ಉಷ್ಣತೆಯಿಂದ ದಗ್ಧವಾಗಿ ತನ್ನ ಗರ್ಭದಲ್ಲಿದ್ದ ಸಚೇತನತೆಯನ್ನು ಕಳೆದುಕೊಂಡು ನಿರ್ಜೀವವಾದ, ಜಡವಾದ, ವೃದ್ಧಿ ಇಲ್ಲದ ತುಚ್ಛ ಶವರೂಪೀ ಬೀಜವೂ ಆಗುವದು. ಶ್ರದ್ಧೆಯ ಆಧಾರವು ಎಷ್ಟು ಅವಶ್ಯವೊ ಅಷ್ಟೇ ವಿಶ್ವಾಸದ ಪೋಷಣೆಯೂ ಅಗತ್ಯ. "ಭವಾನೀಶಂಕರೌ ವಂದೇ ಶ್ರದ್ಧಾವಿಶ್ವಾಸರೂಪಿಣೌ। ಯಾಭ್ಯಾಂ ವಿನಾ ನ ಪಶ್ಯಂತಿ ಸಿದ್ಧಾಃ ಸ್ವಾಂತಸ್ಥಮೀಶ್ವರಮ್॥" (ಶ್ರದ್ಧಾ ವಿಶ್ವಾಸರೂಪವೇ ಆದ ಭವಾನೀ ಶಂಕರರನ್ನು ನಮಸ್ಕರಿಸುವೆನು. ಇವರ ಪ್ರಸಾದ-ಆಶೀರ್ವಾದಗಳ ಸಹಾಯವಿಲ್ಲದೇ ಸಿದ್ಧಪುರುಷರಿಗೂ ಕೂಡಾ ಹೃದಯದಲ್ಲಿದ್ದ ಈಶ್ವರನನ್ನು ಸಾಕ್ಷಾತ್ಕರಿಸಲಿಕ್ಕೆ ಸಾಧ್ಯವಾಗುವದಿಲ್ಲ.) ಪರಾದೇವಿಯ ಪರಿಶುದ್ಧವಾದ, ಅಜೇಯವಾದ, ಅಚಲವಾದ ಸಮರ್ಥಶಕ್ತಿಸ್ವರೂಪವೇ ಶ್ರದ್ಧೆ. ಪರಮೇಶ್ವರನ ಸುನಿರ್ಮಲವಾದ, ಪರಮಾರ್ಥದಾಯಕವಾದ ಪ್ರಜ್ಞಾಯುಕ್ತವಾದ ಪ್ರಕಾಶದ ಜ್ಞಾನಸ್ವರೂಪವೇ ವಿಶ್ವಾಸ. ಶ್ರದ್ಧಾವಿಶ್ವಾಸಗಳಷ್ಟೇ ಅವಶ್ಯಕತೆ ಸಾಧನೆಯ ಜಲಕ್ಕೂ, ಪರಮಾತ್ಮನ ಕೃಪಾನುಗ್ರಹಕ್ಕೂ, ಸದ್ಗುರುವಿನ ಆಶೀರ್ವಾದಕ್ಕೂ, ಸತ್ಸಂಗದ ಉತ್ತೇಜನ ರಕ್ಷಣೆಗಳಿಗೂ ಇದೆ. ಇವುಗಳಲ್ಲಿ ಯಾವುದರಲ್ಲಿಯೂ ಲೋಪದೋಷಗಳು ಬರದಂತೆ ಎಚ್ಚರವನ್ನಿಟ್ಟುಕೊಂಡು ಮುಂದೆ ಸಾಗುವದೇ ಸಾಧಕನು ಪಾಲಿಸಬೇಕಾದ ಯುಕ್ತಿ.

ಭೇದರಹಿತವಾದ, ದೇಶ ಕಾಲಗಳಿಗತೀತವಾದ ಸತ್ಯವು ಶುದ್ಧ ಸತ್ಯವೇ. ಇದರ ಶುದ್ಧ ಪೂರ್ಣಾನುಭವವನ್ನು ಸೂಚಿಸುವದಕ್ಕಾಗಿಯೇ "ಏಕಮೇವಾದ್ವಯಂ ಬ್ರಹ್ಮ, ನೇಹ ನಾನಾಸ್ತಿ ಕಿಂಚನ" ಎಂದು ಹೇಳಿರುವದು. ಈ ಏಕಸತ್ಯದ ವರ್ಣನೆಯನ್ನೇ ವಿಪ್ರರು ಅನೇಕ ರೀತಿಯಲ್ಲಿ ಇತರರಿಗೆ ಸುಲಭವಾಗಿ ತಿಳಿಸುವದಕ್ಕೋಸ್ಕರವಾಗಿ ಅನೇಕ ಶಬ್ದಗಳಲ್ಲಿ ಮಾಡುವರು: "ಏಕಂ ಸತ್ ವಿಪ್ರಾಃ ಬಹುಧಾ ವದಂತಿ." ಸತ್ಯದ

ವಿಮರ್ಶೆಯ ಜ್ಞಾನವೇ ವಿಜ್ಞಾನ. ಸತ್ಯದ, ಸಚ್ಚಿದಾನಂದದ ಪ್ರಕಾಶಾನುಭವದ ಜ್ಞಾನವೇ ಪ್ರಜ್ಞಾನ. ವಿಜ್ಞಾನ ಮತ್ತು ಪ್ರಜ್ಞಾನ ಇವೆರಡೂ ಯಾವನಲ್ಲಿ ಪರಿಪೂರ್ಣವಾಗಿ ತುಂಬಿತುಳುಕುತ್ತಿರುವವೋ ಅವನೇ ನಿಜವಾದ ವಿಪ್ರ.

ಜಡವಸ್ತುವಿನ ವಿಮರ್ಶೆಗೆ, ವಿಭಜನೆಗೆ ಯೋಗ್ಯ ಉಪಕರಣಗಳ ಆವಶ್ಯಕತೆ ಇದೆ. ಉಪ್ಪಿನಲ್ಲಿ ಬೆರೆತಿರುವ ಸೋಡಿಯಮ್ ಮತ್ತು ಕ್ಲೋರೀನ ಇವುಗಳ ಪೃಥಕ್ಕರಣವನ್ನು ಯೋಗ್ಯ ರಸಾಯನಶಾಲೆಯ ಉಪಕರಣ ಸಾಮಗ್ರಿಗಳ ಸಹಾಯವಿಲ್ಲದೇ ಮಾಡುವದು ಶಕ್ಯವಿಲ್ಲ. ಉಪ್ಪಿನ ಪೃಥಕ್ಕರಣವನ್ನು ಮಾಡುವದು ಎಲ್ಲರಿಗೂ ಸಾಧ್ಯವೊ ? ಇಲ್ಲ. ರಸಾಯನಶಾಸ್ತ್ರದ ಜ್ಞಾನವೂ ಬೇಕು. ರಸಾಯನಶಾಲೆಯ ಉಪಕರಣಗಳೂ ಬೇಕು. ಜಡವಸ್ತುವಿನ ವಿಮರ್ಶೆಯೇ, ವಿಭಜನೆಯೇ ಎಲ್ಲರಿಗೂ ಸಾಧ್ಯವಲ್ಲದಿರುವಾಗ, ಸಚೇತನವಾದ ಸತ್ಯದ ವಿಮರ್ಶೆಯು ಎದ್ದುಬಿದ್ದವರೆಲ್ಲರಿಗೂ ಸಾಧ್ಯವೊ ? ಸುತರಾಂ ಇಲ್ಲ. ಜಡವಸ್ತುವಿನ ವಿಮರ್ಶೆಗೆ ಯೋಗ್ಯ ಉಪಕರಣಗಳ ಆವಶ್ಯಕತೆ ಇದ್ದಂತೆ, ಸತ್ಯದ ವಿಮರ್ಶೆಗಳಿಗೆ ಶುದ್ಧವಾದ ನಿರ್ಮಲ ಅಂತಃಕರಣದ ಅಗತ್ಯವಿದೆ, ಅಧ್ಯಾತ್ಮಶಾಸ್ತ್ರದ ಸ್ಪಷ್ಟಜ್ಞಾನದ ಆವಶ್ಯಕತೆ ಇದೆ, ಸತ್ಯದ ಸಂಯೋಗ-ವಿಯೋಗಾನುಭವಗಳ ಕಾರಣ ಮತ್ತು ಅವುಗಳನ್ನು ಸಾಧಿಸುವ ಯೋಗದ ರೀತಿ, ಉಪಯೋಗದ ನೀತಿಗಳನ್ನು ಕಲಿಯುವದು ಅನಿವಾರ್ಯವಿದೆ.

ತಮ್ಮ ಸತ್ಯನಿಷ್ಠೆ, ಸತ್‌ಶ್ರದ್ಧೆ, ಆತ್ಮವಿಶ್ವಾಸ, ಪರಮಾತ್ಮಸಮರ್ಪಣೆ, ಆಶಾತ್ಯಾಗಗಳಿಂದ ಚಿತ್ತಶುದ್ಧಿಯನ್ನು ಹೇಗೆ ಸುಲಭವಾಗಿ ಪ್ರಾಪ್ತಮಾಡಿಕೊಳ್ಳಬಹುದು ಎಂಬುದನ್ನು ವಿಪ್ರವರ್ಯ ಯೋಗೀ ಅರವಿಂದರ ಜೀವನದಿಂದ ನಾವು ತಿಳಿದುಕೊಳ್ಳಬಹುದು.

ಅಂಧಾನುಕರಣದಿಂದ ಗಿಳಿಯಂತೆ ಶಾಸ್ತ್ರಗಳ ಸಾಂಪ್ರದಾಯಿಕ ಅರ್ಥವನ್ನು ಪಠಿಸುವದು ಸತ್ಯದ ವಿಮರ್ಶೆಯೂ ಅಲ್ಲ, ಜ್ಞಾನವನ್ನು ಸಾಧಿಸುವ ಮಾರ್ಗವೂ ಅಲ್ಲ. ಶುದ್ಧ ಅಂತಃಕರಣದಲ್ಲಿ ಸತ್ಯದ ಅನುಭವದಿಂದ ಉದ್ಭವಿಸಿದ ಅಂತಃಸ್ಫುರಣವೇ ಸತ್ಯದ ಸತ್ಯವಾದ ಸಮರ್ಥವಾದ ವಿಮರ್ಶೆಯನ್ನು, ಜ್ಞಾನವನ್ನು ಸಾಧಿಸಬಲ್ಲದು. ತಮ್ಮ "ಜೀವನ ಪರಮಾರ್ಥ" (The Life Divine) ಎಂಬ ಪುಸ್ತಕದಲ್ಲಿ ಶ್ರೀ ಅರವಿಂದರು ಸಹೇತುಕವಾಗಿ, ಸಯುಕ್ತಿಕವಾಗಿ, ತಮ್ಮ ವಿಶಿಷ್ಟಾನುಭವಗಳ ಅಂತಃಸ್ಫುರಣದ ಪ್ರೇರಣೆಯಿಂದ ಸತ್ಯದ ಜ್ಞಾನದ, ಅಧ್ಯಾತ್ಮಜ್ಞಾನದ, ಪರಮಾರ್ಥಜ್ಞಾನದ ವಿಮರ್ಶೆಯನ್ನು ಅತಿ ಸ್ಪಷ್ಟವಾಗಿ, ಕೂಲಂಕಷವಾಗಿ ಮಾಡಿದ್ದಾರೆ.

ನಮ್ಮ ಸುತ್ತುಮುತ್ತಲಿನ ಬಾಹ್ಯ ಪ್ರಪಂಚದ ಜ್ಞಾನವು ನಮಗೆ ನಮ್ಮ ಇಂದ್ರಿಯಗಳ ಮೂಲಕವಾಗಿ ಆಗುವದು. ಈ ಇಂದ್ರಿಯಗಳಿಗೆ (ಜ್ಞಾನೇಂದ್ರಿಯ ಕರ್ಮೇಂದ್ರಿಯ) ಪ್ರಾಣಮಯಕೋಶದ ಮೂಲಕವಾಗಿ ನಮ್ಮ ಭಾವಗಳೂ, ಮನೋಮಯ ಕೋಶದ ಮೂಲಕವಾಗಿ ನಮ್ಮ ವಿಚಾರಗಳೂ ಸಹಾಯವನ್ನಾಗಲಿ ಉತ್ತೇಜನವನ್ನಾಗಲಿ ವಿರೋಧ, ಆತಂಕಗಳನ್ನಾಗಲಿ ಮಾಡುವವು. ನಮ್ಮ ಸ್ಥೂಲ ದೇಹವು ಜಡವಾದುದು. ಪ್ರಾಣಶಕ್ತಿಗಳ ಸಂಚಾರವು ಈ ಜಡವಾದ ಅನ್ನಮಯ ಕೋಶದಲ್ಲಿ ಎಲ್ಲಿಯ ವರೆಗೆ ಸುರಕ್ಷಿತವಾಗಿದೆಯೋ ಅಲ್ಲಿಯ ವರೆಗೆ ಅದು ಸಜೀವವಾಗಿ ಕಾರ್ಯ ಮಾಡುವದಕ್ಕೆ ಶಕ್ತವಾಗಿದೆ. ಪ್ರಾಣಶಕ್ತಿಗಳಿಗೂ ಜಡದೇಹಕ್ಕೂ ಪುನಃ ಸಂಯೋಗವುಂಟಾಗದಂತೆ ಯಾವಾಗ ವಿಯೋಗವಾಯಿತೋ, ಆಗ ಆ ದೇಹ ಶವ ಎಂದರೆ ಮೃತ ದೇಹವೆಂದು ಕರೆಯುವರು. ಮನುಷ್ಯನು ಮರಣ ಹೊಂದಿದ ಮಾತ್ರಕ್ಕೆ ಅವನಿಗೆ ಸ್ಥೂಲದೇಹದ ಅನ್ನಮಯ ಕೋಶದಿಂದ ಬಿಡುಗಡೆ ಇದೆ. ಆದರೆ ಅವನ ಸೂಕ್ಷ್ಮವಾದ ಪ್ರಾಣಮಯ, ಮನೋಮಯ ಕೋಶಗಳು ಅವನಿಗೆ ಅಂಟಿಕೊಂಡೇ ಇರುವವು. ಸ್ಥೂಲದೇಹದ ಜೀವನರಂಗವು ಈ ಸ್ಥೂಲ ಭೌತಿಕ ಭೂಲೋಕವು. ಸೂಕ್ಷ್ಮವಾದ ಪ್ರಾಣಮಯ ಮತ್ತು ಮನೋಮಯ ದೇಹಗಳಿಗನುಗುಣವಾದ ಸೂಕ್ಷ್ಮ ಭುವರ್‌ಲೋಕ ಸುವರ್ಲೋಕಗಳೂ

ಇವೆ. ಎಲ್ಲಿಯ ವರೆಗೆ ಮನುಷ್ಯನು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಈ ಆರು ಷಡ್ ವಿಕಾರಗಳಿಗಧೀನನಾಗಿರುವನೋ, ಹಾಗೆಯೇ ಪಾಪ-ಪುಣ್ಯಗಳ ವಶದಲ್ಲಿರುವನೋ, ಅಲ್ಲಿಯ ವರೆಗೆ, ಅವನಿಗೆ ಮನೋಮಯ ಕೋಶವನ್ನಾಗಲಿ, ಸುವರ್ಲೋಕವನ್ನಾಗಲಿ ದಾಟಿ ಹೋಗುವದು ಶಕ್ಯವಿಲ್ಲ. ಈ ಎಂಟು ಪಾಶಗಳಿಗೆ ಸಿಕ್ಕವನು ಶುದ್ಧ ಜ್ಞಾನದ ಸಾಗರವಾದ, ತವರುಮನೆಯಾದ ವಿಜ್ಞಾನಮಯ ಕೋಶವನ್ನು ಸೇರ ಲಾರನು, ಅಲ್ಲಿಯ ಜ್ಞಾನಸಂಪತ್ತಿಯ ಲಾಭವನ್ನು ಪಡೆಯಲಾರನು, ಅದನ್ನು ಉಪಯೋಗದಲ್ಲಿ ತರಲಾರನು. ಸತ್ಯದ ಶುದ್ಧ ಆನಂದಾನುಭವವು ಆಗತಕ್ಕದ್ದು ಆನಂದಮಯ ಕೋಶದಲ್ಲಿ. ಸತ್ಯದ ಶುದ್ಧ ಆನಂದಾನುಭವದಲ್ಲಿ ಅನಂತಶಕ್ತಿಗಳ ಗರ್ಭವು ಅಡಕವಾಗಿದೆ. ಪರಿಪೂರ್ಣ ನಿದ್ರೆಯ, ಸ್ವಪ್ನರಹಿತವಾದ ಪೂರ್ಣ ಸುಷುಪ್ತಿಯ ಅವಸ್ಥೆಯಲ್ಲಿ, ಸಾಮಾನ್ಯ ಮನುಷ್ಯನಿಗೂ ಆತ್ಮಾನಂದದ ಅನುಭವವು ಬರುವದು ನಿಜ. ಆದರೆ ವಿಜ್ಞಾನಮಯ, ಮನೋಮಯ, ಪ್ರಾಣಮಯ, ಅನ್ನಮಯ ಕೋಶಗಳ ಅಶುದ್ಧತೆ ಅಪಕ್ವತೆಗಳ ಮೂಲಕ, ಅದರಿಂದ ಯಾವ ವಿಶಿಷ್ಟವಾದ ಆಧ್ಯಾತ್ಮಿಕ ಲಾಭವು ಆಗುವದಿಲ್ಲ. ಸಾಮಾನ್ಯವಾದ ಭೌತಿಕ ಲಾಭವಾದ ಶ್ರಮಪರಿಹಾರ, ಆಯಾಸದ ನಾಶ, ಉಲ್ಲಾಸದ ಪ್ರಾಪ್ತಿ ಇತ್ಯಾದಿ ಸುಖನಿದ್ರೆಯ ಫಲಗಳು ಮಾತ್ರ ಅವನಿಗೆ ದೊರಕುವವು.

ಒಂದೊಂದು ಕೋಶದ ಕ್ರಿಯಾವ್ಯಾಪಾರಗಳನ್ನು, ಲೋಪದೋಷಗಳನ್ನು ಹೇಗೆ ನಿರೀಕ್ಷಿಸಬೇಕು, ಹೇಗೆ ಕಳೆಯಬೇಕು; ಒಂದು ಭೂಮಿಕೆಯಿಂದ ಮೇಲಿನ ಭೂಮಿಕೆಗೆ ಹೋಗುವಾಗ ಬರುವ ಅಡೆತಡೆಗಳು ಯಾವವು, ವಿಕಲ್ಪ ವಿಕ್ಷೇಪಗಳು ಯಾವವು, ಅವುಗಳನ್ನು ದಾಟುವ-ಅವುಗಳಿಂದ ಪಾರಾಗಿ ಹೋಗುವ ಸುಲಭ ಉಪಾಯಗಳು ಯಾವವು — ಈ ಎಲ್ಲ ಯೋಗದ ವಿಷಯಗಳನ್ನು ಶ್ರೀ ಅರವಿಂದರು ಎಷ್ಟು ಚೆನ್ನಾಗಿ ತೋರಿ ಸಿದ್ದಾರೆ ಎಂಬುದನ್ನು ಅವರ ಯೋಗಸಮನ್ವಯ (Synthesis of Yoga) ಎಂಬ ಪುಸ್ತಕದಲ್ಲಿ ಕಾಣಬಹುದು. ಹಾಗೆಯೇ ಸಾಧಕರಿಗೆ ಅತಿ ಸುಲಭವಾದ ಪ್ರೇಮದ ಶಬ್ದಗಳಲ್ಲಿ ಅವರು ಕೊಟ್ಟ ಉತ್ತರಗಳು—ಶ್ರೀ ಅರವಿಂದರ ಪತ್ರಗಳು (Letters of Sri Aurobindo) ಸಕಲರಿಗೂ ಅರವಿಂದಸತ್ಯದ ಆಳವಾದ ವಿಶಾಲವಾದ ಅನು ಭವದ ಹಾಗು ಅವರ ಸಹೃದಯತೆಯ ಪರಿಚಯವನ್ನು ಮಾಡಿಕೊಡುವವು.

ಚಮತ್ಕಾರಗಳನ್ನು ಸಾಧಿಸುವದಕ್ಕಾಗಿ, ವಿಶಿಷ್ಟ ಸಿದ್ಧಿಗಳನ್ನು ಪಡೆಯುವದಕ್ಕಾಗಿ, ಅನೇಕ ಯೋಗಿ ಗಳು ತಮ್ಮ ಯೋಗಶಕ್ತಿಯನ್ನು ಉಪಯೋಗಿಸಿ, ತಮ್ಮ ಯೋಗದ ಮೂಲ ಆರಂಭದ ಉದ್ದೇಶವಾದ ಪರ ಮಾರ್ಥ ಸಾಧನೆಯಿಂದ ಚ್ಯುತರಾಗುವದೂ ಉಂಟು, ಅಧ್ಯಾತ್ಮ ಸಾಧನೆಯಿಂದ ಭ್ರಷ್ಟರಾಗುವದೂ ಉಂಟು. "ಪರಮಾರ್ಥ ಸಾಧನೆಯೇ ನಮ್ಮ ಧ್ಯೇಯ: ಪರಮಾತ್ಮನ ಸಿದ್ಧಿಗಾಗಿಯೇ ನಮ್ಮ ಯೋಗ" ಎಂದು ಅರವಿಂದರು ಸ್ಪಷ್ಟವಾಗಿ ಒತ್ತಿ ಹೇಳಿದ್ದಾರೆ. ಸಂಪೂರ್ಣ ಸತ್ಯದ ಸರ್ವತೋಮುಖವಾದ ಸತತ ಸ್ಫುರಣದ ಮೂಲ ಸ್ವರೂಪವೇ ದಿವ್ಯ ಆದಿಮಾತೆಯು, ಪರಮಾನಂದಪೂರ್ಣವಾದ ಪರಾದೇವಿಯ ಪೂರ್ಣ ಸ್ವರೂಪವು. ಆ ಆದಿ ಮಾತೆಯೇ, ಪರಾದೇವಿಯೇ, Divine Mother ಶ್ರೀ ಅರವಿಂದರ ಯೋಗದ ಶಕ್ತಿ, ಯೋಗದ ಸ್ಫೂರ್ತಿ, ಯೋಗದ ಸಂಪತ್ಸಾರಸರ್ವಸ್ವ. ಕೃತಜ್ಞತೆಯ ಘನೀಭೂತವಾದ ಮೂರ್ತಿ, ಸುವ್ಯವಸ್ಥಿತತೆಯ ವಿಶಾಲವಾದ ಸಮರ್ಥ ವ್ಯಾಪ್ತಿ, ಪ್ರೀತಿಯ-ಮಮತೆಯ-ಪ್ರೇಮದ ನದಿಗಳಿಗೆ ಅಖಂಡವಾದ ಆನಂದದ ಸ್ವಾಗತವನ್ನು-ಆಶ್ರಯವನ್ನೀಯುವ ಅಪಾರವಾದ ದಯೆಯ ಸಾಗರ, ಶ್ರದ್ಧೆಯಿಂದ ವಿಶ್ವಾಸದಿಂದ ನಂಬಿದ ಭಕ್ತರ ಸರ್ವತೋಪರಿ ಉದ್ಧಾರಕ್ಕಾಗಿ ಸತತ ತತ್ಪರವಾಗಿರುವ ಸುದಕ್ಷ ಭಕ್ತವಾತ್ಸಲ್ಯತೆ, ಈ ನಾಲ್ಕು ಮಹಾಗುಣಗಳ ಮೂಲವು ಆ ಮಹೇಶ್ವರಿಯನ್ನೇ ಅವಲಂಬಿಸಿವೆ.

ಸೃಷ್ಟ್ಯುನ್ಮುಖವಾದ ಪರಾದೇವಿಯ ಆ ಪರಮೇಶ್ವರೀಸ್ವರೂಪದ ಸಹಾಯದಿಂದ,ಆ ಪರಮೇಶ್ವರಿಯ ಅತಿಮಾನಸವಾದ ಪರಾಶಕ್ತಿಯನ್ನು ಈ ಭೂದೇವಿಯ ಗರ್ಭದಲ್ಲಿ, ಭೂಲೋಕದಲ್ಲಿ,-ಸಕಲ ಮಾನವರ ಸಹಾಯ

ಹಿತಾರ್ಥಕ್ಕಾಗಿ, ಪರಮಾತ್ಮನ ಪರಮಾರ್ಥಸಿದ್ಧಿಯ ಅಭಿವ್ಯಕ್ತಿಯ ಸಲುವಾಗಿ, ಸ್ಥಿರವಾಗಿ ಸ್ಥಾಪಿಸಬೇಕೆಂದು ಅವ್ಯಾಹತವಾಗಿ ಪ್ರಯತ್ನವನ್ನು ಮಾಡಿದ ಅಪ್ರತಿಮ ವೀರಯೋಗಿಗಳು, ಧೀರಜ್ಞಾನಿಗಳು ಅರವಿಂದರು. ಅತಿಮಾನಸ ಪರಾಶಕ್ತಿಯು (Supramental Power) ಸ್ಥೂಲ ಜಡದಲ್ಲಿ ಶಾಶ್ವತವಾಗಿ ಸ್ಥಾಪಿತವಾಗಬೇಕಾದರೆ, ನಿತ್ಯವಾಗಿ ಪ್ರತಿಷ್ಠಿತವಾಗಬೇಕಾದರೆ, ಸ್ಥೂಲ, ಸೂಕ್ಷ್ಮ, ಕಾರಣ ದೇಹಗಳ ಶುದ್ಧಿಯಾಗಬೇಕು. ಆಧಾರವು ಶುದ್ಧವಾಗಿ, ಪ್ರವೇಶ್ಯತೆಯ ಯೋಗ್ಯತೆಯನ್ನು ಪಡೆದು, ಅವಶ್ಯವಾದ ಪರಿವರ್ತನೆಯನ್ನು ಹೊಂದಿದ ಮೇಲೆಯೇ ಅಲ್ಲನೇ ಪರಾಶಕ್ತಿಯ ನಿರಂತರವಾದ ಪ್ರತಿಷ್ಠಾಪನೆಯು ಆಗತಕ್ಕದ್ದು ? ಈ ಸಂಪೂರ್ಣ ಸರ್ವದೇಹವ್ಯಾಪಕವಾದ ಸರ್ವಾಂಗಪರಿಪೂರ್ಣ ಪರಮಾರ್ಥ ಪರಿವರ್ತನೆಗಾಗಿ—Complete, Total, Integral, Divine Transformation, ಪರಾಶಕ್ತಿಯ ಪ್ರತಿಷ್ಠಾಪನೆಗಾಗಿ ಶ್ರೀ ಅರವಿಂದರೂ ಅವರಿಂದ ಅಭಿನ್ನವಾದ ಶ್ರೀ ಮಾತಾಜಿಯವರೂ ಅಖಂಡವಾಗಿ ಪ್ರಯತ್ನವನ್ನು ನಡೆಸಿದ್ದಾರೆ. ಜಡದೇಹವನ್ನು ಬಿಟ್ಟು ಶ್ರೀ ಅರವಿಂದರು ತೆರಳಿದ್ದರೂ, ಕೈಕೊಂಡ ಕಾರ್ಯವು ಕೊನೆಗಾಣುವ ವರೆಗೆ ಈ ಭೂಲೋಕದ ಆವರಣವನ್ನು ಬಿಟ್ಟು ತಾವು ಹೋಗುವದಿಲ್ಲವೆಂದು ಶ್ರೀ ಮಾತಾಜಿಯವರಿಗೆ ಅರವಿಂದರು ಅಭಯವಚನವನ್ನು ಕೊಟ್ಟಿದ್ದಾರೆ. ಶ್ರೀ ಅರವಿಂದ-ಮಾತಾಜಿಯವರ ಅಮರ ಪ್ರಯತ್ನದಲ್ಲಿ ಅನೇಕ, ಸಹಸ್ರಾರು ಶಿಷ್ಯರ ಸಾಧನೆಯ ಸಂಗಮವೂ ತನ್ನ ಶಕ್ತಿಯನ್ನು ಕೂಡಿಸಿದೆ. ವಿಪ್ರವರ ಅಮರಯೋಗಿ ಅರವಿಂದರು ವಿಶ್ವದ ಹಿತಾರ್ಥವಾಗಿ, ಪರಮಾರ್ಥ ಸಿದ್ಧಿಯ ಸರ್ವತೋಮುಖ ಅಭಿವ್ಯಕ್ತಿಗಾಗಿ ಕೈಕೊಂಡ ಅತಿಮಾನಸ ಪರಾಶಕ್ತಿಯ ಅಮರ ಪ್ರತಿಷ್ಠಾಪನೆಯ ಕಾರ್ಯವು ಸುಯಶಸ್ವಿಯಾಗಿ ಪರಿಣಮಿಸಿ, ಪರಮಾರ್ಥಯೋಗಿ ಅರವಿಂದರು ಅಮರ ಪರಮಾತ್ಮ ಅರವಿಂದರಾಗಿ ಪುನಃ ಬೇಗನೇ ನಮ್ಮೆಲ್ಲರ ಮಧ್ಯದಲ್ಲಿ ಬೆಳಗಲೆಂದು ಆ ಆದಿಮಾತೆ ಪರಾದೇವಿಯನ್ನೇ ಪ್ರಾರ್ಥಿಸಿ, ಈ ಲೇಖವನ್ನು ಮುಗಿಸುತ್ತೇನೆ.

—ರಾ. ಕೃ. ವಾಳವೇಕರ

---

ಜಗತ್ತು ದುಃಖಮಯವಾಗಿದೆಯೆಂದೂ, ನೈಷ್ಕರ್ಮ್ಯ ಮತ್ತು ಪಲಾಯನ ಇವೇ ಆನಂದ ಮತ್ತು ವಿಮೋಚನೆ ಇವುಗಳಿಗೆ ಏಕಮಾತ್ರ ಉಪಾಯಗಳಾಗಿವೆಯೆಂದೂ ಬೋಧಿಸುವ ತೇಜೋಹೀನ ತತ್ವವಾದವನ್ನು ನಾನು ಅನುಮೋದಿಸುವದಿಲ್ಲ. ದೇವನು ತನ್ನ ಸ್ವಯಂಸ್ಥಿತಿಯಲ್ಲಿ ಮಾಂಗಲ್ಯಮಯನಾಗಿದ್ದು, ವಿಸ್ತಾರದಶೆಯಲ್ಲಿ ಆತನೇ ಅಮಂಗಲಕರನಾಗಿದ್ದಾನೆಂದು ಹೇಳುವುದು ಸಮಸ್ತ ತರ್ಕಕ್ಕೂ ಜ್ಞಾನಕ್ಕೂ ವಿರುದ್ಧವಾಗಿದೆ. ಬ್ರಹ್ಮನು ಮೂಢನೂ, ಮತ್ತನೂ ಆಗಿ ದುಃಸ್ವಪ್ನಗಳನ್ನು ಕಾಣುತ್ತ ಕಷ್ಟಕರವಾದ ಮಾಯೆಯಲ್ಲಿ ಸ್ವಯಂ ಭ್ರಮಿತನಾಗಿದ್ದಾನೆಂದು ಹೇಳುವುದನ್ನು ನಾನು ಒಪ್ಪಿಕೊಳ್ಳಲಾರೆನು.

ಆ ಬೋಧನೆಯನ್ನು ನಾನು ವೇದದಲ್ಲಿ ಕಂಡಿಲ್ಲ; ಅಲ್ಲದೆ ನನ್ನ ವಾಸನಾರಹಿತ, ಅಲೌಕಿಕಸಾಧನ-ಜನಿತ, ಅಬಾಧಿತ ಆನಂದ ಹಾಗೂ ಜ್ಞಾನದ ಮೂರ್ತಸ್ವರೂಪವಾಗಿರುವ ದಿವ್ಯಾನುಭೂತಿಗಳಿಗೂ ಅದು ಸರಿಹೊಂದುವದಿಲ್ಲ ನಾನು ಮಹಾಭಾರತದೊಳಗಿನ ಶ್ರೀಕೃಷ್ಣನ ವಿಚಾರದವನಿದ್ದೇನೆ. ಆತನು ಹೇಳುವದೇನಂದರೆ—"ಕೆಲವರು ಈ ಜಗತ್ತಿನಲ್ಲಿ ಕಾರ್ಯಪರತೆಯನ್ನು ಬೋಧಿಸುತ್ತಾರೆ. ಆದರೆ ನೈಷ್ಕರ್ಮ್ಯವನ್ನು ಬೋಧಿಸುವ ದುರ್ಬಲರ ಅಭಿಪ್ರಾಯದವನು ನಾನಲ್ಲ." ನ ಮೇ ಮತಂ ತಸ್ಯ ದುರ್ಬಲಸ್ಯ.

ಆದರೆ ಆತನು (ಶ್ರೀಕೃಷ್ಣನು) ಆದರ್ಶವಾಗಿ ಇಟ್ಟುಕೊಂಡ ಕರ್ಮವು, ಗೆಟೇ ಎಂಬವನು ಮಹತ್ತರವಾದ ನಿಸರ್ಗಶಕ್ತಿಗಳ ಕರ್ಮವನ್ನು ಕುರಿತು ಹೇಳುವಂತೆ—ಆಸಕ್ತಿರಹಿತರೂ, ಕ್ಲೇಶರಹಿತರೂ, ಆನಂದದಲ್ಲಿ ಸ್ವಯಂ ಸಮತೋಲರೂ, ಸಾತ್ವಿಕ ಅಹಂಕಾರದಿಂದ ಸಹ ಬದ್ಧರಲ್ಲದವರೂ, ಬಹುತ್ವದಲ್ಲಿದ್ದೂ ಪುರುಷೋತ್ತಮನೊಂದಿಗೆ ಏಕತ್ವವನ್ನು ಸಾಧಿಸಿದವರೂ ಆದ ಮಹತ್ತರವಾದ ದೇವತೆಗಳ ಕರ್ಮವೇ ಆಗಿದೆ.

—ಶ್ರೀ ಅರವಿಂದರು

# ಸೋಽಹಮಸ್ಮಿ !

" ಅಹಮಸ್ಮಿ ಅಹಮಸ್ಮಿ ಅಹಂ ಅಸ್ಮಿ ! "
ಆಶೀರ್ವದಿಸುತ್ತೈತಂದನಂದ್ ಮಹರ್ಷಿ,
ವೈಶಾಖ ಉದಯ ದಿನಮಣಿ ಅರಶ್ಮಿ.
ದೇವ ಧೈರ್ಯಾಮೃತವ ಜೀವಲೋಕಕ್ಕೆರೆದು
ಮರ್ತ್ಯಕೆ ಅಮರ್ತ್ಯದ ಗವಾಕ್ಷಮಂ ತೆರೆದು,
ಕೆಂಗೆಂಡದುಂಡೆಯೋಲ್
ದಿವ್ಯಾಗ್ನಿಕುಂಡದೋಲ್
ದೇವರೊರ್ ಪ್ರತ್ಯಕ್ಷ ರುಂಡದೋಲ್
ಮೂಡಿದನ್ !

ಮೂಡಿದನೆ ?

ಮೈದೋರಿದನೊ ಮಹರ್ಷಿ,
ದಿನಮಣಿ ಅರಶ್ಮಿ !
ದಿಗ್ಗಜದ ಬೆನ್ನೇರಿ
ಇಂದ್ರಾದ್ರಿಯನ್ನೇರಿ
ಶಿಖರರೂಪದ ಮುಗಿಲ ತೇರನೇರಿ
" ಅಹಮಸ್ಮಿ ಅಹಮಸ್ಮಿ ಅಹಂ ಅಸ್ಮಿ ! "
ಎಂಬ ಆಶೀರ್ವಾದಮಂ ಲೋಕಲೋಕಕೆ ಸಾರಿ
ಮೈದೋರ್ದನದೊ ಮಹರ್ಷಿ ದಿನಮಣಿ ಅರಶ್ಮಿ !
ಸೃಷ್ಟಿದೇವಿಯ ವಕ್ಷ ಮೃದುತಲ್ಪದಲಿ ನಿಂತು
ದೃಷ್ಟಿಪೂಜೆಯ ಸಲಿಸುತಿರ್ದ ಕಬ್ಬಿಗನೊಳಿಂತು
ಆಘೋಷಿಸಿತು ಉಪನಿಷತ್ತಿನ ಋಷಿಯ ಮಂತ್ರಸಪ್ತತಂತು:

" ಓಂ ಪೂಷನ್ನೇಕರ್ಷೇ
ಯಮ ಸೂರ್ಯ ಪ್ರಾಜಾಪತ್ಯ
ವ್ಯೂಹ ರಶ್ಮೀನ್ ಸಮೂಹ !
ತೇಜೋ ಯತ್ ತೇ ರೂಪಂ
ಕಲ್ಯಾಣತಮಂ
ತತ್ತೇ ಪಶ್ಯಾಮಿ:
ಯೋಽಸಾವಸೌ ಪುರುಷಃ ಸೋಽಹಮಸ್ಮಿ ! "

೧೯-೪-೫೨

— ಕುವೆಂಪು

# ಶ್ರೀ ಅರವಿಂದರ ಯೋಗದ ವೈಶಿಷ್ಟ್ಯ

ಪೂರ್ವದ ಯೋಗಮಾರ್ಗ ಹಾಗು ವೇದಾಂತ ಮಾರ್ಗಗಳು ಇಹಜೀವನವನ್ನೂ ಇಹಜಗತ್ತನ್ನೂ ತ್ಯಜಿಸಿ ಕೇವಲ ಬ್ರಹ್ಮಾವಸ್ಥೆಯಲ್ಲಿಯೇ ಲೀನವಾಗುವುದಾಗಿ ಹೇಳುತ್ತಿದ್ದವು. ಮುಖ್ಯವಾಗಿ ಅದ್ವೈತ ವೇದಾಂತ ಮಾರ್ಗದವರಂತೂ 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂಬ ಉಕ್ತಿಯಂತೆ ಜಗತ್ತನ್ನಲ್ಲಗಳೆದು ಅದರಿಂದ ದೂರ ವಾಗಿಯೇ ಹೋಗುತ್ತಿದ್ದರು. ಆದರೆ ಶ್ರೀ ಅರವಿಂದರ ಯೋಗಮಾರ್ಗದಲ್ಲಿ ಈ ಭಾವಕ್ಕೆ ಎಳ್ಳಷ್ಟೂ ಎಡೆಯಿಲ್ಲ; ಅವರು ಅನ್ನುವುದು ಹೀಗೆ:—"ಬ್ರಹ್ಮವೂ ಸತ್ಯವಿದೆ, ಜಗತ್ತೂ ಸತ್ಯವಿದೆ. 'ಸರ್ವಂ ಖಲ್ವಿದಂ ಬ್ರಹ್ಮ.' ಆದ್ದರಿಂದ ಈ ಜಗತ್ತಿನಲ್ಲಿದ್ದು ಜೀವನವನ್ನು ಸ್ವೀಕರಿಸಿಯೇ ಯೋಗಪಥವನ್ನು ಅನುಸರಿಸಬೇಕಾಗಿದೆ; ಜೀವನವೇ ಒಂದು ಯೋಗಕ್ಷೇತ್ರವಾಗಿದೆ." ಪೂರ್ವಕಾಲದ ಯೋಗಿಗಳೆಲ್ಲ ಜಾಗತಿಕ ಜೀವನದಿಂದ ಮೋರೆದಿರುವಿಕೊಂಡು ಹೋಗಿದ್ದುದರಿಂದಲೇ ಈ ಜಗತ್ತು ಇನ್ನೂ ಹೆಚ್ಚು ಅಧೋಗತಿಗೆ ಇಳಿಯಿತೆಂದು ಅವರ ಅಭಿಪ್ರಾಯವಿದೆ. ಏಕೆಂದರೆ ಜ್ಞಾನಿಗಳೆಲ್ಲ ಹೀಗೆ ಜಗತ್ತಿನಿಂದ ವಿಮುಖರಾಗಿ ಹೋದ ಮೇಲೆ ಆಸುರೀಶಕ್ತಿಗಳಿಗೆ ಈ ಜಗತ್ತಿನಲ್ಲಿ ತಮ್ಮ ಕಾರ್ಯ ಸಾಧಿಸಲು ಹೆಚ್ಚು ಆಸ್ಪದ ದೊರೆತು ಜಗತ್ತು ಅಂಧಂತಮಸ್ಸಿಗಿಳಿಯುವುದು ಸ್ವಾಭಾವಿಕವಾಗಿಯೇ ಇದೆ. ಎಂದಿನಿಂದಲೂ ಈ ವಿಶ್ವದಲ್ಲಿ ದೈವೀ ಹಾಗೂ ಆಸುರೀ ಶಕ್ತಿಗಳ ಹೋರಾಟವು ನಡೆಯುತ್ತಲೇ ಬಂದಿದೆಯೆಂಬುದನ್ನು ನಮ್ಮ ಪುರಾಣಗಳಲ್ಲಿ ಬರುವ ದೇವಾಸುರರ ಯುದ್ಧದ ಕಥೆಗಳಿಂದ ತಿಳಿಯಬಹುದಾಗಿದೆ. ಅದೆಷ್ಟೋ ಸಲ ಅಸುರರ ಮರ್ದನಕ್ಕೆ ಸ್ವಯಂ ಭಗವಂತನೇ ಯುದ್ಧಭೂಮಿಗೆ ಹೋಗಬೇಕಾದ ಪ್ರಸಂಗವೂ ಬಂದಿದೆ. ತ್ರಿಪುರಸಂಹಾರಕ್ಕೆ ಭಗವಾನ್ ಶಂಕರನೇ ರಥಾರೂಢನಾಗಿ ಯುದ್ಧಕ್ಕೆ ಹೋದ ಮಾತು ಸರ್ವಶ್ರುತ ವಿದೆ. ಲೋಕಕಂಟಕರಾದ ದಾನವರನ್ನು ದಂಡಿಸಿ ಭೂಭಾರವನ್ನಿಳಿಸಲು ವಿಷ್ಣುಭಗವಾನನು ಅನೇಕ ಸಲ ಭೂಲೋಕದಲ್ಲಿ ಅವತರಿಸಿದ ಮಾತಿಗೆ ದಶಾವತಾರದ ಕಥೆಗಳು ಹಿರಿಯ ಸಾಕ್ಷಿಯಾಗಿವೆ. ಇದನ್ನೆಲ್ಲ ನೋಡಿದರೆ, ಭಗವಂತನು ಈ ಜಗತ್ತನ್ನು ಸೃಷ್ಟಿಸಿದ್ದು ತನ್ನ ಲೀಲೆಗಾಗಿದ್ದು ಇದನ್ನು ಕ್ರಮಗತಿಯಿಂದ ಉನ್ನತಿಗೊಯ್ಯಲು ಅವನು ಸತತ ಪ್ರಯತ್ನಶೀಲನಾಗಿರುವುದು ಕಂಡುಬರುವುದಿಲ್ಲವೆ? ಅಂದಮೇಲೆ ಭಗವಂತನ ಲೀಲಾಸ್ಥಲವಾದ ಈ ಜಗತ್ತಿನಿಂದ ವಿಮುಖರಾಗದೆ ಅವನ ಲೀಲೆಯಲ್ಲಿ ಭಾಗಿಯಾಗುವುದು ಉಚಿತವೇ ಆಗಿದೆ. ಇರಲಿ.

ಇನ್ನು ಶ್ರೀ ಅರವಿಂದರ ಯೋಗವು ಯಾರ ಸಲುವಾಗಿ, ಯಾವ ಸಿದ್ಧಿಗಾಗಿ ಇದೆಯೆಂಬುದನ್ನರಿತರೆ ಪೂರ್ವದ ಯೋಗಮಾರ್ಗಗಳಿಗೂ ಈ ಯೋಗಮಾರ್ಗಕ್ಕೂ ಇರುವ ಅಂತರವೂ ವೈಶಿಷ್ಟ್ಯವೂ ಸುಲಭವಾಗಿ ತಿಳಿಯಬಹುದಾಗಿದೆ. ಶ್ರೀ ಅರವಿಂದರ ಯೋಗವು ಕೇವಲ ಸ್ವಂತದ ಸಲುವಾಗಿ ಇರದೆ ಸಮುಸ್ತ ಮಾನವ ಕುಲದ ಉದ್ಧಾರಕ್ಕಾಗಿ ಇದೆಯೆಂದೂ, ಈ ಯೋಗಲಬ್ಧಸಿದ್ಧಿಯ ಮೂಲಕ ಮಾನವಕುಲವು ಈಗಿರುವ ಹಂತ ದಿಂದ ಬಹು ಮೇಲಿನ ಹಂತಕ್ಕೆ ಏರಲಿದೆಯೆಂದೂ ಅವರ ಗ್ರಂಥಗಳಲ್ಲಿ ನಿರೂಪಿತವಾಗಿದೆ. ಮಾನವನು ಇನ್ನು ಏರಲಿರುವ ಮುಂದಿನ ಹಂತವು ಯಾವುದೆಂಬುದನ್ನರಿಯುವ ಮೊದಲು, ಆದಿಯಿಂದ ಈ ವರೆಗೆ ಸೃಷ್ಟಿಯ ಕ್ರಮ ಗತಿಯೊಡನೆ ಮಾನವನ ಪ್ರಗತಿಯು ಹೇಗೆ ಆಗುತ್ತ ಬಂದಿದೆಯೆಂಬುದನ್ನು ಅರಿಯುವುದು ಬಹಳ ಅವಶ್ಯವಿದೆ. ಆದಿಯಲ್ಲಿ ಈ ಭೂಮಿಯ ಮೇಲೆ ವನಸ್ಪತಿಗಳಾಗಲಿ ಪಶುಪಕ್ಷಿಗಳಾಗಲಿ ಇರಲಿಲ್ಲವೆಂಬುದು ಪೃಥ್ವಿಯ ಇತಿಹಾಸ ದಿಂದ ಗೊತ್ತಾಗುತ್ತದೆ. ಆಗ ಇಲ್ಲಿ ಪ್ರಾಣ-ಮನಗಳು ವಿಕಸಿತವಾಗಿರಲಿಲ್ಲ. ಪ್ರಾಣಲೋಕದಿಂದ ಪ್ರಾಣತತ್ತ್ವದ ಅವತರಣವಾದಮೇಲೆ ಇಲ್ಲಿ ಸುಪ್ತವಾಗಿದ್ದ ಪ್ರಾಣದ ವಿಕಾಸವಾಗಿ ವನಸ್ಪತಿಗಳ ಹಾಗು ಪಶುಪಕ್ಷಿಗಳ ಸೃಷ್ಟಿ

ಯಾಯಿತು. ಅನಂತರ ಮನೋಮಯ ಲೋಕದಿಂದ ಮನಸ್ತತ್ತ್ವದ ಅವತರಣವಾದ ಮೇಲೆ ಇಲ್ಲಿ ಸುಪ್ತವಾಗಿದ್ದ ಮನದ ವಿಕಾಸದ ದ್ಯೋತಕವಾಗಿ ಮಾನವನ ಸೃಷ್ಟಿಯಾಯಿತು. ಹೀಗೆ ಜಡದಿಂದ ಉದ್ಭಿಜವೂ, ಉದ್ಭಿಜದಿಂದ ಪ್ರಾಣವೂ, ಪ್ರಾಣದಿಂದ ಮನದ ಅಧಿಕಾರವಂತನಾದ ಮನುಷ್ಯನ ಆವಿರ್ಭಾವವೂ ಆಗಿದೆ. ಇನ್ನು ಮಾನವನು ರೂಪಾಂತರ ಹೊಂದಿ ದೇವತ್ವವನ್ನು ಪಡೆಯುವುದೇ ಅವನ ಪ್ರಗತಿಯ ಮುಂದಿನ ಹಂತವಾಗಿದೆ. ಮಾನವನು ಆ ಮುಂದಿನ ಹಂತವನ್ನೇರಬೇಕಾದರೆ ಅತಿಮಾನಸಲೋಕದಿಂದ ಅತಿಮಾನಸಶಕ್ತಿಯ ಅವತರಣವಾಗಬೇಕು. ಆ ಅತಿಮಾನಸಶಕ್ತಿಯ ಅವತರಣವೇ ಶ್ರೀ ಅರವಿಂದರ ಯೋಗದರ್ಶನವಾಗಿದೆ. ಆ ಸಿದ್ಧಿಗಾಗಿಯೇ ಶ್ರೀ ಅರವಿಂದರು ಅವಿರತ ತಪವನ್ನೆಸಗಿದರು. ಹೀಗೆ ಅತಿಮಾನಸ ಸಿದ್ಧಿಯಿಂದ ಸಮಗ್ರ ಮಾನವಕುಲವು ದೇವತ್ವವನ್ನು ಪಡೆಯುವ ದಾರಿದೋರುವ ಶ್ರೀ ಅರವಿಂದರ ಯೋಗದ ಮಹತಿಯೊಡನೆ ಅನ್ಯ ಯೋಗಮಾರ್ಗಗಳ ತುಲನೆ ಮಾಡಿ ಈ ಯೋಗದ ವೈಶಿಷ್ಟ್ಯವನ್ನು ಕಂಡುಕೊಳ್ಳಬಹುದು.

— ಆದಮುಸಾಹೇಬ
ಶ್ರೀ ಅರವಿಂದಾಶ್ರಮ, ಪಾಂಡಿಚೇರಿ

---

# ಕೃಪೆ ಎಂದು?

("The call from below and the Grace from above" ಎಂಬ ನುಡಿಯಿಂದ ಪ್ರೇರಿತ)

ಕೂಗು ಕೆಳಗಿಂದ ಆಲ್ಪರಿದು ಮೊರೆಯುತ್ತಿಹುದು
    ಮೇಲಿನಿಂ ಕರುಣೆ ಕೃಪೆ ಬರುವುದೆಂದು ?
ಯೋಗ ಪೂರಿತ ಶಕ್ತಿಯುಕ್ತ ಕಂಗಳ ದೃಷ್ಟಿ
    ಕರುಣಾ ಕಿರಣಗಳಿಂದ ಬಂದು ತಾಗಿ
ಭೋಗ ಪೂರಿತ ಯುಕ್ತಿಯುಕ್ತ ವಿಷಯದ ಸೃಷ್ಟಿ
    ಸಂಗತಿಗಳನ್ನೆಲ್ಲ ಹೊರಗೆ ನೂಗಿ ೧

ಪರಿಶುದ್ಧನನ್ನಾಗಿ ಮಾಡಿ ಅವತರಣಕ್ಕೆ
    ಅವಕಾಶವಿರುವಂತೆ ತೆರವು ಮಾಡಿ
ಪರಿಬದ್ಧನಾದೆನ್ನ ಹೃದಯದ ವಿಕಾಸಕ್ಕೆ
    ಅವಸರವ ನೀಡು ಕೂಗುವೆನು ಬೇಡಿ ೨

ಬರಿದು ಬರಿದಾಗಿ ತೆರವೋ ತೆರವು ಆದವನ-
    ನನ್ಯ ಶರಣಾಗತಿಯ ನಂಬಿದವನ
ವಿರಸ ವಿಭ್ರಮದಿಂದ ಶೂನ್ಯಗತಿಗಿಳಿದವನ
    ಒಂದೆ ತವ ಕರುಣೆಯೊಳು ಆಶೆಯುವನ ೩

— ದೇಸಾಯಿ ದತ್ತಮೂರ್ತಿ

# ಶಿಕ್ಷಣ

[ಶ್ರೀ ತಾಯಿಯವರ ‘On Education’ ಎಂಬ ಇತ್ತೀಚಿನ ಗ್ರಂಥದ ೨ನೆಯ ಪ್ರಕರಣದ ಅನುವಾದವು ಇದು. ಮೊದಲನೆಯ ಪ್ರಕರಣವಾದ ‘ಜೀವನ ವಿಜ್ಞಾನವು’ ‘ಸಮರ್ಪಣ’ದ ೨ನೆಯ ಸಂಪುಟದಲ್ಲಿ ಅಚ್ಚಾಗಿದೆ.]

ಮಾನವನ ಶಿಕ್ಷಣವು ಅವನ ಹುಟ್ಟಿನಿಂದಲೇ ಆರಂಭವಾಗಿ ಬಾಳಿನ ಉದ್ದಕ್ಕೂ ಸಾಗಬೇಕು.

ಶಿಕ್ಷಣವು ತನ್ನ ಪರಮಾವಧಿ ಫಲವನ್ನು ಪಡೆಯಬೇಕಿದ್ದರೆ, ನಿಜವಾಗಿಯೂ ಅದು ಹುಟ್ಟಿಗಿಂತ ಮೊದಲೇ ಆರಂಭವಾಗುವುದು ಅವಶ್ಯವಿದೆ; ಆಗ ಮಗುವಿನ ತಾಯಿಯೇ ಎರಡು ಬಗೆಯಿಂದ ಈ ಸಂಸ್ಕರಣ ಕಾರ್ಯವನ್ನು ಪ್ರಾರಂಭಿಸುವಳು: ಒಂದನೆಯದಾಗಿ, ತನ್ನ ಸ್ವಂತದ ಸುಧಾರಣೆಯ ಮೂಲಕ; ಎರಡನೆಯದಾಗಿ, ತನ್ನ ಉದರದಲ್ಲಿ ರೂಪುಗೊಳ್ಳುತ್ತಿರುವ ಮಗುವಿಗೆ ಯೋಗ್ಯ ಸಂಸ್ಕಾರಗಳನ್ನು ಒದಗಿಸುವುದರ ಮೂಲಕ. ಹುಟ್ಟಲಿರುವ ಮಗುವಿನ ಸ್ವಭಾವವು ಅದನ್ನು ರೂಪಿಸುತ್ತಿರುವ ತಾಯಿಯನ್ನೂ, ಅವಳ ಅಭೀಪ್ಸೆ–ಸಂಕಲ್ಪಗಳನ್ನೂ, ಅದರಂತೆಯೇ ಅವಳ ಬಾಹ್ಯ ಪರಿಸರವನ್ನೂ ಬಹುಮಟ್ಟಿಗೆ ಅವಲಂಬಿಸಿದೆಯೆಂಬುದರಲ್ಲಿ ಸಂದೇಹವಿಲ್ಲ. ತಾಯಿಯಾಗತಕ್ಕವಳು ಪಡೆಯಬೇಕಾದ ಶಿಕ್ಷಣವಾವುದೆಂದರೆ ತನ್ನ ವಿಚಾರಗಳನ್ನು ಸದಾ ಸುಂದರವಾಗಿಯೂ ಶುದ್ಧವಾಗಿಯೂ ಇರಿಸಿಕೊಳ್ಳುವುದು, ತನ್ನ ಭಾವನೆಗಳನ್ನು ಉದಾತ್ತವಾಗಿಯೂ ಉತ್ತಮವಾಗಿಯೂ ಇಟ್ಟುಕೊಳ್ಳುವುದು, ಇದಲ್ಲದೆ ತನ್ನ ಬಾಹ್ಯ ಪರಿಸರವು ಸಾಧ್ಯವಿದ್ದಷ್ಟು ಸಾಮರಸ್ಯ ಮತ್ತು ಅತಿ ಸರಳತೆಗಳಿಂದ ಕೂಡಿದುದಾಗಿ ಇರುವಂತೆ ನೋಡಿಕೊಳ್ಳುವುದು. ಇಷ್ಟೆಲ್ಲದರ ಜೊತೆಗೆ ಆಕೆಗೆ ತಾನು ಕಲ್ಪಿಸಬಹುದಾದ ಅತ್ಯುನ್ನತ ಆದರ್ಶಗಳಿಗನುಗುಣವಾಗಿ ಮಗುವನ್ನು ರೂಪಿಸಬೇಕೆಂಬ ಅರಿವೂ ದೃಢ ಸಂಕಲ್ಪವೂ ಇದ್ದುವೇ ಆದಲ್ಲಿ, ಗರ್ಭಸ್ಥ ಶಿಶುವು ಸಾಧ್ಯವಿದ್ದಷ್ಟು ಉಜ್ವಲ ಭವಿತವ್ಯದೊಡನೆ ಇಹಲೋಕದಲ್ಲಿ ಹುಟ್ಟಿಬರಲು ತುಂಬಾ ಅನುಕೂಲ ಸಂದರ್ಭಗಳು ದೊರಕಿದಂತಾಗುವುದು. ಹೀಗಾದಲ್ಲಿ, ಮುಂದೆ ಕಠಿಣ ಪ್ರಯತ್ನಗಳನ್ನು ಮಾಡಬೇಕಾಗಿ ಬರುವ ಪ್ರಸಂಗಗಳೂ ಅಕಾರಣ ತೊಡಕುಗಳೂ ಎಷ್ಟೋ ಮಟ್ಟಿಗೆ ಕಡಿಮೆಯಾಗುವವು!

ಶಿಕ್ಷಣವು ಪರಿಪೂರ್ಣವಾಗಬೇಕಾದರೆ ಮಾನವನ ಐದು ಪ್ರಮುಖ ವ್ಯಾಪಾರಗಳಿಗನುಗುಣವಾಗಿ ಅದರಲ್ಲಿ ಐದು ಅಂಗಗಳಿರುವುದು ಅವಶ್ಯವು; ಅವು ಯಾವುವೆಂದರೆ ಶಾರೀರಿಕ, ಪ್ರಾಣಿಕ, ಮಾನಸಿಕ, ಆಂತರಿಕ ಮತ್ತು ಆಧ್ಯಾತ್ಮಿಕ ( the physical, the vital, the mental, the psychic and the spiritual ). ವಾಡಿಕೆಯಾಗಿ ವ್ಯಕ್ತಿಯ ಬೆಳೆವಣಿಗೆಯೊಡನೆ ಶಿಕ್ಷಣದ ಈ ಐದೂ ಅಂಗಗಳು ಕಾಲಕ್ರಮದಲ್ಲಿ ಒಂದನ್ನೊಂದು ಹಿಂಬಾಲಿಸಿ ಬರುವವು. ಹೀಗೆಂದೊಡನೆ,—ಒಂದರ ತರುವಾಯ ಇನ್ನೊಂದು ಬರುವಾಗ ಮೊದಲಿನದು ಮಾಯವಾಗುವದೆಂದರ್ಥವಲ್ಲ; ಆದರೆ ಒಂದನ್ನೊಂದು ಪರಿಪೂರ್ಣಗೊಳಿಸುತ್ತ ಬಾಳಿನ ಕೊನೆಯವರೆಗೂ ಇವೆಲ್ಲವೂ ಮುಂದುವರಿಯಬೇಕು.

ಶಿಕ್ಷಣದ ಈ ಪಂಚ ಅಂಗಗಳನ್ನು ಅನುಕ್ರಮವಾಗಿ ಅಭ್ಯಸಿಸುವುದಲ್ಲದೆ ಅವುಗಳ ಪರಸ್ಪರ ಸಂಬಂಧವನ್ನೂ ನಾವಿಲ್ಲಿ ವಿವೇಚಿಸಬೇಕೆಂದಿರುವೆವು. ಆದರೆ ವಿವರಗಳಲ್ಲಿ ಪ್ರವೇಶಿಸುವ ಮೊದಲು, ತಾಯಿತಂದೆಗಳಿಗೆ

ಒಂದು ಮಾತನ್ನು ಸೂಚಿಸಬಯಸುತ್ತೇನೆ. ಅನೇಕ ಕಾರಣಗಳಿಂದಾಗಿ ಅವರಲ್ಲಿ ಅನೇಕರು ಮಕ್ಕಳ ನಿಜವಾದ ಶಿಕ್ಷಣದ ಬಗ್ಗೆ ಹೆಚ್ಚು ಗಮನವನ್ನೇ ಈಯುವದಿಲ್ಲ. ಮಗುವಿಗೆ ಜನ್ಮಕೊಟ್ಟ ಬಳಿಕ ಅದಕ್ಕೆ ಆಹಾರವಿತ್ತು, ಸಾಮಾನ್ಯವಾಗಿ ಅದರ ಉಳಿದ ಬಾಹ್ಯ ಆವಶ್ಯಕತೆಗಳನ್ನು ಪೂರೈಸಿ, ಅದರ ಆರೋಗ್ಯದತ್ತ ತುಸು ಹೆಚ್ಚು ಕಡಿಮೆ ಲಕ್ಷ್ಯಕೊಟ್ಟುಬಿಟ್ಟರೆ ತಮ್ಮ ಪಾಲಿನ ಕರ್ತವ್ಯವು ಮುಗಿಯಿತೆಂದು ಅವರು ಸಮಾಧಾನ ತಾಳುತ್ತಾರೆ. ಮುಂದೆ ಮಗುವನ್ನು ಶಾಲೆಗೆ ಹಾಕಿ ಅವನ ಮಾನಸಿಕ ಶಿಕ್ಷಣದ ಹೊಣೆಯನ್ನು ಶಿಕ್ಷಕನಿಗೆ ಒಪ್ಪಿಸಿಬಿಡುತ್ತಾರೆ.

ಇನ್ನು ಕೆಲ ತಾಯಿತಂದೆಗಳು ತಮ್ಮ ಮಕ್ಕಳು ಶಿಕ್ಷಣ ಪಡೆಯುವುದವಶ್ಯವೆಂಬುದನ್ನು ತಿಳಿದವರುಂಟು; ಮತ್ತು ಅದನ್ನು ಕೊಡಲು ಪ್ರಯತ್ನಿಸುವುದೂ ಉಂಟು. ಇಂಥವರಲ್ಲಿ, ಶಿಕ್ಷಣದ ಬಗ್ಗೆ ನಿಷ್ಠೆಯಿಂದಲೂ ಗಾಂಭೀರ್ಯದಿಂದಲೂ ವಿಚಾರ ಮಾಡುವವರಲ್ಲಿ ಕೂಡ, ಅನೇಕ ಜನರು ಮಕ್ಕಳಿಗೆ ಶಿಕ್ಷಣ ಕೊಡಲು ತಾವು ಸಮರ್ಥರಾಗುವುದಕ್ಕಾಗಿ ತಮಗೆ ತಾವೇ ಶಿಕ್ಷಣ ಕೊಟ್ಟುಕೊಂಡು, ತಮ್ಮನ್ನು ತಾವೇ ಅರಿತುಕೊಂಡು ಸಂಯಮ ಪೂರ್ಣರಾಗುವುದು ಪ್ರಥಮತಃ ಅವಶ್ಯವೆಂಬುದನ್ನು ಅರಿತಿರುವುದಿಲ್ಲ. ಏಕೆಂದರೆ ಸ್ವಂತ ಆಚರಣೆಯ ಮೂಲಕವೇ ಶಿಕ್ಷಣವು ಪರಿಣಾಮಕಾರಿಯಾಗುವುದುಂಟು. ತಾಯಿತಂದೆಗಳು ತಾವು ಹೇಳುವ ಮಾತಿನ ಸತ್ಯತೆಯನ್ನು ತಮ್ಮ ಆಚರಣೆಯಿಂದ ಮಗುವಿಗೆ ಮನಗಾಣಿಸದಿದ್ದರೆ ಯಾವ ಒಳ್ಳೆಯ ಮಾತುಗಳಾಗಲಿ, ಎಂಥ ಜಾಣತನದ ಉಪದೇಶವಾಗಲಿ ಮಗುವಿನ ಮೇಲೆ ಏನೂ ಪರಿಣಾಮ ಮಾಡುವುದಿಲ್ಲ. ನಿಷ್ಠೆ, ಪ್ರಾಮಾಣಿಕತೆ, ಸರಳತೆ, ಧೈರ್ಯ, ಅನಾಸಕ್ತಿ, ನಿಃಸ್ವಾರ್ಥತೆ, ಶಾಂತತೆ, ಸಹನಶೀಲತೆ, ಸತತಪರಿಶ್ರಮ, ಶಾಂತಿ, ಸಮತೆ, ಸಂಯಮ—ಇವೆಲ್ಲ ವನ್ನು ಆಡದಲೆ ಮಾಡಿ ತೋರಿಸುವುದೇ ಮೇಲು. ಸುಂದರ ಭಾಷಣಗಳಿಗಿಂತ ಸ್ವಂತ ಆಚರಣೆಯಿಂದಲೇ ಹೆಚ್ಚು ಚೆನ್ನಾಗಿ ಈ ಸಂಗತಿಗಳನ್ನು ತಿಳಿಸಬಹುದಾಗಿದೆ. ತಾಯಿತಂದೆಗಳೇ ! ಉಚ್ಚ ಆದರ್ಶವೊಂದನ್ನಿಟ್ಟುಕೊಂಡು ಆ ಆದರ್ಶಕ್ಕೆ ಒಪ್ಪುವಂತೆ ನೀವೇ ಯಾವಾಗಲೂ ಆಚರಿಸಬೇಕು. ಅಂದರೇನೇ ನಿಮ್ಮ ಚಿಕ್ಕ ಮಗುವು ತನ್ನಲ್ಲಿ ಈ ಆದರ್ಶವನ್ನು ಸ್ವಲ್ಪಸ್ವಲ್ಪವಾಗಿ ಪ್ರತಿಬಿಂಬಿಸುವುದನ್ನು ನೀವು ನೋಡುವಿರಿ. ಯಾವ ಗುಣವಿಶೇಷಗಳನ್ನು ಆತನ ಸ್ವಭಾವದಲ್ಲಿ ನೀವು ನೋಡಬಯಸುವಿರೋ ಅವುಗಳನ್ನು ಆತನು ಸ್ವಯಂಸ್ಫೂರ್ತಿಯಿಂದ ಪ್ರಕಟ ಗೊಳಿಸುವುದು ನಿಮಗೆ ಕಂಡುಬರುವುದು. ಸ್ವಾಭಾವಿಕವಾಗಿಯೆ ಮಗುವಿಗೆ ತನ್ನ ತಾಯಿತಂದೆಗಳ ವಿಷಯ ದಲ್ಲಿ ಆದರಾಭಿಮಾನಗಳಿರುತ್ತವೆ. ಅವರು ಕೇವಲ ಅಯೋಗ್ಯರಿರದ ವಿನಾ ಮಗುವಿನ ದೃಷ್ಟಿಯಲ್ಲಿ ಅವರು ದೇವತಾಸಮಾನರೇ ಆಗಿರುವುದುಂಟು; ಹಾಗು ಮಕ್ಕಳು ಸಾಧ್ಯವಿದ್ದಷ್ಟು ಅವರನ್ನು ಅನುಕರಿಸಲು ಪ್ರಯತ್ನ ಪಡುತ್ತಿರುವುದುಂಟು.

ಕೆಲವರನ್ನು ಅಪವಾದವೆಂದು ಗಣಿಸಿದರೂ, ಬಹು ಜನ ತಾಯಿತಂದೆಗಳಿಗೆ ತಮ್ಮ ನಡೆನುಡಿ ಗಳಲ್ಲಿಯ ದೋಷ, ದೌರ್ಬಲ್ಯ, ಉದ್ವೇಗ ಮತ್ತು ಅಸಂಯಮಗಳ ಪರಿಣಾಮವು ಮಕ್ಕಳ ಮೇಲೆ ಎಷ್ಟು ಭಯಂಕರವಾಗಿ ಆದೀತೆಂಬುದು ಗಮನಕ್ಕೇ ಬರುವುದಿಲ್ಲ. ನಿಮ್ಮ ಮಗುವು ನಿಮ್ಮನ್ನು ಭಕ್ತಿಯಿಂದ ಕಾಣ ಬೇಕೆಂದು ನಿಮ್ಮ ಇಚ್ಛೆಯಿದ್ದ ಪಕ್ಷದಲ್ಲಿ, ನೀವೇ ನಿಮ್ಮ ಬಗ್ಗೆ ಗೌರವ ಭಾವನೆಯನ್ನು ತಾಳಿರಿ; ಹಾಗು ಪ್ರತಿ ಕ್ಷಣವೂ ಅನ್ಯರ ಗೌರವಕ್ಕೆ ಪಾತ್ರರಾಗುವಂತೆ ನಿಮ್ಮ ಆಚರಣೆಯನ್ನಿಟ್ಟುಕೊಳ್ಳಿರಿ. ಯಾವ ಹೊತ್ತಿನಲ್ಲೂ ಸ್ವೈರವೃತ್ತಿ, ನಿರಂಕುಶತೆ, ಅಸಹಿಷ್ಣುತೆ ಇಲ್ಲವೆ ದುಷ್ಟಪ್ರವೃತ್ತಿಯನ್ನು ತೋರ್ಪಡಿಸಬೇಡಿರಿ. ನಿಮ್ಮ ಮಗುವು ನಿಮಗೆ ಏನಾದರೂ ಪ್ರಶ್ನೆ ಮಾಡಿದರೆ ನೀವು ಹೇಳುವುದು ಆತನಿಗೆ ತಿಳಿಯಲಾರದೆಂಬ ನೆವವನ್ನೊಡ್ಡಿ, ಅವನಿಗೆ ದಡ್ಡತನದ ಇಲ್ಲವೆ ಮೂರ್ಖತನದ ಉತ್ತರ ಕೊಡಬೇಡಿರಿ. ನೀವು ಸಾಕಷ್ಟು ಪರಿಶ್ರಮ ವಹಿಸಿದಲ್ಲಿ ನೀವು ಹೇಳುವ ಮಾತು ಅವನಿಗೆ ತಿಳಿಯುವಂತೆ ನಿಶ್ಚಯವಾಗಿ ಹೇಳಬಲ್ಲಿರಿ. ಸತ್ಯವನ್ನು ಹೇಳುವುದು ಯಾವಾಗಲೂ ಯೋಗ್ಯವಲ್ಲವೆಂದು ಸಾಮಾನ್ಯ ಜನಾಭಿಪ್ರಾಯವಿದ್ದರೂ ಸತ್ಯ ಹೇಳುವುದೇ ಸದಾ ಹಿತಕರವೆಂದು ನಾನು ಖಂಡಿತವಾಗಿ ಹೇಳುತ್ತೇನೆ. ಇಷ್ಟೇ, ಅದನ್ನು ಕೇಳುವವರ ಮಿದುಳಿಗೆ ಅದು ಹೋಗಿ ಮುಟ್ಟುವಂತೆ ಹೇಳುವುದೇ

ಕೌಶಲ್ಯದ ಮಾತಾಗಿದೆ. ಚಿಕ್ಕಂದಿನಲ್ಲಿ ೧೨–೧೪ ವಯಸ್ಸಿನ ವರೆಗೆ! ತಾತ್ತ್ವಿಕ ವಿಚಾರಗಳಾಗಲಿ ಗಹನ ಕಲ್ಪನೆಗಳಾಗಲಿ ಮಗುವಿನ ಮನಸ್ಸಿಗೆ ಹಿಡಿಸಲಾರವು. ಆದರೂ ಪ್ರತ್ಯಕ್ಷ ಉದಾಹರಣೆಗಳಿಂದಲೂ, ರೂಪಕ ಗಳ ಮೂಲಕವೂ, ನೀತಿಕಥೆಗಳ ಮುಖಾಂತರವೂ ಅಂಥ ವಿಚಾರ ಇಲ್ಲವೆ ಕಲ್ಪನೆಗಳನ್ನು ಗ್ರಹಿಸಿಕೊಳ್ಳುವ ಶಕ್ತಿಯನ್ನು ಮಗುವಿಗೆ ತಂದುಕೊಡಬಹುದು. ಪ್ರಬುದ್ಧ ವಯೋಮಾನ ಬರುವ ವರೆಗೆ ಮತ್ತು ಮನಸ್ಸಿನಿಂದ ಯಾವಾಗಲೂ ಹುಡುಗರಾಗಿಯೇ ಉಳಿಯುವ ಕೆಲವರಿಗೆ ಸಾವಿರ ತಾತ್ತ್ವಿಕ ವಿವರಣೆಗಳಿಗಿಂತಲೂ ಒಂದು ಕಥೆ, ಒಂದು ನಿರೂಪಣೆ ಅಥವಾ ಒಂದು ಪ್ರಾಸಂಗಿಕ ವರ್ಣನೆ ಹೆಚ್ಚು ಬೋಧಪ್ರದವಾಗಿ ಪರಿಣಮಿಸುವುದು.

ನೀವು ಮಾಡದಿರಬೇಕಾದ ಇನ್ನೊಂದು ತಪ್ಪಿನತ್ತ ನಿಮ್ಮ ಲಕ್ಷ್ಯವನ್ನೆಳೆಯುವೆ. ಒಂದು ನಿರ್ದಿಷ್ಟ ಉದ್ದೇಶವಿಲ್ಲದೆ ಮತ್ತು ಅನಿವಾರ್ಯ ಪ್ರಸಂಗದ ವಿನಾ ಮಗುವಿಗೆ ಛೀ ಹಾಕಬೇಡಿರಿ. ಮೇಲಿಂದ ಮೇಲೆ ಮಕ್ಕಳಿಗೆ ಛೀ ಹಾಕುತ್ತ ಹೋದರೆ ಅದು ಅವರಿಗೆ ರೂಢಿಯಾಗಿಹೋಗಿ ನಿಮ್ಮ ಸಿಟ್ಟಿನ ಧ್ವನಿಗೂ ಬೆದರಿಕೆಗೂ ಮಕ್ಕಳು ಮಹತ್ತ್ವ ಕೊಡದಂತಾಗುವರು. ವಿಶೇಷತಃ ನೀವು ಸ್ವತಃ ಯಾವ ತಪ್ಪನ್ನು ಮಾಡುವಿರೋ ಅದರ ಬಗ್ಗೆ ಮಕ್ಕಳಿಗೆ ಎಂದೂ ಬೈಯಬೇಡಿರಿ. ಅವರಲ್ಲಿ ತೀಕ್ಷ್ಣ ಹಾಗು ಸ್ಪಷ್ಟ ನಿರೀಕ್ಷಣಶಕ್ತಿ ಇರುವುದುಂಟು. ಅವರು ಬೇಗನೆ ನಿಮ್ಮ ದೋಷವನ್ನು ಕಂಡುಹಿಡಿದು ದಯೆದಾಕ್ಷಿಣ್ಯವಿಲ್ಲದೆ ಅದನ್ನು ನೆನಪಿಡುತ್ತಾರೆ.

ಮಗುವು ಏನಾದರೂ ತಪ್ಪುಮಾಡಿದರೆ ಅವನು ತಾನಾಗಿಯೇ ಮುಚ್ಚುಮರೆಯಿಲ್ಲದೆ ನಿಮ್ಮ ಬಳಿಯಲ್ಲಿ ಒಪ್ಪಿಕೊಳ್ಳುವಂತೆ ನೋಡಿಕೊಳ್ಳಿರಿ. ಅವನು ಆ ರೀತಿ ಒಪ್ಪಿಕೊಂಡಬಳಿಕ ಅವರಲ್ಲಿ ಅವನದು ಎಲ್ಲಿ ತಪ್ಪಿತ್ತೆಂಬು ದನ್ನು ಪ್ರೀತಿ-ಮಮತೆಗಳಿಂದ ತೋರಿಸಿಕೊಟ್ಟು, ಪುನಃ ಹಾಗೆ ತಪ್ಪದಂತೆ ಎಚ್ಚರಿಸಿರಿ. ಆದರೆ ಸರ್ವಥಾ ಅವನನ್ನು ಜರೆಯಬೇಡಿರಿ. ಒಪ್ಪಿಕೊಂಡ ತಪ್ಪನ್ನು ಕ್ಷಮಿಸಲೇಬೇಕು. ನಿಮ್ಮ ಮತ್ತು ಮಗುವಿನ ನಡುವೆ ಯಾವ ಭಯ-ಬೆದರಿಕೆಗಳೂ ನುಸುಳಬಾರದು. ಭಯವು ಶಿಕ್ಷಣಕ್ಕೆ ಘಾತಕ ಮಾರ್ಗವಾಗಿದೆ. ಅದರಿಂದ ಯಾವಾ ಗಲೂ ವಂಚನೆ–ನಟನೆಗಳೇ ಹುಟ್ಟಿಬರುವವು. ಮಗುವಿನ ಶಿಕ್ಷಣವು ಪರಿಣಾಮಕಾರಿಯಾಗಲು ಅತ್ಯಗತ್ಯವಾದ ಪರಸ್ಪರ ವಿಶ್ವಾಸಕ್ಕೆ ಎರಡು ಸಂಗತಿಗಳು ಕಾರಣವಾಗಿವೆ: ಅವೆಂದರೆ ದೃಢವಾಗಿದ್ದೂ ಕೋಮಲತೆಯಿಂದೊಡ ಗೂಡಿದ, ಕಣ್ಣುಳ್ಳ ವಾತ್ಸಲ್ಯ ಹಾಗು ಸಾಕಷ್ಟು ವ್ಯವಹಾರಜ್ಞಾನ.

ಸದಾಕಾಲವೂ ಸತತವೂ ನೀವು ನಿಮ್ಮನ್ನು ಸಂಯಮದಲ್ಲಿಟ್ಟುಕೊಂಡು ನಿಮ್ಮ ಧ್ಯೇಯಸಾಧನದ ಅತ್ಯುನ್ನತ ಶಿಖರವನ್ನು ಸ್ವತಃ ಏರಿ ನಿಲ್ಲಬೇಕೆಂಬುದನ್ನು ಎಂದೂ ಮರೆಯಬೇಡಿರಿ; ಹಾಗು ಮಗುವಿಗೆ ಜನ್ಮ ಕೊಟ್ಟ ಕಾರಣದಿಂದಲೇ ನೀವು ಅವನ ಬಗ್ಗೆ ನಿರ್ವಹಿಸಬೇಕಾದ ಕರ್ತವ್ಯವನ್ನು ಮನಃಪೂರ್ವಕವಾಗಿ ನೆರ ವೇರಿಸಿರಿ.

—ಶ್ರೀ ಮಾತಾಯಿಯವರು
(ಅನುವಾದಕರು: ಶ್ರೀ. ವಸಂತ ಕುಲಕರ್ಣಿ)

---

# ಶ್ರೀ ಅರವಿಂದ ದರ್ಶನ

(ದಿ. ೨೪-೧೧-೫೧ಕ್ಕೆ ಪಾಂಡಿಚೇರಿಗೆ ಶ್ರೀ ಅರವಿಂದಾಶ್ರಮಕ್ಕೆ 'ದರ್ಶನ'ಕ್ಕೆ ಹೋದಾಗ ಬರೆದದ್ದು)

ದೂರದೂರಿನ ಕೂಸು ದಾರಿಗಾಣದೆ ಬಳಲಿ ಬಂದೆನ್ನೈ ತಮ್ಮಡಿಗೆ ತಂದೆ !
ದೂರದೂರದ ಕನಸು ನನಸಾಗಿ ಹೇಳಿತ್ತು—' ದೂರಲ್ಲ ದೂರಲ್ಲ 'ವೆಂದೆ !

ತಮ್ಮ ಅಡಿದಾವರೆಗೆ ಎನ್ನ ಮಸ್ತಕವಿಡಲು ಎಲ್ಲಿಂದೊ ಬಂತು ಗಾನ
**ಗೊಂಯೆಂದು, ಝುಂಯೆಂದು, ಸೊಂಯೆಂದು ಸುಳಿಸುಳಿದು ರೂಪುಗೊಂಡಾಯ್ತು ಕವನ !**

ಏನುಏನದು ಶಾಂತಿ ! ಎಂಥ ಎಂಥಹ ಕಾಂತಿ ! ಅದ್ಭುತದ ಅಮರಲೋಕ—
**ಹೂವಾಗಿ, ಕಂಪಾಗಿ,** ಸೊಂಪಾಗಿ ಬೀರುವದು ಮಕರಂದ ಮೂರು ಲೋಕ !

ಹೂವರಳಿ ಹಿಂಡಾಗಿ, ತೊಂಡತೊಂಡಲವಾಗಿ ತಮ್ಮಡಿಯ ತುಂಬ ಹಾಸು !
ಭಾವದುಂಬಿಯು 'ಆವ ಹೂವ ಮೂಸಲಿ' ಎಂದು ಅಲೆಯುವದು ತಾಸುತಾಸು !

ಹೂವೆಂದು ತೋರುವದು, ಮಕರಂದವೆನಿಸಿಹುದು, ಪ್ಪೈಮನದ ಆತ್ಮ ತಣಿವು !
**ಯಾವ ಹೂವೋ ಕಾಣೆ !** ಎಂಥ ವಾಸನೆ ಅರಿಯೆ ! ಆದರೂ ಹಿಂಗುತಿದೆ ಹಸಿವು !

ಮೂಕ ಸಕ್ಕರೆ ತಿಂದ ಸವಿಯ ಹೇಳುವನೇನು ? ನನಗಿದುವು ಒಡೆಯದೊಗಟು !
ನಾಕ ಸುತ್ತುವೆನೆಂದು ಅರಿವಾಗುತಿದೆ ಮಾತ್ರ ಮಣಿಮಣಿದು ನಾ ಕಂಡ ಗುಟ್ಟು!

ಅಲ್ಲಿಯವರಿಲ್ಲಿಯವರೆಲ್ಲೆಲ್ಲಿಯವರೆಷ್ಟೊ, ಮೂಡುಮುಳುಗುಗಳಿಂದ ಬಂದಿರುವರು
ಇಲ್ಲಿ ಎಲ್ಲರು ನಿಮ್ಮ ಅಡಿಗಳಿಗೆ ಮಣಿದಾಗ ಎಂದಿಗೂ ಹೃದಯದಿಂದೊಂದೆಂಬರು !

ನೆಲಭೇದ, ಜಲಭೇದ, ಗುಣಬಣ್ಣಗಳ ಭೇದದೆಳೆ ಎಳೆಗಳೊಂದುಗೂಡಿ
ಮಾಲೆ-ದಾರಗಳಾಗಿ ಶೋಭೆಗೊಂಡಿಹವಯ್ಯ ತಮ್ಮಡಿಯ ಪೂಜಿಸುವ ಭಾಗ್ಯ ಬೇಡಿ!

ಅಲ್ಲಿ ಇಲ್ಲಿಯದೆಂಬ ಸೊಲ್ಲು ಕೇಳುವದೆಲ್ಲ, ಇಲ್ಲಿಯೇ ಕಾಣುತಿಹೆ ಕವಿಯಾಗಿ ಕೂಸು
ಕಾಲಕಾಲಕು ತಮ್ಮ ಅಡಿಗಡುವ ಹೂವಾಗಿ ಅರಳಲೆಂದೊರಲುವದು ಬಾಲಮನಸು !

**— ಸಂಗಮೇಶ ಹೊಸಮನಿ,**
ಹುನಗುಂದ

# ಪ್ರಕೃತಿಯ ಪರಿವರ್ತನೆ

## ವಿಶ್ವವೇ ವಿದ್ಯಾಲಯ

ಪ್ರತಿ ಒಬ್ಬನು ತನ್ನ ಆಯುಷ್ಯದ ಅವಧಿಯಲ್ಲಿ ಅನೇಷ್ಟೋ ಅನುಭವಗಳನ್ನು ಸಂಪಾದಿಸುತ್ತಾನೆ. ಅವನು ತನ್ನ ಸುತ್ತಲಿನ ಪರಿಸರದಿಂದಲೂ ಬಂಧುಮಿತ್ರರಿಂದಲೂ ಪ್ರತಿಯೊಂದು ನಿಮಿಷದಲ್ಲಿ ಏನಾದರೊಂದು ವಿಷಯವನ್ನು ಅಭ್ಯಸಿಸುತ್ತಲೇ ಇರುತ್ತಾನೆ. ತಾನು ಹಾಗೆ ಅಭ್ಯಸಿಸುತ್ತಿದ್ದೇನೆಂಬ ಎಚ್ಚರಿಕೆ ಸಹ ಅವನಿಗೆ ಇರುತ್ತಿರುವುದಿಲ್ಲ. ಎಚ್ಚರಿಕೆ ಇರಲಿ ಇಲ್ಲದಿರಲಿ, ಆವನ ಅಭ್ಯಾಸ ಮಾತ್ರ ಸಾಗಿರುತ್ತದೆ. "ಯಾರು ಏನೇ ಅಂದುಕೊಳ್ಳಲಿ, ನಾನು ಮಾತ್ರ ಈ ಪ್ರಪಂಚವೆಂಬುದಕ್ಕೆ ಒಂದು ಶಿಕ್ಷಣಾಲಯವೆನ್ನುತ್ತೇನೆಂ"ದು ಶ್ರೀ ವಿವೇಕಾನಂದರು ಹೇಳುವ ಮಾತು ಅದೆಷ್ಟು ಯಥಾರ್ಥವಾಗಿದೆ! ಈ ಶಿಕ್ಷಣಾಲಯದಲ್ಲಿ ಎಚ್ಚರಿಕೆಯಿಲ್ಲದೆ ಅಭ್ಯಸಿಸುತ್ತಿದ್ದರೂ ವಿದ್ಯಾರ್ಥಿಗಳಿಗೆ ಜ್ಞಾನ, ಶಕ್ತಿ, ಸಾಮರಸ್ಯ, ಸಿದ್ಧಿ ಎಂಬ ನಾಲ್ಕು ವಿಷಯಗಳನ್ನು ಕಲಿಸಲಾಗುತ್ತದೆ. ಈ ವಿದ್ಯಾಸಂಪಾದನೆಯಿಂದ ಮನುಷ್ಯನು ಪರಿಪೂರ್ಣನಾಗುತ್ತಾನೆ. ಪರಿಪೂರ್ಣ ಮನುಷ್ಯನೇ ದಿವ್ಯಮಾನವತೆಯ ದಾರಿಯಲ್ಲಿ ಮುಂದುವರಿಯುತ್ತಾನೆ. ಆದರೆ ಮನುಷ್ಯನು ತನ್ನ ಅಪೂರ್ಣತೆಯ ಕಾರಣದಿಂದ ಲೆಕ್ಕವಿಲ್ಲದಷ್ಟು ಸಂಕಟ, ದುಃಖ, ನೋವು ಇವುಗಳಲ್ಲಿ ತೊಳಲಾಡುತ್ತಿದ್ದಾನೆ. ಈ ಕುತ್ತುಗಳೊಳಗಿಂದ ಪಾರಾಗಬೇಕಾದರೆ ಮನುಷ್ಯನು ಸಾಧ್ಯವಾದಷ್ಟು ತೀವ್ರ ಪೂರ್ಣತೆಯನ್ನು ಸಂಪಾದಿಸಬೇಕಾಗುತ್ತದೆ. ಎತ್ತ ಸಾಗಿದರೂ ಹೇಗೆ ಸಾಗಿದರೂ ನದಿಯು ಸಮುದ್ರದ ಕಡೆಗೇ ಸಾಗಿದ ಹಾಗೆ ಮನುಷ್ಯನು ಪೂರ್ಣತೆಯ ನಿಟ್ಟಿಗೇ ಸಾಗಿದ್ದಾನೆ. ಇಂಥ ಪಯಣಿಗನ ದಾರಿಗೆ ಸುತ್ತುವರಿಕೆ ಬಹಳ. ಈ ಸುತ್ತುವರಿಕೆಯನ್ನು ತಪ್ಪಿಸಿ ನೇರವಾದ ದಾರಿಯಲ್ಲಿ ಸಾಗಬೇಕೆಂಬ ಆಶೆಯುಂಟಾದವರಿಗೆ ಉಪಾಯಗಳು ಇಲ್ಲದಿಲ್ಲ. ನಾವು ಕಲಿಯಬೇಕಾದ ಇಲ್ಲವೆ ನಮಗೆ ಕಲಿಸಬೇಕಾದ ವಿಷಯಗಳು ನಾಲ್ಕು ಇವೆಯೆಂದು ಹೇಳಿತಷ್ಟೇ? ಅವುಗಳನ್ನು ನಮಗೆ ಕಲಿಸುವ ಗುರು-ಶಕ್ತಿಗೆ ತಾಯಿಯೆಂದಿದ್ದಾರೆ. ಒಬ್ಬಳೇ ತಾಯಿಯು ನಾಲ್ಕು ವಿಷಯಗಳನ್ನು ಕಲಿಸಿದರೂ ಅವಳು ನಾಲ್ಕು ಬಗೆಯ ವೇಷದೊಟ್ಟು ನಿಲ್ಲುತ್ತಾಳೆ. ಒಬ್ಬ ಶಿಕ್ಷಕನು ಶಾಸ್ತ್ರಸೂತ್ರಗಳನ್ನು ಹೇಳುವಾಗ ಗಂಭೀರವಾದ ಮುಖಮುದ್ರೆಯನ್ನು ತಳೆಯುವುದರಿಂದ ನಾವೂ ಗಂಭೀರರೇ ಆಗಿ ಕುಳಿತಿರುತ್ತೇವೆ. ಅದೇ ಶಿಕ್ಷಕನು ಅಂಗಸಾಧನೆ ಕಲಿಸನಿಂತಾಗ ಕೊಡುವ ಕಟ್ಟಪ್ಪಣೆಗಳನ್ನು ಪಾಲಿಸುವುದಕ್ಕೆ ಭಯಭೀತರಾಗಿ ನಿಂತಿರುತ್ತೇವೆ. ಕಾವ್ಯಾಭ್ಯಾಸವನ್ನು ಹೇಳುವ ಕಾಲಕ್ಕೆ ಅದೇ ಶಿಕ್ಷಕನ ಸನಿಹಕ್ಕೆ ಹೋಗಿ ಕುಳಿತು ಪಾಠವು ಮುಗಿಯಲೇಬಾರದೆನ್ನುವ ಮಟ್ಟಿಗೆ ಹಿಗ್ಗಿನಲ್ಲಿ ಮೈಮರೆತು ಮುಳುಗಿರುತ್ತೇವೆ. ಬರಲಾರದ ಓರಣ-ಅಚ್ಚುಕಟ್ಟುಗಳನ್ನು ಮರಮರಳಿ ರೂಢಿಸುತ್ತ ಬೇಸರವಿಲ್ಲದೆ ಶ್ರಮಿಸುತ್ತಿರುವಾಗ ಅದೇ ಶಿಕ್ಷಕನು ಹತ್ತುಗಡೆಯ ಆಪ್ತನಾಗಿ ತೋರುವನು. ಅದರಂತೆಯೇ ವಿಶ್ವದ ಗುರುವಾದ ತಾಯ ಶಕ್ತಿಯು ನಾಲ್ಕು ರೂಪಗಳನ್ನೇ ಧಾರಣ ಮಾಡುತ್ತಾಳೆ. ವಿಶ್ವವೇ ವಿದ್ಯಾಲಯ. ಮಾತೃ-ಶಕ್ತಿಯೇ ಗುರು. ಕಲಿಯುವ ವಿಷಯಗಳು ಜ್ಞಾನ-ಶಕ್ತಿ-ಸಾಮರಸ್ಯ-ಸಿದ್ಧಿ. ದುಃಖ ಜಂಜಡಗಳಿಂದ ತಪ್ಪಿಸಿಕೊಂಡು ಮನುಷ್ಯನು ಪರಿಪೂರ್ಣನಾಗಿ ನಿಂತು ದಿವ್ಯಜೀವನದ ಉಪಕರಣವಾಗುವುದೇ ಶಿಕ್ಷಣದ ಉದ್ದೇಶ.

# ಗುರುವಿನೊಲುಮೆ

ಹಸಿದ ಕರು, ತೊರವು ಬಿಟ್ಟ ಆವು ಕೂಡಿದರೆ ಅಲ್ಲೊಂದು ಸಂತೃಪ್ತಿ. ಅದರಂತೆ ಜ್ಞಾನತೃಷಿತ ವಿದ್ಯಾರ್ಥಿಗೆ ಪ್ರಸನ್ನಗೊಂಡ ಗುರುವು ಸಂಧಿಸಿದಾಗಳೇ ವಿದ್ಯಾಸಾರ್ಥಕತೆಯುಂಟಾಗುವುದು. ವಿದ್ಯಾರ್ಥಿಯು ಶಾಲೆಯೊಳಗಿನ ಎಲ್ಲ ವಿಷಯಗಳನ್ನೂ ಕಲಿಯುವುದು ಅನಿವಾರ್ಯವೇ ಆಗಿದ್ದರೂ ಅವೆಲ್ಲವುಗಳಲ್ಲಿ ಒಂದಾನೊಂದು ವಿಷಯವು ಅತ್ಯಂತ ಒಲವಿನದಾಗಿರುತ್ತದೆ. ಆ ವಿಷಯವನ್ನು ಕಲಿಸುವ ಶಿಕ್ಷಕನನ್ನು ಉಳಿದ ಶಿಕ್ಷಕರಿಗಿಂತ ಹೆಚ್ಚಾಗಿ ಆತನು ಪ್ರೀತಿಸುತ್ತಾನೆ. ವಿಶ್ವದ ಶಾಲೆಯಲ್ಲಿ ಕಲಿಸಲ್ಪಡುವ ನಾಲ್ಕು ವಿಷಯಗಳಲ್ಲಿ ನಮಗೆ ಅತ್ಯಂತ ಒಲವಿನದಾದ ಒಂದು ವಿಷಯವಿರುತ್ತದೆ. ಆ ಒಲವು ನಮ್ಮ ಭೌತ ಪ್ರಕೃತಿಯ ಪ್ರತಿಯೊಂದು ಅಣುವಿನಲ್ಲಿ ಕಂಗೊಳಿಸುತ್ತದೆ. ನಮ್ಮ ಪ್ರಕೃತಿಯ ಪ್ರತಿಯೊಂದು ಅಣುವು ವಿಶ್ವದಿಂದ ಗ್ರಹಿಸುವುದೂ ಆ ಒಲವಿನ ವಿಷಯವನ್ನೇ; ಪರಿಸರಕ್ಕೆ ತೂರುವುದೂ ಆ ಒಲವಿನ ವಿಷಯವನ್ನೇ. ಆದ್ದರಿಂದ ತಮ್ಮೊಲವಿನ ವಿಷಯುವಾವುದೆಂಬುದನ್ನು ಪ್ರತಿಯೊಬ್ಬರೂ ಕಂಡುಕೊಳ್ಳಬಹುದಾಗಿದೆ. ಒಲವಿನ ವಿಷಯವು ಕಂಡುಬಂದ ಮೇಲೆ ಅದರ ಶಿಕ್ಷಕನು ಯಾರೆಂಬುದನ್ನು ತಿಳಕೊಳ್ಳುವುದಕ್ಕೆ ತಡವಾಗುವುದಿಲ್ಲ. ಒಲವಿನ ವಿಷಯ, ಅದನ್ನು ಕಲಿಸುವ ಶಿಕ್ಷಕ ಇವು ತಿಳಿದ ಮಾತ್ರಕ್ಕೆ ಇನ್ನುಳಿದ ವಿಷಯಗಳನ್ನಾಗಲಿ, ಇನ್ನುಳಿದ ಶಿಕ್ಷಕರನ್ನಾಗಲಿ ಅಲಕ್ಷಿಸಲಿಕ್ಕಾಗದು. ಪಾಠ ನಡೆದಿರುವ ವಿಷಯ ಬದಲಾದಂತೆ ಅದನ್ನು ಹೇಳಿಕೊಡುವ ಶಿಕ್ಷಕನೂ ಬದಲಾಗುತ್ತಾನೆ. ಬದಲಾದ ಶಿಕ್ಷಕನನ್ನು ಪ್ರಸನ್ನಗೊಳಿಸುವುದಕ್ಕೆ ಉಪಾಯಗಳನ್ನೂ ಬದಲಿಸಬೇಕಾಗುತ್ತದೆ. ಆ ಉಪಾಯಗಳಿಂದ ಗುರುವಿನೊಲುಮೆಯುಂಟಾಗುತ್ತದೆ. ಆ ಗುರುವು ಒಲಿದರೆ ಕೊರಡು ಕೊನರುತ್ತದೆ; ಬರಡು ಹಯನಾಗುತ್ತದೆ.

# ಶಿಕ್ಷಕರಾದ ನಾಲ್ಕು ಮಾತೃಶಕ್ತಿಗಳು

ನಾಲ್ಕು ವಿಷಯಗಳಾದ ಜ್ಞಾನ, ಶಕ್ತಿ, ಸಾಮರಸ್ಯ, ಸಿದ್ಧಿ ಇವುಗಳನ್ನು ಕಲಿಸುವುದಕ್ಕೆ ನಾಲ್ಕು ಮಾತೃಶಕ್ತಿಗಳಿವೆ. ಆ ನಾಲ್ಕು ಮಾತೃಶಕ್ತಿಗಳಿಗೆ ಕ್ರಮವಾಗಿ ಮಹೇಶ್ವರಿ, ಮಹಾಕಾಳಿ, ಮಹಾಲಕ್ಷ್ಮಿ, ಮಹಾಸರಸ್ವತಿ ಎನ್ನುತ್ತಾರೆ. ಈ ಮಾತೃಶಕ್ತಿಗಳಿಗೆ ಖಂಡಿತವೃತ್ತಿ ಒಂದು ಕೈಯಾದರೆ, ಪ್ರಸನ್ನವೃತ್ತಿ ಇನ್ನೊಂದು ಕೈಯೆಂದು ತೋರಿಬರುತ್ತದೆ. "ಒಂದು ಕೈಯಲ್ಲಿ ಓಜುಗಟ್ಟಿಗೆ ಇನ್ನೊಂದು ಕೈಯಲ್ಲಿ ಹಾಲುಬಟ್ಟಲು ಹಿಡಿದುಕೊಂಡು" ಕೂಡಲ ಸಂಗನು ಬಂದು ಶ್ರೀ ಬಸವಣ್ಣನವರ ಪ್ರಕೃತಿಯನ್ನು ಪರಿವರ್ತನ ಮಾಡುತ್ತಿದ್ದನೆಂದು ಕಂಡುಬರುತ್ತದೆ. ಮಹಾಸಂಪದ್ದಾಯಿನಿಯಾದ ಭುವನೇಶ್ವರಿಗೆ ಶ್ರೀ ವಿದ್ಯಾರಣ್ಯರು—" ವರದಾಂಕುಶಪಾಶಾಂ ಭೀತಿಕರಾಂ ವಂದೇ ಭುವನೇಶೀಂ" ಎಂದು ಪ್ರಾರ್ಥಿಸಿ ಅವಳ ವರದಹಸ್ತಕ್ಕೂ, ಅಂಕುಶಪಾಶಗಳಿಗೂ ತಲೆವಾಗುತ್ತಿದ್ದರೆಂದು ತಿಳಿಯುತ್ತದೆ. ಮೇಲೆ ಕಾಣಿಸಿದ ನಾಲ್ಕು ಮಾತೃಶಕ್ತಿಗಳಲ್ಲಿ ಯಾವುದು ಮುಖ್ಯವಾಗಿ ನಮ್ಮ ಬಾಳನ್ನು ತರಬೇತುಗೊಳಿಸುತ್ತದೆಯೆಂಬುದನ್ನು ಒಂದಿಷ್ಟು ಸ್ವನಿರೀಕ್ಷಣೆ ಮಾಡಿದರೆ ತಿಳಿಯುವುದು. ಉಳಿದ ಶಕ್ತಿಗಳು ಅಮುಖ್ಯವೆನಿಸಿದರೂ ಅವು ಅನಿವಾರ್ಯವಾಗಿವೆ. ಯಾಕಂದರೆ ಉಳಿದ ಮೂರು ಶಕ್ತಿಗಳ ವರ್ಗಗಳಲ್ಲಿಯೂ ನಾವು ಕುಳಿತು ತಿದ್ದಪಡೆಹೊಂದಲೇ ಬೇಕಾಗುತ್ತದೆ. ಮಹೇಶ್ವರಿ ಮಾತೆಗೆ " ಜ್ಞಾನವೇ ಅವಳ ಶಕ್ತಿಯ ಕೇಂದ್ರ "ವಾಗಿದ್ದರೂ ಅವಳು ತನ್ನ ಮಕ್ಕಳನ್ನು ಮಹಾಕಾಳಿಯಂತೆ " ಪರಾತ್ಪರದ ಶಾಸನಗಳನ್ನು ಅನುಸರಿಸುತ್ತ ಕೆಲವರನ್ನು ಕೆಳಗೆಸೆಯುವಳು." ಅವಳಿಗೂ ಮಹಾಲಕ್ಷ್ಮಿಗೆ ಹೇಗೋ ಹಾಗೆ, "ಅಸುರ ರಾಕ್ಷಸ ಪಿಶಾಚರೂ ವಿರೋಧಕ ದ್ವೇಷಿಗಳೂ ಏಕಮೇವಾದ್ವಿತೀಯದ ಅಂಶಗಳೇ" ಆಗಿದ್ದಾರೆ. ಅವಳು ಮಹಾಸರಸ್ವತಿಯಂತೆ " ಅಜ್ಞಾನಿಗಳನ್ನೂ ಮೂರ್ಖರನ್ನೂ ಅವರ ಕುರುಡುತನಕ್ಕೆ ಅನುಸರಿಸಿ ಸಾಗಿಸುತ್ತಾಳೆ."

ಮಹಾಕಾಳಿಗೆ "ಔನ್ನತ್ಯ-ಶಕ್ತಿಬಲಗಳು" ವೈಶಿಷ್ಟ್ಯವಾಗಿದ್ದರೂ ಅವಳು "ಜ್ಞಾನಕ್ಕೆ ವಿಜಯ ಸಾಮರ್ಥ್ಯವನ್ನು ಕೊಟ್ಟು" ಮಹೇಶ್ವರಿಯ ಕಾರ್ಯಬೀಜವನ್ನೂರುವಳು. "ಸೌಂದರ್ಯ ಸಾಮರಸ್ಯಗಳಿಗೆ ಉತ್ತರೋತ್ತರ ಚಲನೆ"ಯನ್ನು ಕೊಟ್ಟು ಮಹಾಲಕ್ಷ್ಮಿಯ ಬರವಿಗೆ ದಾರಿ ಮಾಡಿಕೊಡುವಳು. "ಪೂರ್ಣತೆಗಾಗಿರುವ ಮಂದ ಕಠಿಣ ಪರಿಶ್ರಮಕ್ಕೆ ನೂರ್ಮಡಿ ಬಲವನ್ನು" ತುಂಬಿ ಮಹಾಸರಸ್ವತಿಯು ಕಾರ್ಯಪೀಠಿಕೆಯನ್ನು ಸ್ಥಾಪಿಸುವಳು. ಇದನ್ನು ಲಕ್ಷಿಸಿದರೆ ಯಾವ ವಿಷಯವೂ ಸ್ವತಂತ್ರವಾಗಿಲ್ಲ; ಯಾವುದೂ ಪರಿಪೂರ್ಣವಲ್ಲ; ಒಂದರೊಳಗೊಂದು ಹಾಸುಹೊಕ್ಕಾಗಿ ವ್ಯಾಪಿಸಿಕೊಂಡು ಪರಿಪೂರ್ಣಗೊಳ್ಳುವ ಎತ್ತುಗಡೆಯಲ್ಲಿರುವವು.

## ನಾಲ್ಕು ಶಿಕ್ಷಣಗಳಿಗೂ ಒಂದೇ ಗುರಿ

ನಾಲ್ಕು ಮಾತೃಶಕ್ತಿಗಳಿದ್ದರೂ ಅವವುಗಳಿಗೆ ಪ್ರತ್ಯೇಕ ವಿಷಯವಿದ್ದರೂ ಅವು ಇನ್ನುಳಿದ ಮೂರು ಶಕ್ತಿಗಳ ಆವಶ್ಯಕತೆಯನ್ನು ತಂದು ನಿಲ್ಲಿಸುತ್ತವೆ. ಆ ನಾಲ್ಕು ಕಾರ್ಯಗಳೆಲ್ಲ ಒಂದೇ ಕಾರ್ಯದ ಉಪಕಾರ್ಯಗಳಾಗಿವೆ. ಹೇಗಂದರೆ--"ಮಹೇಶ್ವರಿಯು ಲೋಕಶಕ್ತಿಗಳ ಸ್ಥೂಲರೇಷೆಗಳನ್ನು ಹಾಕಿಕೊಡುತ್ತಾಳೆ. ಮಹಾಕಾಳಿಯು ಅವುಗಳಲ್ಲಿ ಪ್ರಾಣಶಕ್ತಿಯನ್ನೂ ಪ್ರಚೋದನೆಯನ್ನೂ ಒದಗಿಸುತ್ತಾಳೆ. ಮಹಾಲಕ್ಷ್ಮಿಯು ಛಂದಗಳನ್ನು (Rhythms) ಕಂಡುಹಿಡಿಯುತ್ತಾಳೆ. ಆದರೆ ಮಹಾಸರಸ್ವತಿಯು ಅವುಗಳ ಸಂಘಟನೆ-ನಿರ್ವಹಣಗಳ ವಿವರ, ಅವಯವ ಸಂಬಂಧ, ಶಕ್ತಿಗಳ ಫಲದಾಯಕವಾದ ಜೋಡಣೆ ಮತ್ತು ಪರಿಣಾಮಪೂರ್ಣ ಸಿದ್ಧಿಗಳ ವಿಷಯದಲ್ಲಿಯ ಅಮೋಘವಾದ ಯಥಾರ್ಥತೆ ಇವನ್ನು ಅಧಿಷ್ಠಿಸಿ ನೋಡಿಕೊಳ್ಳುತ್ತಾಳೆ." ಈ ನಾಲ್ವರು ಮಾತೆಯರು ಬೇರೆಬೇರೆ ನಿಲವಿನಲ್ಲಿ ನೆಲೆಗೊಂಡಿದ್ದರೂ ಒಂದೊಂದು ವಿಧದಲ್ಲಿ ಅವರೆಲ್ಲರೂ ಅತ್ಯುಚ್ಚ ಸ್ಥಿತಿಗೆ ಕಾರಣರಾಗಿದ್ದಾರೆ. ಮಹೇಶ್ವರಿಯು ಎಲ್ಲದಕ್ಕೂ ದೂರವಾಗಿದ್ದಾಳೆ. ಅವಳು "ಮನಸ್ಸು ಸಂಕಲ್ಪಗಳ ಮೇಗಡೆಯ ಹರಹಿನಲ್ಲಿ ಆಸೀನಳಾಗಿದ್ದಾಳೆ. ಮಹೇಶ್ವರಿಯು ಮರ್ತ್ಯ ಪ್ರಕೃತಿಯ ಅಲ್ಪತೆ ಹತ್ತಿರ ಸಾರದಷ್ಟು ಇಲ್ಲವೆ ತಾಳದಷ್ಟು ಶಾಂತ, ಘನ, ದೂರವಾಗಿ ತೋರಬಲ್ಲಳು. ಬೇರೆ ಯಾರಿಗಿಂತಲೂ ಮಿಗಿಲಾಗಿ ಅವಳಲ್ಲಿ ಜಗನ್ಮಾತೆಯ ಹೃದಯವಿದೆ." ಅದರಂತೆ ಮಹಾಕಾಳಿಗೂ ಒಂದು ಉಚ್ಚವಾದ ವಿಶಿಷ್ಟಸ್ಥಾನವಿದ್ದುದು ಕಂಡುಬರುತ್ತದೆ. "ಮಹಾಕಾಳಿಯು ಪ್ರಕೃತಿ ಮಹೇಶ್ವರಿಯಂತೆ ವಿಸ್ತಾರವಲ್ಲ, ಎತ್ತರ. ಜ್ಞಾನವಲ್ಲ, ಶಕ್ತಿ-ಬಲಗಳು ಅವಳ ವೈಶಿಷ್ಟ್ಯ. ನಮ್ಮ ಪ್ರಕೃತಿಯ ದುರ್ಬಲತೆ ಸಹಿಸಲಾರದಷ್ಟು ಸವೇಗವೂ ಭೀಕರವೂ ಆಗಿ ಮಹಾಕಾಳಿ ತೋರಬಲ್ಲಳು. ಅವಳ ಚೇತನ ಉಗ್ರ. ಅವಳ ದರ್ಶನ ಸಂಕಲ್ಪಗಳು ಹದ್ದಿನ ಹಾರುವಿಕೆಯಂತೆ ಉನ್ನತ, ದೂರಗಾಮಿ. ಅವಳ ಈ ಚಲನವು ಊರ್ಧ್ವಗತಿಯಲ್ಲಿ ವೇಗವಾಗಿದೆ. ಅವಳ ಪ್ರೀತಿ ಅವಳ ಕೋಪದಷ್ಟೇ ಉತ್ಕಟವಾದುದು. ಅವಳಿಲ್ಲದಿದ್ದರೆ ಒಂದು ದಿನದಲ್ಲಿ ಆಗುವ ಕೆಲಸಕ್ಕೆ ಶತಮಾನಗಳು ಬೇಕಾಗುತ್ತಿದ್ದವು. ದೇವನ ವಿಜಯಶಾಲಿಯಾದ ಶಕ್ತಿ ಅವಳ ಬಳಿಯಲ್ಲಿದೆ. ಅವಳ ಕಾವು, ಆವೇಶ, ವೇಗಗಳ ಅನುಗ್ರಹದಿಂದಲೇ ಮಹಾಸಿದ್ಧಿಯನ್ನು ಮುಂದೆ ಹಾಕದೆ ಈಗಳೇ ಪಡೆಯಲು ಸಾಧ್ಯ." ಇನ್ನು ಮಹಾಲಕ್ಷ್ಮಿ: ಜ್ಞಾನ ಮತ್ತು ಶಕ್ತಿಗಳಲ್ಲದೆ ಅವಳ ಸ್ವಭಾವದಲ್ಲಿ ಸೂಕ್ಷ್ಮತಮವಾದ ರಹಸ್ಯವೊಂದಿದೆ. ಅದಿಲ್ಲದಿದ್ದರೆ ಜ್ಞಾನಶಕ್ತಿಗಳು ಅಪೂರ್ಣವಾಗುತ್ತಿದ್ದವು. ಪೂರ್ಣತೆಯೆಂಬುದೂ ಅದಿಲ್ಲದೆ ಪೂರ್ಣವಾಗಲಾರದು. ಅವಳಲ್ಲಿ ಅದಮ್ಯವೂ ವಿಶ್ವವ್ಯಾಪಿಯೂ ಆದ ಮೋಹಕತೆಯ ಬಲಿಷ್ಠವಾದ ಇಂದ್ರಜಾಲವಿದೆ. ದಿವ್ಯಶಕ್ತಿಯ ಬೇರಾವ ಸ್ವರೂಪವೂ ಜೀವಿಗಳ ಹೃದಯಕ್ಕೆ ಹೆಚ್ಚು ಆಕರ್ಷಕವಾದದ್ದು ಇಲ್ಲ. ಎಲ್ಲರೂ ಆನಂದ ಉತ್ಕಂಠೆಗಳಿಂದ ಕೂಡಿ ಮಹಾಲಕ್ಷ್ಮಿಯ ಬಳಿ ಸಾರುತ್ತಾರೆ. ಅವಳು ದೇವನ ಉನ್ಮಾದಕ ಮಾಧುರ್ಯದ ಮಾಯೆಯನ್ನು ಬೀರುತ್ತಾಳೆ. ಅವಳೆಲ್ಲಿ ತನ್ನ ಸೋಜಿಗದ ನೋಟವನ್ನು ನೆಡುವಳೋ, ಎಲ್ಲಿ ತನ್ನ ಮುಗುಳುನಗೆಯ ಚೆಲುವನ್ನು ಹರಿಯಿಸುವಳೋ ಅಲ್ಲೆಲ್ಲ ಆತ್ಮವು ಕೈಗೆ ಸಿಕ್ಕು ಬಂದಿಯಾಗುತ್ತದೆ; ಅಗಾಧವಾದ ಆನಂದಸಾಗರದಲ್ಲಿ ಮುಳುಗುತ್ತದೆ. ಅವಳ ಹಸ್ತ

ಸ್ಪರ್ಶವು ಲೋಹಚುಂಬಕ. ಅವಳ ಗೂಢ ಕೋಮಲ ಪ್ರಭಾವವು ಮನ ಪ್ರಾಣ-ದೇಹಗಳನ್ನು ಪರಿಶುದ್ಧಗೊಳಿಸುತ್ತದೆ. ಅವಳು ಪಾದವಿಟ್ಟು ಮೆಟ್ಟಿದ ಕಡೆ ಯೋಗಸಮಾಧಿಯನ್ನುಂಟುಮಾಡುವ ಆನಂದದ ವಾಹಿನಿಗಳು ಹರಿಯುತ್ತವೆ. ಅವಳು ಹಟ ಸಾಧಿಸುವ,ಹೋರಾಡುವ ಸ್ವಭಾವದವಳಲ್ಲ. 'ಸನ್ಯಾಸದ ಶುಷ್ಕತೆಯೂ ಕಾಠಿಣ್ಯವೂ ಅವಳಿಗೆ ಪ್ರಿಯವಲ್ಲ. ಹೃದಯಕ್ಕೆ ಪ್ರವೇಶವಾದೊಡನೆ ಜ್ಞಾನವನ್ನು ಮೀರುವ ಆನಂದದ ಅನುಭಾವರಹಸ್ಯಗಳನ್ನು ಅವಳು ಪ್ರಕಟಗೊಳಿಸುವಳು. ಶಕ್ತಿಸಾಮರ್ಥ್ಯಗಳಿಗೆ ಅವುಗಳ ಕೃತಿಬಲವನ್ನೂ ಸುಸಂಗತವಾಗಿರಿಸುವ ಛಂದವನ್ನೂ ಕಲಿಸುತ್ತಾಳೆ. ಪೂರ್ಣತೆಗೆ ಸದಾಕಾಲವೂ ಕೊನೆಬಾಳುವ ಮೋಹಿನಿಯನ್ನು ಬೀರುತ್ತಾಳೆ.'' ಕೊನೆಯದಾಗಿ ಮಹಾಸರಸ್ವತಿಯು "ಕರ್ತವ್ಯಶಕ್ತಿ ಮತ್ತು ಪೂರ್ಣತೆ ಸುವ್ಯವಸ್ಥೆಗಳ ಚೇತನೆಯಾಗಿದ್ದಾಳೆ. ನಾಲ್ವರಲ್ಲಿ ತೀರ ಚಿಕ್ಕವಳಾದರೂ ಅವಳು ಕಾರ್ಯನಿರ್ವಹಣದಲ್ಲಿ ಅತ್ಯಂತ ಪ್ರವೀಣಳೂ ಭೌತಪ್ರಕೃತಿಗೆ ತೀರ ಸಮೀಪದವಳೂ ಆಗಿರುವಳು. ಅವಳ ಗಮನಕ್ಕೆ ಯಾವುದೂ ತೀರ ಚಿಕ್ಕದು ಅಥವಾ ಸ್ಪಷ್ಟವಾಗಿ ಕ್ಷುಲ್ಲಕವೆಂಬುದು ಇಲ್ಲ. ಎಷ್ಟೇ ಸೂಕ್ಷ್ಮವಾದುದು, ಮರೆಯಾದುದು, ಗುಪ್ತವಾದುದು ಇದ್ದರೂ ಅದು ಅವಳ ನೋಟವನ್ನು ತಪ್ಪಿಸಲಾರದು. ತಿರುತಿರುಗಿ ಮುಸಿಯಲ್ಲಿ ಹಾಕುತ್ತ ಪ್ರತಿಯೊಂದು ಭಾಗವು ತನ್ನ ನಿಜಸ್ವರೂಪವನ್ನು ತಳೆದು ಇಡಿಯದರಲ್ಲಿ ತನ್ನ ಸರಿಯಾದೆಡೆಗೆ ನಿಂತು ತನ್ನ ನಿರ್ದಿಷ್ಟ ಉದ್ದೇಶವನ್ನು ಪೂರ್ತಿಗೊಳಿಸುವ ವರೆಗೆ ಅವಳು ಶ್ರಮಿಸುತ್ತಾಳೆ. ಅವಳ ಕೆಲಸವು ಪೂರ್ತಿಯಾಯಿತೆಂದರೆ ಯಾವುದನ್ನೂ ಮರೆತಿರುವುದಿಲ್ಲ. ಯಾವ ಅಂಗವನ್ನೂ ತಪ್ಪು ಜಾಗದಲ್ಲಿ ಇಟ್ಟಿರುವುದಿಲ್ಲ; ಇಲ್ಲವೆ ಪೂರ್ಣ ಬಿಟ್ಟಿರುವುದಿಲ್ಲ; ಇಲ್ಲದೋಷಸ್ಥಿತಿಯಲ್ಲಿ ಉಳಿಸಿರುವುದಿಲ್ಲ. ಎಲ್ಲವೂ ಗಟ್ಟಿ ಚೊಕ್ಕ ಪೂರ್ಣಶ್ಲಾಘ್ಯ. ಸಂಪೂರ್ಣ ಪೂರ್ಣತೆಗೆ ನಸುಕಡಿಮೆಯಾದರೂ ಅವಳಿಗೆ ತೃಪ್ತಿಯಿಲ್ಲ. ಮಾತೆಯ ಎಲ್ಲ ಶಕ್ತಿಗಳಲ್ಲಿ ಅವಳೇ ಮನುಷ್ಯನ ಕೂಡ ಅವನ ಸಾವಿರಾರು ಅಪೂರ್ಣತೆಗಳ ಕೂಡ ಅತಿ ದೀರ್ಘವಾಗಿ ಕಷ್ಟಪಡುವವಳು. ಆಕೆ ನಮ್ಮ ಬೇಡಿಕೆಗಳಿಗೆ ತಾಯಿ. ತೊಂದರೆಗಳಲ್ಲಿ ಮಿತ್ರಳು. ಬಿಟ್ಟುಬಿಡದ ನಿರ್ವಿಕಾರಳಾದ ಸಜೀವ ಆಪ್ತಮಂತ್ರಿ. ಉಳಿದೆಲ್ಲ ಶಕ್ತಿಗಳ ಕಾರ್ಯವು ತನ್ನ ಪೂರ್ಣತೆಗಾಗಿ ಅವಳನ್ನು ಅವಲಂಬಿಸಿರುತ್ತದೆ. ಯಾಕಂದರೆ ಅವಳು ಅದರ ಭೌತಿಕ ತಳಹದಿಯ ಭರವಸೆ ಕೊಟ್ಟು, ವಿವರಭಾಗವನ್ನು ವಿಸ್ತರಗೊಳಿಸಿ, ಕಟ್ಟಡದ ಕವಚವನ್ನು ನಿಲ್ಲಿಸಿ ಸ್ಥಿರಗೊಳಿಸುತ್ತಾಳೆ.'' ಹೀಗೆ ನಾಲ್ವರು ಮಾತೆಯರು ವಿಶಿಷ್ಟ ಶಕ್ತಿಯುತರಾಗಿ ತಂತಮ್ಮ ವಿಷಯವನ್ನಲ್ಲದೆ, ಇನ್ನುಳಿದ ವಿಷಯಗಳಿಗೆ ತಳಹದಿಯನ್ನು ಹಾಕಿಕೊಡುವ ಕೆಲಸ ನಡೆಸಿರುತ್ತಾರೆ. ಶಿಕ್ಷಣದಲ್ಲಿ ವಿಷಯಗಳು ನಾಲ್ಕು, ಶಿಕ್ಷಕರು ನಾಲ್ವರು ಕಂಡರೂ ಆ ವಿಷಯಗಳಿಗೂ ಆ ಶಿಕ್ಷಕರಿಗೂ ಗುರಿ ಒಂದೇ ಆಗಿದೆ.

## ನಾಲ್ವರು ಮಾತೆಯರ ಕಾರ್ಯಗಳು

**ಮಹೇಶ್ವರಿ:**—ವಸ್ತುಗಳ ಸತ್ಯವೊಂದೇ ಅವಳಿಗೆ ಸಂಬಂಧಿಸಿದ ವಿಷಯ. ಜ್ಞಾನವೇ ಅವಳ ಶಕ್ತಿಯ ಕೇಂದ್ರ. ನಮ್ಮ ಆತ್ಮವನ್ನು, ಪ್ರಕೃತಿಯನ್ನು ದಿವ್ಯ ಸತ್ಯವಾಗಿ ಪರಿಣಮಿಸುವಂತೆ ರಚಿಸುವುದೇ ಅವಳ ಧ್ಯೇಯ, ಅವಳ ಕಾರ್ಯ. ಮನನಶೀಲವಾದ ಮನಸ್ಸು ಹಾಗೂ ಸಂಕಲ್ಪಗಳು ವಿವೇಕ ವಿಶಾಲತೆಗಳಿಂದ ಸಂಪನ್ನವಾಗುವಂತೆ ಅವನ್ನು ಉನ್ನಯನಗೊಳಿಸಿ ಘನವಾಗಿಸುತ್ತಾಳೆ. ಅವುಗಳಿಗೂ ಮೀರಿದ ಜ್ಯೋತಿಯಿಂದ ಅವನ್ನು ತುಂಬಿಬಿಡುತ್ತಾಳೆ. ಪರಾತ್ಪರದ ಶಾಸನಗಳನ್ನು ಅನುಸರಿಸುತ್ತ ಕೆಲವರನ್ನು ಅವಳು ಮೇಲೆತ್ತುವಳು; ಕೆಲವರನ್ನು ಕೆಳಗೆಸೆಯುವಳು; ಇಲ್ಲವೆ ತನ್ನಿಂದ ದೂರವಾಗಿ ಕತ್ತಲೆಗೆ ತಳ್ಳುವಳು.

**ಮಹಾಕಾಳಿ:**—ಅವಳಲ್ಲಿ ತಡೆಯಲಸಾಧ್ಯವಾದ ತೀವ್ರತೆಯೂ ಕಾರ್ಯಸಾಧನೆಗಾಗಿ ಪ್ರಚಂಡ ಆವೇಶವೂ ಇರುವವಲ್ಲದೆ ಎಲ್ಲ ಅಡ್ಡಿ ಅಡಚಣೆಗಳನ್ನು ಪುಡಿಗುಟ್ಟಲು ನುಗ್ಗುವ ದಿವ್ಯವಾದ ಉಗ್ರಶಕ್ತಿ ಇರುವುದು. ಅವಳ ದಿವ್ಯತೆಯೆಲ್ಲ ಬಿರುಗಾಳಿಯಂಥ ಕೃತಿಯ ಕಾಂತಿವೈಭವವಾಗಿ ನೆಗೆದೇಳುತ್ತದೆ. ವೇಗಕ್ಕಾಗಿ, ತತ್‌ಕ್ಷಣದಲ್ಲಿ

ಸಫಲವಾಗುವ ವಿಧಾನಕ್ಕಾಗಿ ತೀವ್ರವಾದ, ನೇರವಾದ ಏಟಿಗಾಗಿ ತನ್ನ ಇದಿರು ಎಲ್ಲವನ್ನು ಕೊಚ್ಚಿಕೊಂಡು ಹೋಗುವ ಮುಂಭಾಗದ ದಾಳಿಗಾಗಿ ಅವಳು ಇರುತ್ತಾಳೆ. ತನ್ನ ಶಕ್ತಿಯಿಂದ ನೆರವೀಯಲು ಅವಳಿಗೆ ಅನುವು ಕೊಟ್ಟರೆ ಒಂದು ಕ್ಷಣದಲ್ಲಿ ಸಾಧಕನ ಗತಿಯನ್ನು ಕುಂಠಿತಗೊಳಿಸುವ ಎಡರುಗಳೂ ಅವನ ಮೇಲೆ ಮುಗಿಬೀಳುವ ಹಗೆಗಳೂ ಶಿಥಿಲವಾದ ಒಡವೆಗಳಂತೆ ಮುರಿದುಬೀಳುತ್ತವೆ.

**ಮಹಾಲಕ್ಷ್ಮೀ:** — ಇವೆಲ್ಲದರ ಮೇಲೆ ಶಾಶ್ವತ ಸೌಂದರ್ಯದ ಅದ್ಭುತ ಚಮತ್ಕಾರ ಶಕ್ತಿಯೊಂದಿದೆ; ದೈವಿಕ ಸಾಮರಸ್ಯದ ಅಭೇದ್ಯ ರಹಸ್ಯವೊಂದಿದೆ; ವಿಶ್ವವ್ಯಾಪಿಯಾದ ಈ ರಮಣೀಯತೆಯ ಸೆಳೆತವನ್ನು ಯಾರೂ ತಪ್ಪಿಸಿಕೊಳ್ಳಲಾರರು—ಎಲ್ಲರನ್ನೂ ತಲೆವಾಗ ಹಚ್ಚುವ ಮೋಹನ ಶಕ್ತಿಯು ಇದಾಗಿದೆ; ಸಕಲ ವಸ್ತುಗಳು—ಶಕ್ತಿಗಳು—ಜೀವಿಗಳು ಇದರ ಆಕರ್ಷಣೆಯಿಂದ ಒಂದನ್ನೊಂದು ಅಗಲದಿರುವವು; ತೆರೆಮರೆಯ ಆನಂದ ದೂರ್ಮಿಯ ಛಂದೋಗತಿಗನುಸರಿಸಿ ಇವೆಲ್ಲ ಚಲಿಸಿ,—ಆ ಲಯಗತಿಯ ಮೂರ್ತಿಗಳಾಗಿ, ಒಂದನ್ನೊಂದು ಬೆರೆತು ಕೂಡುವಂತೆ ಮಾಡುವ ಶಕ್ತಿಯು ಇದಾಗಿದೆ. ದಿವ್ಯತೆಯ ನೊಗವನ್ನು ಮಾನವರು ಹೊರುವಂತೆ ಇವಳು ಮಾಡುವುದು ತನ್ನ ಪ್ರೀತಿ—ಚಾರುತೆಗಳ ಮೂಲಕವೇ. ಅತಿಸರಳ—ಸಾಧಾರಣ ವಸ್ತುಗಳು ಕೂಡ ಇವಳ ಐಕ್ಯದ ಅಂತಃಸ್ಫೂರ್ತಿಯಿಂದ—ಚೈತನ್ಯದ ಉಸಿರಿನಿಂದ ಆಶ್ಚರ್ಯಕರವಾಗಿ ಮಾರ್ಪಡುವವು. ಈಶನ ಆನೇಶಯುತ ಆಕರ್ಷಣೆಗೆ ಇವಳು ಭಕ್ತಿಯ ನೆರವನ್ನು ಕೊಡುತ್ತಾಳೆ. ಶಕ್ತಿಸಾಮರ್ಥ್ಯಗಳಿಗೆ ಅವುಗಳ ಕೃತಿಬಲ—ಸುಸಂಗತವಾದ ಛಂದೋಗತಿ ಬರುವಂತೆ ಮಾಡುತ್ತಾಳೆ. ಪೂರ್ಣತೆಯು ಕೊನೆಬಾಳುವ ಮೋಹಕತೆಯಿಂದೊಡಗೂಡುವಂತೆ ಮಾಡುತ್ತಾಳೆ.

**ಮಹಾಸರಸ್ವತಿ:** — "ಪರಿಪೂರ್ಣ ಕಾರ್ಯಕರ್ತನ ನಿಕಟ-ಉಚಿತ ಜ್ಞಾನ, ಜಿನುಗುತನ, ತಾಳ್ಮೆ, ಒಳಮನದ ಹೊಳೆತಕ್ಕೆ ಸಹಜವಾಗಿರುವ ನಿರ್ದೋಷತೆ, ಅರಿತು ಗೈಯುವ ಕೈ, ಒಪ್ಪು—ತಪ್ಪುಗಳನ್ನು ವಿವೇಕಿಸುವ ದೃಷ್ಟಿ ಇದೆಲ್ಲ ಅವಳಲ್ಲಿದ್ದು, ತಾನೊಲಿದವರಿಗೆ ಕೊಡಬಲ್ಲಳು." ನಮ್ಮೆಲ್ಲ ತಪ್ಪುತಡೆಗಳನ್ನು ಸಕರುಣ ದೃಷ್ಟಿಯಿಂದ ತೋರಿಸಿ ತಿದ್ದುವ ಮಾತೃಶಕ್ತಿ ಅವಳಾಗಿದ್ದಾಳೆ. ಯಾವೊಂದು ದೋಷವೂ ಕೊಂಕು-ಕೊರತೆ-ಅಪೂರ್ಣತೆಯೂ ಅವಳ ದೃಷ್ಟಿಪಥದಿಂದ ಜಾರಲಾರದು; ಆದದ್ದು-ಆಗಬೇಕಾದದ್ದು ಎಲ್ಲವನ್ನೂ ಆಲೋಚಿಸಿ, ಸರಿಯಾಗಿ ತೂಗಿನೋಡಿ, ಪರಿಹಾರವನ್ನೀಯುವವಳು. ಎಲ್ಲವುಗಳ ದಕ್ಷ—ಸತತ ಜೋಡಣೆ—ಏರ್ಪಾಟು ಅವಳದು; ಏನೇನಗತ್ಯವಿದೆಯೆಂಬುದನ್ನೆಲ್ಲ ಒಮ್ಮೆಲೆ ಸೂಕ್ಷ್ಮದೃಷ್ಟಿಯಿಂದ ಅರಿತು, ಯಾವುದನ್ನು ಇರಿಸಿಕೊಳ್ಳತಕ್ಕದ್ದು — ಯಾವುದನ್ನು ಬದಿಗೆ ಸರಿಸತಕ್ಕದ್ದು ಎಂಬುದನ್ನು ನಿರ್ಣಯಿಸುವಳು; ಯೋಗ್ಯ ಯಂತ್ರ, ಯೋಗ್ಯ ಸಮಯ, ಯೋಗ್ಯ ಪರಿಸ್ಥಿತಿ, ಯೋಗ್ಯ ಕಾರ್ಯರೀತಿ ಇವುಗಳನ್ನೆಲ್ಲ ಗೊತ್ತುಪಡಿಸುವಳು. ಸಂಪೂರ್ಣ ಪೂರ್ಣತೆಗೆ ನಸು ಕಡಿಮೆಯಾದರೂ ಅವಳಿಗೆ ತೃಪ್ತಿಯಿಲ್ಲ. ತಾನು ನಿರ್ಮಿಸುವ ಸೃಷ್ಟಿಯ ಪೂರ್ಣತೆಗೋಸ್ಕರ ಅವಶ್ಯವೆನಿಸಿದರೆ ಅನಂತ ಕಾಲದ ವರೆಗೆ ದುಡಿಮೆಯನ್ನು ಮಾಡಲೂ ಅವಳು ಸಿದ್ಧಳು. ದುಗುಡ-ದುಮ್ಮಾನ-ಚಡಪಡಿಕೆಗಳ ಕಾರ್ಮೋಡಗಳನ್ನು ತನ್ನ ಸ್ಮಿತಕಾಂತಿಯಿಂದ ಚದರಿಸುತ್ತ, ತನ್ನ ಸಿದ್ಧಸಹಾಯದ ಆಶ್ವಾಸನವನ್ನು ಯಾವಾಗಲೂ ಕೊಡುತ್ತ, ಚಿರಪ್ರಕಾಶದ ಪಥವನ್ನು ಕೈಮಾಡಿ ತೋರಿಸುತ್ತ, ಪರಾಪ್ರಕೃತಿಯ ಸಮಗ್ರತೆಯ ಕಡೆಗೆ ನಾವು ಅಡಿಯಿಡುವಂತೆ, ದೃಢ-ಸ್ತಬ್ಧ-ಅವಿರತ ರೀತಿಯಲ್ಲಿ ನಮಗೆ ಗಭೀರವಾದ-ಸಂತತವಾದ ಪ್ರೇರಣೆಯನ್ನೀಯುತ್ತಾಳೆ.

## ಒಲುಮೆಗೆ ದಾರಿ

ಈ ನಾಲ್ವರು ಮಾತೆಯರು ತಂತಮ್ಮ ಕಾರ್ಯವನ್ನು ನಮ್ಮ ಪ್ರಕೃತಿಯಲ್ಲಿ ಯಶಸ್ವಿಯಾಗಿ ನೆರವೇರಿಸಬೇಕಾದರೆ ಅವರು ಒಲಿದು ಬರಬೇಕೆನ್ನುವ ಮಾತು ಮರೆತರಾಗದು. ಮುಖ್ಯವಾಗಿ ಮಹೇಶ್ವರಿಯು ಅವರವರ ಸ್ವಭಾವವನ್ನು ಅನುಲಕ್ಷಿಸಿ ಸಾಗುವದರಿಂದ ನಮ್ಮ ಸ್ವಭಾವಸಿದ್ಧವಾದ ಪ್ರಕೃತಿಧರ್ಮವನ್ನು ಬಿಟ್ಟು ನಾವು ಒಂದಿಷ್ಟೂ ಕದಲಬಾರದು. ಅವಳೆಷ್ಟೇ ಕರುಣಾಶಾಲಿಯಾಗಿದ್ದರೂ ಅವಳ ಕರುಣೆ ಅವಳ ವಿವೇಕವನ್ನು ಕುರುಡುಮಾಡದು. ನಿಯತವಾದ ಮಾರ್ಗದಿಂದ ಅವಳ ನಡೆಯನ್ನು ಹೊರಳಿಸದು. ಅವಳು ನಿರ್ವಿಕಾರಳು

ಅದ್ಭುತಳು. ಮಹಿಮಾಶಾಲಿನಿ, ಶಾಂತಸ್ವರೂಪಿಣಿ. ಅವಳಲ್ಲಿ ಎಲ್ಲ ಜ್ಞಾನವೂ ಇದೆ. ತಾನು ತಿಳಿಯಬೇಕೆಂದು ಬಯಸಿದ್ದಾವುದೂ ಅವಳಿಂದ ಗುಪ್ತವಾಗಿರಲಾರದು. ಎಲ್ಲವನ್ನು ಎದುರಿಸಿ ಆಳಬಲ್ಲ ಶಕ್ತಿ ಅವಳಲ್ಲಿದೆ. ಅವಳಲ್ಲಿ ಪಕ್ಷಪಾತವೆಂಬುದು ಕೇಳಕೂಡದು. ಜ್ಞಾನಿಗಳಿಗೆ ಘನತರವಾದ, ಹೆಚ್ಚು ಪ್ರಕಾಶಮಾನವಾದ ಜ್ಞಾನವನ್ನೂ ವಿವೇಕವನ್ನೂ ನೀಡುತ್ತಾಳೆ. ಪ್ರತಿ ಒಬ್ಬನಲ್ಲಿ ಅವನ ಪ್ರಕೃತಿಯ ಬೇರೆಬೇರೆ ಅಂಶಗಳನ್ನು ಅವುಗಳ ಅಗತ್ಯ ಪ್ರೇರಣೆ ಪ್ರತಿಫಲಾಪೇಕ್ಷೆಗಳಿಗೆ ಅನುಗುಣವಾಗಿ ಓಗೊಡುತ್ತ ನಡೆಸುವುದರಿಂದ ನಮ್ಮ ಪ್ರತಿಫಲಾಪೇಕ್ಷೆಗಳು ಉಚ್ಚ ಹಾಗೂ ಪರಿಶುದ್ಧವಾಗಿರಬೇಕು. ಹಾಗಿದ್ದರೆ ಅವಳು ಅತಿಮಾನಸವಾದ ಅನಂತತೆಯನ್ನು ತೆರೆದು ತೋರಿಸಬಲ್ಲಳು. ವಿರಾಟದ ವಿಸ್ತರವನ್ನು ಕಣ್ಣ ಮುಂದೆ ತಂದಿರಿಸಬಲ್ಲಳು; ಅದ್ಭುತಜ್ಞಾನದ ಭಾಂಡಾರವನ್ನು ಮುಂದಿಡಬಲ್ಲಳು; ನಿತ್ಯಶಕ್ತಿಯ ಅಮೇಯಗತಿಯನ್ನು ನೀಡಬಲ್ಲಳು. ಯಾಕೆಂದರೆ ಅವಳು ಸರ್ವಶಕ್ತಳೂ ಸರ್ವಜ್ಞಳೂ ಆಗಿರುತ್ತಾಳೆ.

ಮಹಾಕಾಳಿಯು ಅಸುರಿಕ ವೃತ್ತಿಯನ್ನು ಸಹಿಸಳು. ದಿವ್ಯತೆಯ ದ್ವೇಷಕರನ್ನು ನಿರ್ದಯವಾಗಿ ಅಪಾಯಕ್ಕೀಡುಮಾಡುವಳು. ಮನುಷ್ಯನಲ್ಲಿಯ ಎಲ್ಲ ಬಗೆಯ ಅಸನ್ಮತಿಗಳಿಗೆ ಅವಳು ಸಿಡಿದೇಳುತ್ತಾಳೆ. ಅವುಗಳೊಂದಿಗೆ ನಿಷ್ಠುರವಾಗಿ ವರ್ತಿಸುತ್ತಾಳೆ. ಯಾಕೆಂದರೆ ಅಪೂರ್ಣತೆಯನ್ನು ಅವಳೆಷ್ಟೂ ಸಹಿಸಳು. ಅಜ್ಞಾನ ಅಸ್ಪಷ್ಟತೆಗಳಿದ್ದಲ್ಲಿ ಅವಳು ಬಿರುಸಾಗಿ ವರ್ತಿಸುತ್ತಾಳೆ. ದ್ರೋಹ, ಅಸತ್ಯ ಮತ್ತು ಬದ್ಧವೈರಗಳ ವಿರುದ್ಧವಾಗಿ ಅವಳ ರೋಷವು ಕೆರಳುವುದಲ್ಲದೆ ಅದು ಶೀಘ್ರವೂ ದಾರುಣವೂ ಆಗಿರುವುದು. ದ್ವೇಷಾಸೂಯೆಗಳನ್ನು ತನ್ನ ದಂಡನೆಯಿಂದ ಅವಳು ತತ್‌ಕ್ಷಣ ನಾಶಗೊಳಿಸುತ್ತಾಳೆ. ದಿವ್ಯಕಾರ್ಯದಲ್ಲಿ ಉದಾಸೀನ , ಉಪೇಕ್ಷೆ ಹಾಗೂ ಆಲಸ್ಯಗಳನ್ನು ಅವಳು ಸಹಿಸಲಾರಳು. ಅಕಾಲದಲ್ಲಿ ನಿದ್ದೆ ಹೋಗುವ ಮತ್ತು ಸಿಕ್ಕಲ್ಲಿ ಅಲೆಯುವ ಜೀವಿಗಳನ್ನು ಅವಳು ತೀಕ್ಷ್ಣವಾದ ನೋವುಕೊಟ್ಟು ಸಹ ಬಡಿದೆಬ್ಬಿಸುತ್ತಾಳೆ. ವೈರಿಗಳಿಗೆ ಅವಳ ಕೋಪವು ಭಯಂಕರವಾಗಿರುವದು. ಅವಳ ಒತ್ತಡದ ರಭಸವು ಅಶಕ್ತರಿಗೂ ಪುಕ್ಕರಿಗೂ ದುಃಖದಾಯಕವಾಗಿರುವದು. ಆದರೆ ಅವಳನ್ನು ಮಹಾತ್ಮರೂ ಸಮರ್ಥರೂ ಉದಾತ್ತರೂ ಪೂಜಿಸುತ್ತಾರೆ.

ಮಹಾಲಕ್ಷ್ಮಿಗೆ ಸಾಮರಸ್ಯ-ಸೌಂದರ್ಯಗಳು ಒಪ್ಪುವ ಗುಣಗಳು. ಮನ-ಆತ್ಮಗಳಲ್ಲಿ, ವಿಚಾರ-ಭಾವನೆಗಳಲ್ಲಿ,ಬಾಹ್ಯ ಕೃತಿ-ಗತಿಗಳಲ್ಲಿ, ಜೀವನ-ಪರಿಸ್ಥಿತಿಗಳಲ್ಲಿ ಸಾಮರಸ್ಯ-ಸೌಂದರ್ಯಗಳನ್ನು ಅವಳು ಬಯಸುತ್ತಾಳೆ. ರಹಸ್ಯವಾದ ವಿಶ್ವಾನಂದದ ಛಂದಗಳೊಡನೆ ಸ್ನೇಹಸಂಬಂಧವಿರುವಲ್ಲಿ ಅವಳು ಬಂದು ನೆಲೆಸುತ್ತಾಳೆ. ಸಕಲಸೌಂದರ್ಯದ ಕರೆಗೆ ಮಾರುತ್ತರ, ಹೊಂದಿಕೆ, ಒಮ್ಮತವಿರುವಲ್ಲಿ ಅವಳು ತಳ ಊರುತ್ತಾಳೆ. ದಿವ್ಯದತ್ತ ಸಮ್ಮುಖವಾದ ಅನೇಕ ಜೀವನಗಳ ಸಂತೋಷಪ್ರವಾಹವಿರುವ ವಾತಾವರಣವು ಅವಳಿಗೆ ಇಷ್ಟವಾದುದು. ಆದರೆ ವಿಕಾರವಾದ ಕೀಳಾದ ತುಚ್ಛವಾದ ಎಲ್ಲವೂ ಅವಳ ಬರವಿಗೆ ತಡೆಯಾಗುತ್ತವೆ. ಬಡವಾದ ಅಧಮವಾದ ಮಲಿನವಾದ ಎಲ್ಲವೂ ಅವಳನ್ನು ಅಡ್ಡಯಿಸುತ್ತವೆ. ಕ್ರೂರವಾದ ಒರಟಾದ ಎಲ್ಲವೂ ಅವಳನ್ನು ದೂರ ಸರಿಸುತ್ತವೆ. ಪ್ರೀತಿಸೌಂದರ್ಯಗಳು ಇಲ್ಲದಲ್ಲಿ, ಅಥವಾ **ಅವು ಪ್ರ**ಕಟವಾಗಲು ಒಪ್ಪಿಗೆಯಿಲ್ಲದಲ್ಲಿ ಅವಳು ಸುಳಿಯುವದಿಲ್ಲ. ಪ್ರೀತಿಸೌಂದರ್ಯಗಳು ಕೀಳುವಿಷಯಗಳೊಂದಿಗೆ ಬೆರೆತು ವಿಕೃತವಾಗಿದ್ದ ಸ್ಥಳದಿಂದ ಅವಳು ಕಂಬಿಕಿತ್ತುವಳು. ಅಂಥಲ್ಲಿ ಅವಳು ತನ್ನ ಸಂಪತ್ತಿಯನ್ನು ಸುರಿಯಲು ಒಪ್ಪುವದಿಲ್ಲ. ಸ್ವಾರ್ಥ, ದ್ವೇಷ, ಅಸೂಯೆ, ವೈರ, ಸ್ಪರ್ಧೆ, ಕಲಹ ಇವುಗಳಿಂದ ತುಂಬಿದ ಮನುಷ್ಯರ ಹೃದಯದಿಂದ ಕೂಡಲೇ ಕಾಲ್ತೆಗೆಯುವಳು. ದ್ರೋಹ, ಲೋಭ, ಅಪಕಾರ ಇವು ಹೃದಯಪಾತ್ರದಲ್ಲಿ ಬೆರೆತಿದ್ದರೆ ಅವಳು ಅಲ್ಲಿಂದ ಕಾಣೆಯಾಗುವಳು. ಆರಕ್ತಿಯ ಕೀಳ್ತೆರವೂ ಅಸಂಸ್ಕೃತ ಅಭಿಲಾಷೆಯೂ ಭಕ್ತಿಯನ್ನು ಹೀನಗೊಳಿಸಿದರೆ ಮಹಾಲಕ್ಷ್ಮಿಯು ಮಾಯವಾಗುವಳು. ಅಂಥ ಪರಿಸ್ಥಿತಿಯನ್ನು ಕಂಡು ಜುಗುಪ್ಸೆಬಟ್ಟು ಅಲ್ಲಿಂದೇಳುವಳು. ಇಲ್ಲವೆ ತನ್ನ ಮುಖದಮೇಲೆ ತೆರೆಯೆಳೆದು

ಕೊಂಡು ಈ ಕಹಿಯಾದ ವಿಷಮಯವಾದ ಪೈಶಾಚಭಾವವು ನಿರಾಕೃತವಾಗಿ ಅದೃಶ್ಯವಾಗುವ ವರೆಗೆ ಅವಳು ತಡೆದು ನಿಲ್ಲುವಳು. ಹೃದಯದ ಅಂತರಾಳದಲ್ಲಿಯ ಭಾವನೆಗಳ ಅದಮುವಿಕೆಯಾಗಲಿ ಅವತಾಡನವಾಗಲಿ ಅವಳಿಗೆ ಸೊಗಸದು.

ಮಹಾಸರಸ್ವತಿಯು ಅರೆಮನಸ್ಸಿನಿಂದ ಅವಸರದಿಂದ ಮಾಡಿದ ಕೆಲಸವನ್ನೂ ಗೊಂದಲದ ಕೆಲಸವನ್ನೂ ಮೆಚ್ಚಲಾರಳು. ಗುರಿಯ ಅಸ್ಪಷ್ಟತೆಯೂ ಗುರಿಯ ತಪ್ಪುವಿಕೆಯೂ ಅವಳಿಗೆ ಆಗಿಬರುವದಿಲ್ಲ. ಸುಳ್ಳುಹೊಂದಿಕೆ, ಸಾಧನಶಕ್ತಿಗಳ ದುರುಪಯೋಗ, ಕೆಲಸಮಾಡದೆ ಬಿಡುವುದು ಇಲ್ಲವೆ ಅರ್ಧಮಾಡಿಬಿಡುವುದು ಇವೆಲ್ಲ ಅವಳಿಗೆ ಅವಮಾನವನ್ನುಂಟುಮಾಡುವವು. ಅಜಾಗರೂಕತೆ, ಚ್ಯುತಿ, ಆಲಸ್ಯಗಳೆಂದರೆ ಅವಳ ತಾಳ್ಮೆ ತಪ್ಪುವುದು. ನಮ್ಮ ಸಂಕಲ್ಪದಲ್ಲಿ ನಾವು ದೃಢರಾಗಿದ್ದರೆ, ನೇರವಾದ ಕಳಕಳಿಯುಳ್ಳವರಾಗಿದ್ದರೆ ಅವಳು ಮಮತೆ ದೋರುವಳು. ಮುಗುಳುನಗೆ ನಗುತ್ತ ಹತ್ತಿರವಿದ್ದು ನೆರವನ್ನೀಯುವಳು. ಇಬ್ಬಗೆಯ ಮನಸ್ಸನ್ನು ಅವಳು ಸಹಿಸಳು. ಅದನ್ನು ಬಯಲಿಗೆಳೆಯುವ ಅವಳ ಅಣಕವು ನಾಟಕ, ನಟನೆ, ಆತ್ಮವಂಚನೆ,ಸೋಗುಗಳಿಗೆ ನಿರ್ದಯವಾಗಿರುತ್ತದೆ.

## ಮಾತೆಯರ ಒಲುಮೆಯುಂಟಾದರೆ ?

ಮಹೇಶ್ವರಿಯ ಘನವಾದ ಅಗೋಚರವಾದ ಜ್ಞಾನ ಮತ್ತು ಉಚ್ಚವಾದ ಶಾಂತಿಬಲದ ಮುಂದೆ ಎಲ್ಲವೂ ಕಡೆಯಲ್ಲಿ ಮಣಿಯಲೇಬೇಕು. ಜ್ಞಾನಿಗಳಿಗೆ ಘನತರ ಜ್ಞಾನವನ್ನೂ ವಿವೇಕವನ್ನೂ ನೀಡುವಂತೆ ದರ್ಶನವುಳ್ಳವರಿಗೆ ಬೋಧನೆ ಕೊಡಲು ಅನುಮತಿಸುತ್ತಾಳೆ. ಪ್ರತಿಒಬ್ಬ ಮನುಷ್ಯನಲ್ಲಿ ಅವನ ಪ್ರಕೃತಿಯ ಬೇರೆಬೇರೆ ಅಂಶಗಳನ್ನು ಅವುಗಳ ಅಗತ್ಯ, ಪ್ರೇರಣೆ, ಪ್ರತಿಫಲಾಪೇಕ್ಷೆಗಳಿಗೆ ಅನುಗುಣವಾಗಿ ಓಗೊಡುತ್ತ ನಡೆಸುತ್ತಾಳೆ. ಮನಸ್ಸು ಸಂಕಲ್ಪಗಳು ವಿವೇಕ ವಿಶಾಲತೆಗಳಿಂದ ಸಂಪನ್ನವಾಗುವಂತೆ ಅವನ್ನು ಉನ್ನಯನಗೊಳಿಸಿ ಘನವಾಗಿಸುತ್ತಾಳೆ. ಅದನ್ನು ಮೀರಿದ ಜ್ಯೋತಿಯ ನೆರೆ ಹರಿಯಿಸುತ್ತಾಳೆ.

ಮಹಾಕಾಳಿಯು ದ್ವೇಷಾಸೂಯೆಗಳನ್ನು ತನ್ನ ದಂಡನೆಯಿಂದ ತತ್‌ಕ್ಷಣ ನಾಶಗೊಳಿಸುತ್ತಾಳೆ. ಅವಳ ಪ್ರೀತಿ ಅವಳ ಕೋಪದಷ್ಟೇ ಉತ್ಕಟವಾದುದು. ತನಗೆ ವಿರೋಧಕಾರಕವಾದವುಗಳು ಶಕ್ತಿಪೂರ್ಣ ಸತ್ವಗಳ ರೂಪತಾಳುವಂತೆ ಅವಳ ಪೆಟ್ಟುಗಳು ಬಡಿಯುವವೆಂದೂ ಡೊಂಕನ್ನೂ ವಿಕೃತಿಯನ್ನೂ ಸರಳಗೊಳಿಸಿ ಅಶುದ್ಧ ಇಲ್ಲವೆ ಸದೋಷವಾದದ್ದನ್ನು ಹೊರದೂಡುವವೆಂದೂ ಅವಳ ಪೂಜಕರಿಗೆ ಗೋಚರಿಸುತ್ತದೆ. ಅವಳಿಲ್ಲದೆ ಆನಂದವು ವಿಶಾಲ, ಗಭೀರ, ಮೃದು, ಮಧುರ, ಸುಂದರವಾಗಬಹುದಾದರೂ ತೀರ ಸಂಪೂರ್ಣವಾದ ಉತ್ಕಟತೆಯುಳ್ಳ ಉಜ್ವಲ ಆನಂದವಾಗುವುದಿಲ್ಲ. ಶ್ರೇಷ್ಠತಮ ಆನಂದ, ಉನ್ನತತಮ ಎತ್ತರ, ಉದಾತ್ತತಮ ಆದರ್ಶ, ವಿಶಾಲತಮ ಪ್ರದೇಶಗಳಿಗೆ ನಸುಕಡಿಮೆಯಾದರೂ ಅವಳಿಗೆ ತೃಪ್ತಿಯಿಲ್ಲ. ಅಂಥ ಉಚ್ಚಮಟ್ಟಕ್ಕೆ ನಮ್ಮನ್ನೊಯ್ದು ತಲುಪಿಸುವಳು.

ಮಹಾಲಕ್ಷ್ಮಿಯು ಹತ್ತಿರ ಇದ್ದ ಮಾತ್ರಕ್ಕೆ ಪ್ರಗಾಢಸುಖವುಂಟಾಗುತ್ತದೆ. ಹೃದಯದಲ್ಲಿ ಅವಳನ್ನು ಅನುಭವಿಸಿದ ಕೂಡಲೆ ಬದುಕು ಆನಂದಾತಿಶಯದಿಂದಲೂ ಅಚ್ಚರಿಯಿಂದಲೂ ತುಂಬುತ್ತದೆ. ಜೀವನವು ಅವಳ ಪರಮೋಚ್ಚಕೃತಿಗಳಲ್ಲಿ ದಿವ್ಯಕಲೆಯ ಸಂಪನ್ನಕೃತಿಯಾಗಿ ಪರಿಣಮಿಸುತ್ತದೆ. ಎಲ್ಲ ಅಸ್ತಿತ್ವವು ಪವಿತ್ರ ಆನಂದದ ಕವಿತೆಯಾಗುತ್ತದೆ. ಅತಿಸರಳವಾದ ಅತಿಸಾಧಾರಣವಾದ ವಸ್ತುಗಳು ಸಹ ಅವಳ ಐಕ್ಯದ ಅಂತಃಸ್ಫೂರ್ತಿಯಿಂದಲೂ ಚೈತನ್ಯದ ಉಸಿರಿನಿಂದಲೂ ಆಶ್ಚರ್ಯಕರವಾಗಿ ಮಾರ್ಪಡುತ್ತವೆ. ಹೃದಯಕ್ಕೆ ಪ್ರವೇಶ

ವಾದೊಡನೆ ಜ್ಞಾನವನ್ನು ಅದ್ಭುತದ ಶಿಖರಗಳಿಗೆ ಎತ್ತಿ ಒಯ್ದು ಎಲ್ಲ ಜ್ಞಾನವನ್ನು ಮೀರುವ ಆನಂದದ ಅನುಭಾವರಹಸ್ಯಗಳನ್ನು ಅವಳು ಪ್ರಕಟಗೊಳಿಸುವಳು.

ಮಹಾಸರಸ್ವತಿಯು ಸಮರ್ಥರಾದ ಕಟ್ಟುಗರನ್ನೂ, ಸಂಘಟಕರನ್ನೂ, ಆಡಳಿತಗಾರರನ್ನೂ, ತಂತ್ರ ಕುಶಲರನ್ನೂ, ಶಿಲ್ಪಿಗಳನ್ನೂ ಸೃಷ್ಟಿಸುತ್ತಾಳೆ. ಪ್ರಕೃತಿಯು ಪರಿವರ್ತನವನ್ನೂ ನವೀನರಚನೆಯನ್ನೂ ಅವಳು ಕೈಕೊಂಡ ಮೇಲೆ ಅವಳ ಕ್ರಿಯೆ ಪರಿಶ್ರಮಪೂರ್ವಕವೂ ಸೂಕ್ಷ್ಮವೂ ಆಗಿರುವದರಿಂದ ನಮ್ಮ ಅಸಹನೆಗೆ ಎಷ್ಟೋ ಸಲ ಸಾವಕಾಶನೆಂದೂ ಸಮಾಪ್ತಿರಹಿತನೆಂದೂ ತೋರುತ್ತದೆ. ಆದರೆ ಅದು ನಿರಂತರವೂ ಸಮಗ್ರವೂ ದೋಷ ರಹಿತವೂ ಆಗಿರುತ್ತದೆ. ಯಾವುದನ್ನು ಆರಿಸಬೇಕು, ಯಾವುದನ್ನು ತ್ಯಜಿಸಬೇಕು ಎಂಬುದನ್ನು ಅವಳ ಅಂತಃಸ್ಫೂರ್ತಿ ಅರಿತುಕೊಂಡು ಯೋಗ್ಯ ಸಾಧನ, ಯೋಗ್ಯ ಸಮಯ, ಯೋಗ್ಯ ಪರಿಸರ, ಯೋಗ್ಯ ವಿಧಾನ ಗಳನ್ನು ಯಶಸ್ವಿಯಾಗಿ ನಿರ್ಧರಿಸುತ್ತದೆ. ಸುಲಭವಾಗಿ ಹಿನ್ಮೊಗವಾಗದೆ, ನಿರುತ್ಸಾಹವಾಗದೆ, ಪುನರುಕ್ತ ವಾದ ಅಪಯಶದ ತರುವಾಯ ಸಹ ತನ್ನದನ್ನೇ ಸಾಧಿಸುತ್ತ ಅವಳ ಕೃಪಾಹಸ್ತವು ನಮ್ಮ ಪ್ರತಿಒಂದು ಹೆಜ್ಜೆ ಯನ್ನು ಎತ್ತಿಹಿಡಿಯುತ್ತದೆ. ಉನ್ನತಪ್ರಕೃತಿಯ ಸಮಗ್ರತೆಯ ಕಡೆಗೆ ನಮ್ಮನ್ನು ಪ್ರಚೋದಿಸುವ ಸತತ ಗಭೀರ ಪ್ರೇರಣೆಯನ್ನು ಈಯುವದರಲ್ಲಿ ಅವಳು ದೃಢಳೂ ಸ್ತಬ್ಧಳೂ ಅವಿರತಳೂ ಆಗಿರುತ್ತಾಳೆ.

## ಈ ತಿದ್ದುಪಡಿ ಏತರದು ?

ಮಹೇಶ್ವರಿ ಮಾತೆಯು ನಿಷ್ಪಕ್ಷಪಾತಿಯಾಗಿ ನಮ್ಮನಮ್ಮ ಸ್ವಭಾವಕ್ಕನುಗುಣವಾದ ಮಾರ್ಗದಲ್ಲಿ ಮುಂದುವರಿಸುತ್ತ ಮಹಾಕರುಣಾಶಾಲಿನಿಯಾಗಿ ಜ್ಞಾನವನ್ನೇ ಶಕ್ತಿಯ ಕೇಂದ್ರವಾಗಿರಿಸಿಕೊಂಡು ನಮ್ಮ ಆತ್ಮ-ಪ್ರಕೃತಿಗಳನ್ನು ದಿವ್ಯಸತ್ಯವಾಗಿ ಪರಿಣಮಿಸುವಂತೆ ರಚಿಸುತ್ತಾಳೆ. ಮಹಾಕಾಳಿಯು ನಿಷ್ಠುರವಾಗಿ ವರ್ತಿಸಿ, ತೀಕ್ಷ್ಣವಾದ ನೋವು ಸಹ ಕೊಟ್ಟು ಶತಮಾನಗಳು ಬೇಕಾಗುವ ಕೆಲಸವನ್ನು ಒಂದು ದಿನದಲ್ಲಿ ಮುಗಿಸಿಕೊಟ್ಟು ಶ್ರೇಷ್ಠತಮ ಆನಂದ, ಉನ್ನತತಮ ಎತ್ತರ, ಉದಾತ್ತತಮ ಆದರ್ಶಗಳಿಗೆ ಒಂದು ಅಂಗುಲ ಸಹ ದೂರ ಉಳಿಸದೆ ದಿವ್ಯವಿಜಯವನ್ನು ತಲುಪಿಸುತ್ತಾಳೆ. ಮಹಾಲಕ್ಷ್ಮಿಯು ಒಲ್ಲೆನೆಂದರೆ ಬಲುಮೆಮಾಡದೆ, ಬೇಡವೆಂದರೆ ಹೋರಾಡದೆ ಜ್ಞಾನಶಕ್ತಿಗಳಿಗೆ ಮೀರಿದ ಆನಂದದ ಅನುಭಾವರಹಸ್ಯಗಳಿಂದ ಎಲ್ಲ ಅಸ್ತಿತ್ವವೂ ಪವಿತ್ರ ಆನಂದದ ಕವಿತೆಯನ್ನಾಗಿಸುತ್ತಾಳೆ. ಮಹಾಸರಸ್ವತಿಯು ತೀರ ಹತ್ತಿರವಿದ್ದು ಒಲ್ಲೆನೆಂದರೂ ಕೇಳದೆ ಬೇಸತ್ತರೂ ಬೆಂಬಿಡದೆ ಪೂರ್ಣತೆಯ ನಸುಕೊರತೆಯನ್ನೂ ಸಹಿಸದೆ ಅತಿದೀರ್ಘವಾಗಿ ಕಷ್ಟಪಡುತ್ತ ಸಿದ್ಧಿಯನ್ನು ತಂದೊಪ್ಪಿ ಸುತ್ತಾಳೆ. ಈ ನಾಲ್ವರೂ ಮಾತೆಯರು ನಮ್ಮ ಪ್ರಕೃತಿಯನ್ನು ಈ ಬಗೆಯಲ್ಲಿ ತರಬೇತುಗೊಳಿಸುವುದು ಏತಕ್ಕೆ? ತಿದ್ದುಪಡಿಯಾಗುವ ಮೊದಲು ಮನುಷ್ಯನ ಸ್ವಭಾವವು ಬದ್ಧವಾದುದಾಗಿರುತ್ತದೆ. ಅಹಂಕಾರಯುಕ್ತವಾಗಿರು ತ್ತದೆ. ಆ ಕಾರಣ ಅದು ಮಹಾಸಾನ್ನಿಧ್ಯವನ್ನು ಸ್ವೀಕರಿಸಲಿಕ್ಕೆ ಸಮರ್ಥವಾಗಿರುವುದಿಲ್ಲ. ಪ್ರಚಂಡಕಾರ್ಯ ವನ್ನು ನಿರ್ವಹಿಸುವುದಕ್ಕೆ ಅರ್ಹವಾಗಿರುವುದಿಲ್ಲ. ಆದರೆ ಈ ರೀತಿಯಲ್ಲಿ ಪರಿವರ್ತನೆ ಹೊಂದಿದ ಮನ-ಪ್ರಾಣ-ದೇಹಗಳಲ್ಲಿ ನಾಲ್ಕು ಶಕ್ತಿಗಳು ತಮ್ಮ ಸಮರಸಗತಿಯನ್ನೂ ಸ್ವಾತಂತ್ರ್ಯವನ್ನೂ ಸ್ಥಾಪಿಸಿದಾಗ ಮಾತ್ರ ಇತರ ಅಪೂರ್ವತರವಾದ ಶಕ್ತಿಗಳು ಈ ಮರ್ತ್ಯಚಲನೆಯಲ್ಲಿ ಪ್ರಕಟವಾಗಲಿಕ್ಕೆ ಸಾಧ್ಯವಾಗುತ್ತದೆ. ಆಗಲೇ ಅತಿಮಾನಸ ಕ್ರಿಯೆಯೂ ಸಾಧ್ಯವಾಗುತ್ತದೆ. ಅದರಿಂದಲೇ ಹುಲ್ಲುಮಾನವನು ದೇವಮಾನವನ ಶಿಶುವಾಗಲು ಆರಂಭವಾಗು ತ್ತದೆ. ಸಹಜಜೀವಿಗಳು ಸಾವಕಾಶವಾಗಿ ಅನಂತಕಾಲವನ್ನು ಕಳೆದರೂ ಈ ಪಯಣಗಟ್ಟೆಗೆ ಬರಲೇಬೇಕು. ವಿಶೇಷಜೀವಿಗಳು ಅರಿತು ಮಾತೃಶಕ್ತಿಗಳ ಕೈಗೆ ತಮ್ಮನ್ನೊಪ್ಪಿಸಿ ನೇರವಾದ ದಾರಿಯಲ್ಲಿ ನಡೆದು ತೀವ್ರವಾಗಿ ಈ ಸಂಧಿಸ್ಥಳಕ್ಕೆ ಬಂದು ನಿಲ್ಲುವರು. ಈ ಪರಿವರ್ತನಕ್ರಿಯೆಯು ಇಡಿಯ ಜೀವಮಾನದಲ್ಲೆಲ್ಲ ನಡೆಯುವುದರಿಂದ ಇದು ಬಾಳಿನ ತಿದ್ದುಪಡಿಯೆನಿಸುವುದಿಲ್ಲವೇ ?

— ಸಿಂಪಿ ಲಿಂಗಣ್ಣ,

# ಜಗನ್ನಾಥನ ರಥ

ಆದರ್ಶ ಸಮಾಜವೇ ಮಾನವಕುಲದ ಅಂತರಾತ್ಮವು; ಅದೇ ಭಗವಂತನ ವಾಹನವು, ಅರ್ಥಾತ್ ಆದರ್ಶಸಮಾಜವೇ ಜಗನ್ನಾಥನ ಜಾತ್ರೆಯ ರಥವು. ಐಕ್ಯ, ಸ್ವಾತಂತ್ರ್ಯ, ಜ್ಞಾನ, ಶಕ್ತಿ ಇವೇ ಈ ರಥದ ನಾಲ್ಕು ಗಾಲಿಗಳು.

ಸಾಮಾನ್ಯ ಮಾನವಬುದ್ಧಿಯಿಂದ ಕಟ್ಟಲ್ಪಟ್ಟ ಅಥವಾ ಪ್ರಕೃತಿಯ ಅಶುದ್ಧ ಪ್ರಾಣಸ್ಪಂದನದ ಲೀಲೆಯಲ್ಲಿ ಮೈದಾಳಿದ ಸಮಾಜದ ರೀತಿಯೇ ಬೇರೆ ಈ ಬಗೆಯ ಸಮಾಜವು ಮನುಕುಲದ ನಿಯಂತಾರನಾದ ಭಗವಂತನ ರಥವಲ್ಲ; ಇದು ಎಲ್ಲರಲ್ಲಿರುವ ಅಂದರೆ ಸಮಷ್ಟಿಗತ ಅಹಂಕಾರದ ವಾಹನವು. ಈ ಅಹಂಕಾರವು ಮುಕ್ತಸ್ವರೂಪನಾದ ಅಂತರ್ಯಾಮಿಗೆ ಮುಸುಕಿಕ್ಕಿ ಬಹುರೂಪ ದೇವತೆಯ ಭಗವತ್ಪ್ರೇರಣೆಯನ್ನು ವಿಕೃತಗೊಳಿಸುವದು. ಈ ವಾಹನವು ಸಾಗುತ್ತದೆ ಬುದ್ಧಿಯ ಅಸಿದ್ಧ-ಅಸಂಪೂರ್ಣ ಸಂಕಲ್ಪದ ಸೆಳೆತದಿಂದ, ಹಾಗೂ ಅಪರಾ ಪ್ರಕೃತಿಯ ಒಂದು ಬಗೆಯ ಪುರಾತನ ಅಥವಾ ನೂತನ ವಿವಶ ಪ್ರೇರಣೆಯ ಎಳೆತದಿಂದ. ಅಹಂಕಾರಾರೂಢವಾದ ಈ ವಾಹನಕ್ಕೆ ಗೊತ್ತುಗುರಿಯೆಂಬುದಿಲ್ಲ; ಬಗೆಬಗೆಯ ಭೋಗಪೂರ್ಣ ಕರ್ಮಪಥದಲ್ಲಿಯೇ ಸದಾ ಇದರ ಸಾಗಾಟ. ಅಹಂಕಾರವೇ ಪ್ರಭುವಾಗಿ ಇರುವ ವರೆಗೆ ನಿಜವಾದ ಧ್ಯೇಯ ಸಿಕ್ಕುವದು ದುಸ್ತರವೇ ಸರಿ. ಒಂದು ವೇಳೆ ಗುರಿಯು ಗೊತ್ತಾದರೂ ಆ ಕಡೆಗೆ ನೇರವಾಗಿ ತೇರು ಸಾಗಿಸಿಕೊಂಡು ಹೋಗುವದು ಅಸಾಧ್ಯ. ಅಹಂಕಾರವೇ ಭಾಗವತಪರಿಪೂರ್ಣತೆಯ ದಾರಿಯಲ್ಲಿದ್ದ ಪ್ರಮುಖ ಆತಂಕ. ಈ ತತ್ತ್ವರಹಸ್ಯವು ವ್ಯಷ್ಟಿಗೆ ಅನ್ವಯಿಸುವಂತೆ ಸಮಷ್ಟಿಗೂ ಅಷ್ಟೇ ಪರಿಪೂರ್ಣವಾಗಿ ಅನ್ವಯಿಸುತ್ತದೆ.

ಸಾಧಾರಣ ಮನುಷ್ಯ ಸಮಾಜದಲ್ಲಿ ಮೂರು ಮುಖ್ಯ ಭೇದಗಳು ಕಂಡುಬರುತ್ತವೆ. ಮೊದಲನೆಯ ಪ್ರಕಾರವೆಂದರೆ ನಿಪುಣ ಶಿಲ್ಪಿಯ ಕೈವಾಡದಿಂದ ರೂಪುಗೊಂಡ ಸಮಾಜ. ಅದು ಸುಂದರ, ನಯ, ಉಜ್ಜ್ವಲ, ಅಮಲ, ಸುಖಕರ. ಈ ಬಗೆಯ ಸಮಾಜವನ್ನು ಮುಂದುವರಿಸಿಕೊಂಡು ಹೊರಟಿದೆ, ಒಳ್ಳೆಯ ನಡಿಗೆಯ ಕಸುವಿನ ಕುದುರೆ. ಅದು ಮುಂದುವರಿಯುತ್ತದೆ ಸತ್ಪಥದಲ್ಲಿ ಬಲು ಜೋಕೆಪಡಿದು, ತ್ವರಿತಳ್ಳಂಕವಿಲ್ಲದ ತತ್ತರಿಸದ ದೃಢಗತಿಯಲ್ಲಿ. ಇದರ ಮೇಲೇರಿ ಕುಳಿತ ಪ್ರಭುವೆಂದರೆ ಸಾತ್ತ್ವಿಕ ಅಹಂಕಾರ. ಉತ್ತುಂಗ ಪ್ರದೇಶದಲ್ಲಿ ಪ್ರತಿಷ್ಠಿತವಾದ ದೇವಮಂದಿರದ ಸುತ್ತೂ ಈ ರಥವು ತಿರುಗುತ್ತದೆ. ಆದರೆ ಈ ಪರಿಭ್ರಮಣವು ಗುಡಿಯಿಂದ ತುಸು ದೂರದೂರವಿದ್ದೇ ಸಾಗುವಂತಹದು. ಆ ಉನ್ನತ ಪ್ರದೇಶದ ಬಳಿ ಸಾರಲು ಅದಕ್ಕೆ ಆಗದು. ಅದನ್ನು ಏರುವದೇ ಆದಲ್ಲಿ ರಥದಿಂದ ಇಳಿದು ಏಕಾಕಿಯಾಗಿ ಕಾಲ್ನಡೆಯಿಂದೇ ಏರಿ ಹೋಗಬೇಕಾದುದು ಕ್ರಮಪ್ರಾಪ್ತ.

ಎರಡನೆಯ ಪ್ರಕಾರವೆಂದರೆ ವಿಲಾಸಿಯಾದ ಕರ್ಮಠರನ ಮೋಟಾರಬಂಡಿ. ಧೂಳಿ ಮುಸುಕಿದ ಬಿರುಗಾಳಿಯ ಹೊಟ್ಟೆಹೊಕ್ಕು ಭೀಮವೇಗದಿಂದ ಘನಘೋರ ವಜ್ರನಿರ್ಘೋಷದೊಂದಿಗೆ ರಾಜಪಥವನ್ನು ನುಚ್ಚುನುರಿಗೊಳಿಸುತ್ತ, ಅಶಾಂತ ಅಶ್ರಾಂತಗತಿಯಲ್ಲಿ ಅದು ಧಾವಿಸುವದು. ಅದರ ಭೇರಿರವಕ್ಕೆ ಕಿವಿಗಡಚಿಕ್ಕುವವು, ಎದುರಿಗೆ ಬಂದವರನ್ನೆಲ್ಲ ಅದು ತುಳಿದು ಜಜ್ಜಿ ಜರ್ಜರಗೊಳಿಸಿ ಹೊರಟುಹೋಗುವದು.

ಯಾತ್ರಿಕನ ಪ್ರಾಣಕ್ಕೆ ಸಂಕಟ ದುರ್ಘಟನೆ ಇವುಗಳಿಗೆ ಮಿತಿಯಿಲ್ಲ. ರಥವೂ ಚೂರುಚಾರಾಗಿ ಹೋಗುವದು; ಆದರೆ ಬಹು ಪ್ರಯಾಸದಿಂದ ಅದನ್ನು ಸರಿಪಡಿಸಿಕೊಂಡ ನಂತರ ಮತ್ತೆ ಅದರ ಬಿಂಕದ ನಡಿಗೆಯೇ. ಅದಕ್ಕೆ ಸುನಿರ್ದಿಷ್ಟವಾದ, ಖಚಿತವಾದ ಗುರಿಯೇ ಇಲ್ಲ. ಆದರೆ ಸಮೀಪದಲ್ಲಿ ಹೊಸದೇನಾದರೂ ನೋಟವೊಂದು ಕಣ್ಣೆದುರಿಗೆ ಬಂದರೆ, "ಇದೇ ಗುರಿ, ಇದೇ ಗುರಿ" ಎಂದು ಚೀರಾಡಿ ರಥದಲ್ಲಿ ಕುಳಿತ ರಾಜಸಿಕ ಅಹಂಕಾರವು ಆ ಕಡೆ ಓಡುವದು. ಈ ರಥದಲ್ಲಿ ಕುಳಿತು ಹೋಗುವದರಲ್ಲಿ ಸಾಕಷ್ಟು ಸುಖಭೋಗ ಉಂಟು; ಜೊತೆಗೆ ವಿಪತ್ತೂ ಅನಿವಾರ್ಯ. ಆದರೆ ಇದನ್ನೇರಿ ದೇವರನ್ನು ಹೊಂದುವದು ಅಸಂಭವ. ಆಧುನಿಕ ಪಾಶ್ಚಾತ್ಯ ಸಮಾಜವು ಈ ಬಗೆಯ ಮೋಟಾರ ಬಂಡಿಯಂತಿದೆ.

ಮೂರನೆಯ ಪ್ರಕಾರವೆಂದರೆ, ಹೊಲಸಾದ ಅರೆಮುರಿದ ಆಮೆಯ ವೇಗದ ಹಳೆಯ ಎತ್ತಿನ ಬಂಡಿ. ಕೊಳಗೇಡಿಯಾಗಿ, ಕೊರಗಿ ಅರೆಜೀವವಾದ, ಎಳೆಯಲಾಗದ ಎತ್ತಿನೊಡನೆ ಹೊರಟಿದೆ ಇದು, ಸಂದಿಗೊಂದಿಯ ಹಳ್ಳಿಯ ಹಾದಿಯಲ್ಲಿ. ಡೊಳ್ಳುಹೊಟ್ಟೆಯ, ಜೊಳ್ಳುಮೈಯ, ಮಾಸಿದ ಚಿಂದೆಯ ಕುರುಡು ಮುದುಕನೊಬ್ಬನು ಅದರಲ್ಲಿ ಕುಳಿತಿದ್ದಾನೆ. ಕುಳಿಕುಳಿತಲ್ಲಿ ಆನಂದತುಂದಿಲನಾಗಿ, ಕೆಸರುಕೊಳೆ ತಗಲಿದ ಗುಡುಗುಡಿ ಸೇದುತ್ತ ಸೇದುತ್ತ, ಬಂಡಿಯ ಕರ್ಣಕರ್ಕಶ ಸಪ್ಪಳ ಕೇಳುತ್ತ ಕೇಳುತ್ತ, ಗತಕಾಲದ ಎಷ್ಟೋ ವಿಕೃತ ವಿಕಟ ಪ್ರಸಂಗಗಳ ಅರೆನೆನಹಿನಲ್ಲಿ ತಲ್ಲೀನನಾಗಿದ್ದಾನೆ. ಈ ಬಂಡಿಯ ಒಡೆಯನ ಹೆಸರು ತಾಮಸಿಕ ಅಹಂಕಾರ. ಸಾರಥಿಯ ಹೆಸರು, ಪುಸ್ತಕ ಮುಖಸ್ಥ ಮಾಡಿದ ಜ್ಞಾನ; ಅವನು ಪಂಚಾಂಗ ನೋಡಿ ನೋಡಿ ಪ್ರಯಾಣ ಮುಹೂರ್ತವನ್ನೂ ದಿಕ್ಕನ್ನೂ ಗೊತ್ತುಪಡಿಸುತ್ತಾನೆ. ಬಾಯಲ್ಲಿ ವಟಗುಟ್ಟುತ್ತಾನೆ, "ಯಾವುದು ಇದೆಯೋ ಅಥವಾ ಇತ್ತೋ ಅದೇ ಒಳ್ಳೆಯದು, ಹೀಗಾಗಬೇಕು ಹಾಗಾಗಬೇಕು ಎಂಬ ಹವ್ಯಾಸವು ಕೇಡಿಗೇಡು ಮಾಡುವಂತಹದು!" ಈ ರಥದಲ್ಲಿ ಕುಳಿತು ಭಗವಂತನನ್ನಲ್ಲದಿದ್ದರೂ ಶೂನ್ಯಬ್ರಹ್ಮನನ್ನು ಹೊಂದುವ ಸಂಭವವು ಸಾಕಷ್ಟು ಉಂಟು.

ಈ ತಾಮಸಿಕ ಅಹಂಕಾರದ ಎತ್ತಿನ ಬಂಡಿಯು ಹಳ್ಳಿಯ ಹಸುಕುಹಾದಿಯಲ್ಲಿ ನಡೆವ ವರೆಗೆ ಹೆದರಿಕೆ ಇಲ್ಲ. ಆದರೆ ಅದು, ವೇಗವಿಮೂಢ ಮೋಟಾರ ಬಂಡಿಗಳ ಓಡಾಟವಿರುವ ಜಗತ್ತಿನ ರಾಜವೀಧಿಯಲ್ಲಿ ಒಂದು ದಿನ ಬಂದು ನಿಂತಿತೆಂದರೆ, ಆಗ ಅದರ ಅವಸ್ಥೆ ಏನಾದೀತು ಎಂಬುದನ್ನು ನೆನೆದಾಕ್ಷಣ ಜೀವ ಜಲ್ಲೆನ್ನುವದು. ಇವರಲ್ಲಿ ತೊಂದರೆಯ ವಿಷಯವೆಂದರೆ, ವಾಹನವನ್ನು ಬದಲಿಸಿಕೊಳ್ಳಬೇಕೆನ್ನುವ ಇಲ್ಲವೆ ಅದನ್ನು ಬದಲಿಸುವ ಸಮಯವನ್ನು ಗುರುತಿಸುವ ಸಂಗತಿಯೇ ತಾಮಸಿಕ ಅಹಂಕಾರದ ಜ್ಞಾನಶಕ್ತಿಗೆ ತಿಳಿಯದು. ಗುರುತಿಸಿಕೊಳ್ಳಬೇಕೆಂಬ ಪ್ರವೃತ್ತಿಯೂ ಇಲ್ಲ. ಯಾಕೆಂದರೆ ಈ ಸಂಗತಿ ಗೊತ್ತಾಗಿಬಿಟ್ಟರೆ ಅದರ ವ್ಯವಹಾರವೇ ಕಟ್ಟಾಗಿಬಿಡುವದು ಹಾಗೂ ಅದರ ಒಡೆತನವೇ ನಷ್ಟವಾಗಿ ಹೋಗುವದು. ಒಂದು ವೇಳೆ ಈ ಸಮಸ್ಯೆ ತಲೆಯೆತ್ತಿ ನಿಂತದ್ದಾದರೆ, ಯಾತ್ರಿಕರಲ್ಲಿ ಕೆಲಕೆಲವರು ಅನ್ನುವರು, "ಇರಲಿಬಿಡು, ಇದೇ ಒಳ್ಳೆಯದು; ಯಾಕೆಂದರೆ ಇದು ನಮ್ಮದೇ" ಎಂದು. ಈ ಬಗೆಯ ಜನ, ಮಡಿವಂತ ಜನ; ಅಥವಾ ಇವರು ಭಾವುಕ ದೇಶಭಕ್ತರು. ಇನ್ನು ಕೆಲರು ಅನ್ನುತ್ತಾರೆ, "ಅಲ್ಲಿಷ್ಟು ಇಲ್ಲಿಷ್ಟು ಸರಿಪಡಿಸಿಕೊಂಡು ಇದರಿಂದೇ ಕೆಲಸ ತೆಗೆದುಕೊಂಡರಾಯ್ತು" ಎಂದು. ಈ ಬಗೆಯ ಸುಲಭ ಉಪಾಯದಿಂದ ಇವರು ಈ ಎತ್ತಿನ ಬಂಡಿಯನ್ನು ಅನಿಂದ್ಯವಾದ, ಅಮೂಲ್ಯವಾದ ಮೋಟಾರಬಂಡಿಯಾಗಿ ಮಾರ್ಪಡಿಸತಕ್ಕವರು! ಇಂತಹರ ಹೆಸರು 'ಸಂಸ್ಕಾರ'. ಇನ್ನು ಯಾರುಯಾರು ಅನ್ನುತ್ತಾರೆ, "ಪ್ರಾಚೀನ ಕಾಲದ ಸುಂದರ ರಥವು ಮರಳಿ ಬರಲಿ" ಎಂದು. ನಡುನಡುವೆ ಅವರು ಈ ಅಸಾಧ್ಯ ಸಾಧನದ ಉಪಾಯ ಹುಡುಕಿತೆಗೆಯಲು ಪ್ರಯಾಸ ಪಡುವದೂ ಉಂಟು. ಆದರೆ ಆಶೆಗೆ ತಕ್ಕಂತೆ ಫಲವು ದೊರಕುವದೆಂಬ ಬಗ್ಗೆ ಎಲ್ಲಿಯೂ ಯಾವುದೇ ಬಗೆಯ ವಿಶೇಷ ಲಕ್ಷಣಗಳೇನೂ ಗೋಚರಿಸುವದಿಲ್ಲ.

ಇದಕ್ಕೂ ಹೆಚ್ಚಿನ ಪ್ರಯತ್ನಕ್ಕೆ ಹಿಂಜರಿದು ನಾವು ಒಂದು ವೇಳೆ ಈ ಮೂರರಲ್ಲಿಯೇ ಒಂದನ್ನು ಆಯ್ದುಕೊಳ್ಳುವದು ಅನಿವಾರ್ಯವಾದರೆ ಸಾತ್ತ್ವಿಕ ಅಹಂಕಾರದ ಹೊಸ ರಥವೊಂದನ್ನು ರಚಿಸಿಕೊಳ್ಳುವದು ಯುಕ್ತವಾದೀತು. ಆದರೆ ಜಗನ್ನಾಥದ ರಥವು ರೂಪುಗೊಳ್ಳದ ವರೆಗೆ, ಆದರ್ಶ ಸಮಾಜವು ಮೈದಾಳಿ ಬರಲಾರದು. ಅವೇ ಆದರ್ಶ, ಗಭೀರತಮ, ಉಚ್ಚತಮ, ಚರಮ ಸತ್ಯದ ವಿಕಾಸ ಹಾಗೂ ಪ್ರತಿಕೃತಿ. ಮನುಷ್ಯಜಾತಿಯು ಗುಪ್ತ ವಿಶ್ವಪುರುಷನ ಪ್ರೇರಣೆಯಿಂದ ಅದನ್ನೇ ರೂಪಿಸಲು ಯತ್ನಮಗ್ನವಾಗಿದೆ. ಆದರೆ ಪ್ರಕೃತಿಯ ಅಜ್ಞಾನವಶದಿಂದ ಇನ್ನಾವುದೋ ಪ್ರತಿಮೆಯಾಗಿ ಕೂಡುವದು. ಆ ಪ್ರತಿಮೆಯು ಒಮ್ಮೆ ವಿಕೃತವಾಗಿ, ಕುತ್ಸಿತವಾಗಿ, ಅಸಿದ್ಧವಾಗಿ ನಿಲ್ಲುವದು; ಇಲ್ಲವೆ ಒಮ್ಮೊಮ್ಮೆ ಒಟ್ಟಿನಮೇಲೆ ಹೇಗೋ ನಡೆಯಬಹುದಾದ ಅರ್ಧಸುಂದರ ಅಥವಾ ಸುಂದರವಾಗಿದ್ದರೂ ಅಸಂಪೂರ್ಣ ಮೂರ್ತಿಯಾಗಿಬಿಡುವದು. ಅಂತೂ ಏನು, ಶಿವನ ಬದಲು ವಾಮನನೋ ರಾಕ್ಷಸನೋ ಆಗಿ, ಇಲ್ಲವೆ ಜನಸಾಮಾನ್ಯರ ಅರ್ಧದೇವತೆಯಾಗಿ ಹೋಗುವದು.

ಜಗನ್ನಾಥನ ರಥದ ಹೊಸ ಆಕೃತಿಯನ್ನಾಗಲಿ, ಮಾದರಿಯನ್ನಾಗಲಿ ಯಾರೂ ಅರಿಯರು. ಯಾವ ಜೀವನಶಿಲ್ಪಿಯೂ ಅದನ್ನು ರೇಖಿಸಬಲ್ಲ ಪಾರಂಗತಿ ಪಡೆದಿಲ್ಲ. ಆ ಚಿತ್ರವು ವಿಶ್ವಪುರುಷನ ಹೃದಯದಲ್ಲಿ ಸಿದ್ಧವಾಗಿದ್ದು ಅದು ನಾನಾ ಆವರಣಗಳಿಂದ ಆವೃತವು. ದ್ರಷ್ಟಾರರೂ ಕರ್ತೃತ್ವಶಾಲಿಗಳೂ ಆದ ಅನೇಕ ಭಗವದ್ವಿಭೂತಿಗಳ ಅನೇಕ ಪ್ರಯತ್ನಗಳ ಮುಖಾಂತರ ನಿಧಾನವಾಗಿ ಅದನ್ನು ಹೊರಪಡಿಸಿ, ಈ ಸ್ಥೂಲ ಜಗತ್ತಿನಲ್ಲಿ ಈ ಬಗೆಯಾಗಿ ಅದನ್ನು ಪ್ರತಿಷ್ಠಿಸಬೇಕೆಂದು ಅಂತರ್ಯಾಮಿಯ ಉದ್ದೇಶ.

ಜಗನ್ನಾಥನ ಈ ರಥದ ಮೂಲನಾಮವು ಸಮಾಜವಲ್ಲ, ಸಂಘ. ಬಹುಮುಖಿಯಾದ, ಶಿಥಿಲವಾದ ಜನಸಂಘ ಅಥವಾ ಜನತೆ ಅಲ್ಲ; ಆತ್ಮಜ್ಞಾನದ, ಭಾಗವತಜ್ಞಾನದ ಐಕ್ಯೋನ್ಮುಖ ಶಕ್ತಿಯ ಬಲದಿಂದ, ಆನಂದ ಮೂಲಕವಾಗಿ ಮೈದಾಳಿದ ಬಂಧನರಹಿತವಾದ ಅಚ್ಛೇದ್ಯವಾದ 'ಸಂಹತಿ'ಯೇ ಭಾಗವತಸಂಘ.

ಒಂದೆಡೆಗೆ ಕೂಡಿದ ಅನೇಕ ಜನರು ಒಟ್ಟಾಗಿ ಕೆಲಸ ಮಾಡುವ ಉಪಾಯವೇ 'ಸಂಹತಿ' ಎನ್ನಿಸಿಕೊಳ್ಳುತ್ತದೆ, ಹಾಗೂ ಅದೇ ಸಮಾಜವೆಂಬ ಹೆಸರಿನಿಂದ ಖ್ಯಾತವಾಗಿದೆ. 'ಸಂಹತಿ' ಶಬ್ದದ ಉತ್ಪತ್ತಿಯನ್ನು ತಿಳಿಯುವದರಿಂದ ಅರ್ಥವೂ ತಿಳಿಯುವದು. ಸಮ್ ಪ್ರತ್ಯಯದ ಅರ್ಥ ಏಕತ್ರವೆಂದಾಗುವದು; ಅಜ್ ಧಾತುವಿನ ಅರ್ಥ ಗಮನ, ಧಾವನ, ಯುದ್ಧ ಎಂದಾಗುವದು. ಸಾವಿರ ಸಾವಿರ ಮಾನವರು ಕರ್ಮಾರ್ಥಿಗಳಾಗಿಯೂ ಕಾಮಾರ್ಥಿಗಳಾಗಿಯೂ ಒಂದೆಡೆ ಕೂಡುತ್ತಾರೆ, ಒಂದೇ ಕ್ಷೇತ್ರದಲ್ಲಿ ನಾನಾಪ್ರಕಾರದ ಲಕ್ಷ್ಯದತ್ತ ಧಾವಿಸುತ್ತಾರೆ. ಯಾರು ಮುಂದೆ, ಯಾರು ಹಿಂದೆ, ಯಾರು ದೊಡ್ಡವರು, ಯಾರು ಸಣ್ಣವರು, ಹೀಗೆ ಈ ಬಗೆಗೆ ಗುದುಮುರಿಗೆಯೂ ಪರದಾಟವೂ ನಡೆದುಹೋಗುವದು. ಈ ಸ್ಪರ್ಧೆಯು ಸಮಾಜ-ಸಮಾಜಗಳಂತೆ ವ್ಯಕ್ತಿವ್ಯಕ್ತಿಗಳಲ್ಲಿಯೂ ಕಂಡುಬರುವದು. ಯುದ್ಧ ಬಡಿದಾಟಗಳ ಕೋಲಾಹಲದಲ್ಲಿಯೇ ಒಬ್ಬರೊಬ್ಬರ ಬಂಧನಕ್ಕಾಗಿಯೂ ಸಹಾಯಕ್ಕಾಗಿಯೂ ಮನೋವೃತ್ತಿಗಳ ಪರಿಪೋಷಣಕ್ಕಾಗಿಯೂ ಬಗೆಬಗೆಯ ಸಂಬಂಧ ಬಾಂಧವ್ಯಗಳು ತಾವಾಗಿ ಸ್ಥಾಪಿತವಾಗಿವೆ; ಬಗೆಬಗೆಯ ಆದರ್ಶಗಳು ಪ್ರತಿಷ್ಠಿತವಾಗಿವೆ. ಇವುಗಳ ಫಲಿತಾಂಶವೆಂದರೆ, ಕಷ್ಟಸಿದ್ಧ, ಅಸಂಪೂರ್ಣ, ಅಸ್ಥಾಯಿಯಾದ ಯಾವುದೋ ಒಂದು ಮೈದಾಳಿ ನಿಂತಿದ್ದು, ಇದೇ ಇಂದಿನ ಸಮಾಜದ, ಪ್ರಕೃತ ಜಗತ್ತಿನ ರೂಪರೇಷೆ.

ಭೇದದ ಭಿತ್ತಿಯ ಮೇಲೆ ನಿಂತಿದೆ ಪ್ರಾಕೃತ ಸಮಾಜ. ಈ ಭೇದವನ್ನೇ ಆಧರಿಸಿ ನಿರ್ಮಿತವಾಗಿದೆ, ಅಸ್ಥಾಯಿಯೂ ಅನಿಶ್ಚಿತವೂ ಆದ ಕಿಂಚಿನ್ಮಾತ್ರ ಐಕ್ಯ. ಆದರೆ ಆದರ್ಶ ಸಮಾಜದ ಕಟ್ಟಣೆಯ ಬಗೆಯು ಇದಕ್ಕೆ ತೀರ ವಿಪರೀತ. ಈ ಕಟ್ಟಣೆಗೆ ಐಕ್ಯದ ಭಿತ್ತಿ; ಆನಂದ ಹಾಗೂ ವೈಚಿತ್ರ್ಯಕ್ಕೋಸುಗ ವೈವಿಧ್ಯದ

ಲೀಲೆ, ಭೇದವಲ್ಲ. ಸಮಾಜದಲ್ಲಿ ಸಿಕ್ಕುವದು ಕೇವಲ ಶಾರೀರಿಕ, ಮನಃಕಲ್ಪಿತ ಮತ್ತು ಕರ್ಮಗತ ಐಕ್ಯದ ಆಭಾಸ; ಆದರೆ ಆತ್ಮಗತ ಐಕ್ಯವು ಸಂಘದ ಪ್ರಾಣ.

ಸಂಘ ಸಂಸ್ಥಾಪನೆಯ ನಿಷ್ಫಲಪ್ರಯತ್ನವು ಹಿಂದಕ್ಕೆ ಎಷ್ಟೋಸಲ, ಸಂಕುಚಿತ ಕ್ಷೇತ್ರದಲ್ಲಿ, ಅಂಶತಃ ಆಗಿದ್ದುಂಟು. ಆದರೆ ಆ ಸಂಘವು ಬುದ್ಧಿನಿಷ್ಠ ಚಿಂತನದಿಂದ ಬಂದ ಪ್ರೇರಣೆಯ ಫಲವಾಗಿ ಎಂದೆನ್ನಬಹುದು, —ಉದಾಹರಣಾರ್ಥ ಪಾಶ್ಚಾತ್ಯದೇಶದಲ್ಲಿ; ಅಥವಾ ನಿರ್ವಾಣೋನ್ಮುಖ, ಕರ್ಮವಿರತಿಯ, ಕೇವಲ ಆತ್ಮನಿರೀಕ್ಷಣ ಮೂಲಕವಾಗಿ ಬಂದ ಸಂಘ,—ದೃಷ್ಟಾಂತ ಬೌದ್ಧರದು; ಅಥವಾ ಭಾಗವತಭಾವದ ಆವೇಗದಲ್ಲಿ ಹುಟ್ಟಿದ ಸಂಘ,—ಇದಕ್ಕೆ ಉದಾಹರಣೆ ಮೊಟ್ಟಮೊದಲಿನ ಕ್ರೈಸ್ತ ಸಂಘ. ಆದರೆ ಅಲ್ಪಾವಕಾಶದಲ್ಲಿಯೇ ಸಮಾಜ ದಲ್ಲಿದ್ದೆಲ್ಲ ಕುಂದುಕೊರತೆಗಳು, ಅನುದಾತ್ತ ಭಾವಗಳು, ಅಸಂಪೂರ್ಣ ಪ್ರವೃತ್ತಿಗಳು ಇವೇ ಮೊದಲಾದವು ಸಂಘದ ಒಳಸೇರಿ 'ಸಂಘ'ವನ್ನು ಮತ್ತೆ 'ಸಮಾಜ'ವಾಗಿ ಬದಲಿಸಿದ್ದುಂಟು. ಚಂಚಲ ಬುದ್ಧಿಯ ಚಿಂತನೆಯು ಬಹುಕಾಲ ತಾಳುವಂತಹದಲ್ಲ; ಹಳೆಯ ಇಲ್ಲವೆ ಹೊಸ ಪ್ರಾಣಪ್ರವೃತ್ತಿಗಳ ಅದಮ್ಯವಾದ ಸ್ರೋತಕ್ಕೆ ಸಿಲುಕಿ ಅದು ಕೊಚ್ಚಿಹೋಗುವದು. ಅದರಂತೆ ಭಾವಾವೇಗವನ್ನು ಬಳಸಿ ಸಂಘಸ್ಥಾಪನೆಗೆ ಪ್ರಯತ್ನಿಸಿದರೆ, ಅದು ಸಫಲವಾಗುವದು ಅಸಂಭವವೇ ಸರಿ. ಭಾವವು ತನ್ನದೇ ತೀವ್ರಗತಿಯ ಆವೇಗಕ್ಕೆ ಪಕ್ಕಾಗಿ ದಣಿದು ಕೈಕಾಲು ಗೆಡುವದು. ಇನ್ನು ನಿರ್ವಾಣದ ಮಾತು. ನಿರ್ವಾಣಸಂಧಾನವನ್ನು ಏಕಾಕಿಯಾಗಿ ಮಾಡುವದೇ ಒಳ್ಳೆಯದು. ನಿರ್ವಾಣಪ್ರಿಯತೆಯಲ್ಲಿ ಸಂಘಸೃಷ್ಟಿ ಮಾಡುವದೆಂದರೆ ಅದೊಂದು ವಿಪರೀತವಾದ ವಿಷಮ ವ್ಯಾಪಾರವೇ ಸೈ. ಸಂಘವು ಸ್ವಭಾವತಃ ಕರ್ಮದ ಹಾಗೂ ಸಾಮೂಹಿಕ ಸಂಬಂಧದ ಲೀಲಾಭೂಮಿಯು.

ಜ್ಞಾನ, ಕರ್ಮ ಮತ್ತು ಭಾವಗಳ ಸಮಂಜಸ ಹೊಂದಿಕೆ ಹಾಗೂ ಒಂದಿಕೆಗಳ ಫಲವಾಗಿ ಆತ್ಮಗತ ಐಕ್ಯವು ತಲೆದೋರಿದಂದು, ಸಮಷ್ಟಿಗತ ವಿರಾಟ್‌ಪುರುಷನ ಇಚ್ಛಾಶಕ್ತಿಯ ಪ್ರೇರಣೆಯಿಂದ ಜಗನ್ನಾಥನ ರಥವು ರಾಜವೀಥಿಯಲ್ಲಿ ಹೊರಬಿದ್ದು ದಶದಿಕ್ಕುಗಳನ್ನೂ ಬೆಳಗುವದು. ಪೃಥ್ವೀವಕ್ಷದಲ್ಲಿ ಸತ್ಯಯುಗವು ಇಳಿದು ಬರುವದು. ಮರ್ತ್ಯಮಾನವನ ಪೃಥ್ವಿಯಾಗುವದು ದೇವತೆಯರ ಲೀಲಾಭೂಮಿ, ದೇವಮಂದಿರನಗರ —Temple City of God, ಅಂದರೆ "ಆನಂದಪುರಿ."

ಮೊದಲು ಪ್ರಕಟವಾದದ್ದು ೧೯೨೦

— ಶ್ರೀ ಅರವಿಂದರು
(ಅನುವಾದಕರು: ಶ್ರೀ. ನಾರಾಯಣ ಸಂಗಮ)

---

"ಯೋಗವು ಮಾನವಕೋಟಿಯ ಸಲುವಾಗಿ ಇದೆಯೇ?"

"ಇಲ್ಲ. ಅದು ಪರಮಾತ್ಮನ ಸಲುವಾಗಿ ಇದೆ. ನಾವು ಅರಸುತ್ತಿರುವುದು ಮಾನವಕೋಟಿಯ ಕಲ್ಯಾಣವನ್ನಲ್ಲ; ಆದರೆ ಪರಮಾತ್ಮನ ಪ್ರಕಟೀಕರಣವನ್ನು. ಪರಮಾತ್ಮನ ಸಂಕಲ್ಪವನ್ನು ನೆರವೇರಿಸುವುದಕ್ಕೆ ನಾವಿಲ್ಲಿ ಇದ್ದೇವೆ. ಹೆಚ್ಚು ಸತ್ಯವಾಗಿ ಹೇಳಬೇಕೆಂದರೆ, ಪರಮಾತ್ಮನ ಸಂಕಲ್ಪದಿಂದ ಚಲನೆ ಪಡೆದವರಾಗಿ, ಪರಾತ್ಪರವನ್ನು ಉತ್ತರೋತ್ತರವಾಗಿ ಮೂರ್ತಗೊಳಿಸುವ ಹಾಗೂ ಪೃಥ್ವಿಯ ಮೇಲೆ ಆತನ ರಾಜ್ಯವನ್ನು ಸ್ಥಾಪಿ ಸುವ ಕಾರ್ಯದಲ್ಲಿ ನಾವು ಆತನ ಸಂಕಲ್ಪದ ಯಂತ್ರಗಳಾಗಬೇಕಾಗಿರುವದು. ಪರಮಾತ್ಮನ ಆಹ್ವಾನಕ್ಕೆ ಮಾರ್ದನಿಗೊಡುವ, ಮಾನವಕೋಟಿಯ ಅಷ್ಟು ಅಂಶವು ಮಾತ್ರವೇ ಆತನ "ಕೃಪೆ"ಯನ್ನು ಪಡೆಯುವದು."

— ಶ್ರೀ ತಾಯಿಯವರು

# ಶ್ರೀ ಅರವಿಂದರ ಕವನಗಳು

## ೧ ಸ್ವಪ್ನ ನೌಕೆ

(*Dream Boat)

ಓ ಸ್ವಪ್ನಾಗ್ನಿಸ್ಪೃಷ್ಟಾ ನೌಕಾರೂಢಾಽ ಗೂಢಾ
    ಯಾರವನೋ ಚಿರತರುಣಾಽ ಬಂದಾ
ಹುಬ್ಬೋ, ಅನಂಗನು ಚಿತೆಯಲಿ ಮಣಿಸಿದ ಕಬ್ಬೋ
ಆಹಾ ಈ ಕಾಯಾ ಹಿರಣ್ಯಾಽಗರ್ಭಚ್ಛಾಯಾ
                —ಆಕೃತಿಬಂಧಾ
ಮೌನಾ ಕರಗಿಸಿ ಎರೆದಾ, ಸೆಳೆಮಿಂಚಿನ ತೆರದಾ,
                ಸವಿನುಡಿ ಛಂದಾ—
‘ಆ ಹೃದಯ ಜ್ವಾಲಾ ಮಾಲಾಽಲಂಕೃತಾ ಯಜ್ಞಾ ಸಿದ್ಧವೇನೇ ?
                ಕಂಕಣಾ ಬದ್ಧವೇನೇ ?
    ಬಂದೆನೇ ! ಬರುವಿಯೇನೇ ? ’—ಎಂದಾ

ಅರರೇ, ಗದಗದನೇ ಏನೋ ನಡುಗಿತ್ತೋ—ನಡುಗಿತ್ತೂ
                ಎದೆಗೂಡಿನ ಒಂದೇ
    ಏನೇನೋ ಅಡಗಿತ್ತೋ—ಅಡಗಿತ್ತೂ
ನೆನಪೇ ನನೆಕೊನೆಹೋಗಿ ಪಲ್ಲವಿಸಿತೋ ಜೀವನವೃಕ್ಷಾ
    ಆನೋಽವ ಲಿಂಗಽ ಪಡಪಡಿಸಿತು ಪ್ರಾಣದ ಪಕ್ಷಾ
ಪ್ರತಿಬಿಂಬಿತವಾಯ್ತೋಽ ಭಗ್ನಸೇ, ಸ್ಮೃತಿಸಾರದ ಸಾತ್ತ್ವಿಕ ಲಕ್ಷಾ
    ಓಹೋ ಹೋಯಿತೋ ಹಡಗಾ, ಬಂಗಾರದ ಹುಡುಗಾ
                ಹೃದಯದ ದೇವಾ !—
                ತಾಳಿನೇ ನೋವಾ
ಟೊಳ್ಳೋಽ ಈ ಜಗವೆಲ್ಲಾ ಬಯಲಿನ ಡೊಗರು
                ಬದುಕಾಗಿದೆ ಹಗುರು
ಬಲವಿಲ್ಲಾ ಬಾರನು ನಲ್ಲಾ, ಹಳೆ ಹಿಗ್ಗಿಗೆ ಮೂಡದು ಚಿಗುರು

---

* Collected Poems and Plays, Vol II, Page 366.

ಬರದೋ, ಬರಪೆಸಿಸಪೆ ಎಂದೂ ಬರದು
ಕಿಸಲಯ-ನಯ ಹೋಗದೆ ತರಿದು
ಬರಿದಾಗದೆ ಒಳಗೂ ಹೊರಗೂ

ಆ ರುಕ್ಮಾಂಗದ ದೇವನ ಕನಸೂ ಬರಿದಾಗಿ
ಕನಸಿನ ಹಡಗಾs ಬರದಾಗಿ

## ೨ ಹುಲಿ ಮತ್ತು ಹುಲ್ಲೆ

(*The Tiger and the Deer)

I

ಮಿಂಚಿ ಚಕಮಕ, ಬಾಗಿ ತೂಗುತ, ಮಣಿದು ಬಳಕುತ ತಡೆದಿದೆ
ಕಾಮಬೆಟ್ಟದ ಪಚ್ಚೆ ಹೃದಯದಿ ಏನು ನುಸುಳುತ ನಡೆದಿದೆ
ನಯನ ಸಿಗಿನಿಗಿ ಎದೆಯ ದೃಢ ಪಡೆ ಏನೊ ನಾತವ ಹಿಡಿದಿದೆ
ಕಳ್ಳ ಹೆಜ್ಜೆಯ ಮೆಲ್ಲ-ನಡಿಗೆಯ ಘಾತಸಂಭ್ರಮ ಪಡೆದಿದೆ
ಎಲೆಯ ಸಂದಿಗಳಿಂದ ಜಳಕನೆ ಹರಿದ ಮರ್ಮರ ಗಾಳಿಯೆ
ಮೊದಲೆ ನಿರ್ದಯವಾದ ಅದ್ಭುತ ಮತ್ತೆ ಕೆರಳಿದರೆಂತೆನೆ
ಉಸಿರನಡಗಿಸಿ ಭಯದಿ ನಡುಗುತ ಕಾಣಕಾಣುತ ಜಾರಿದೆ
ಮಹಾಮೃಗವಗೊ ಹೇಗೆ ಸಾಗಿದೆ ಬಾಗಿ ನಯಭಯಮಯದಲಿ
ಸೌಮ್ಯ ಸೌಂದರ್ಯವನು ನಶಿಸಲು ರೌದ್ರ ಸುಂದರ ನಯದಲಿ

II

ಮುಗ್ಧ ಮೃಗವಧು ತನ್ನ ಕಾಲಿಲೆ ಮರಣವಿದ್ದೆಡೆ ಸಾಗಿಹೆ
ಬನದ ತಣ್ಣೆಳಲಲ್ಲಿ ತಿಳಿಗೊಳದಲ್ಲಿ ನಿರ್ಭಯ ಬಾಗಿದೆ
ಪಾಪ, ಸಂಶಯವೆಂಬುದೇ ಗೊತ್ತಿಲ್ಲ ನಂಬುಗೆ ಜೀವಕೆ
ಆಚೆ-ಈಚೆಗೆ ನೋಡದೇ ನಾಲಗೆಯ ಚಾಚಿರೆ ತೇವಕೆ
ಹಾರಿ ಜಿಗಿದಿತು ಮೇಲೆ ಒಗೆದಿತು ಹುಲಿಯು ಹುಲ್ಲೆಯ ಹೀರಿತು
ಅಯ್ಯೊ ಬಿದ್ದಿತು, ಭಕ್ಷ್ಯವಾಯಿತು, ಆಯಿತೋ ಬಾಳಾಯಿತು,
ಗಹನ ಗುಹೆಯಲಿ ಒಂಟಿ ಇಹ ಸಖನನ್ನೆ ನೆನೆಯುತ ತೀರಿತು
ಅದೇ ಸುಖವಲಿ ಮೃತ್ಯುಮುಖದಲಿ ಹುಲ್ಲೆ ಓ ಹಾಳಾಯಿತು
ಹಾರಿ ಜಪ್ಪಿಸಿ ಕೊಲುವ ಕೌಶಲವಿರಲಿ ಆರ್ಭಟೆ ಇಂದಿನ
ಆದರೂ ಬಂದೀತು ಎಂದೋ ಹುಲಿಯೆ ಲಯವಾದೊಂದಿನ

III

ನೆಲವ ಲಟಲಟ ಮುರಿಯೆ ಮೆಟ್ಟಿದ ಪೆಡಂಭೂತಗಳಿಲ್ಲವೆ ?
ನೆರಳ ತಂಗೊಳ ಜಲವ ಕುಡಿದುಳಿದಾವು ಹರಿಣಗಳಿಲ್ಲಯೇ

* Collected Poems and Plays, Vol. II, Page 374.

ಪ್ರಬಲ ಬಲಿಯೇ ತನ್ನ ಬಲಭರಭಾರದಲ್ಲಿಯೆ ಮಡಿವನು
ಬದುಕಿನೊಡೆಯನು ಸತ್ತ್ವನೆನಿಸಿದ ಸತ್ಯಸಂತತಿ ಜೀವನು
ಕೊಲ್ಲಬಲ್ಲವ ಮೆಲ್ಲಮೆಲ್ಲನೆ ಮೃತ್ಯುಪಂಥವ ಹಿಡಿವನು

## ೩ ಸಾಕ್ಷಿ ಮತ್ತು ಚಕ್ರ

(*The Witness and the Wheel*)

ಯಾರಣ್ಣಾ ನೀ ಬಿಡುಗಣ್ಣನೇ ಎದೆಗೆಳೆಯ ಕುಳಿತಿಹೆ ತಣ್ಣನೇ
ಮಾನವನ ಕರ್ಮವ ಬಿಮ್ಮನೇ ಸುಖದುಃಖ ನೋಡುವೆ ಸುಮ್ಮನೇ
ಸಂತಾಪ ಜಾಲಕೆ ಅದರದೇ ಮರಣಕ್ಕು ವಿಧಿಗೂ ಬೆದರದೇ
ಕುರುಡು ಜಗ ಉರುಳುವುವ ಕಾಯುವೆ ಸಾಕ್ಷಿ ಕಣ್ಣಾ ನೋಯುವೇ
ಈ ವಕ್ರ ಚಕ್ರದ ಜೊತೆಗೆ ನಿಃಸಹನಂತೆ ಏತಕೊ ತಿರುಗುವೆs
ಯಾ ಕಲ್ಪ ತವ ಸಂಕಲ್ಪವೋ ಈ ಹೃದಯ ದುಡಿಸಿದೆ ಸ್ವಲ್ಪವೇ
ನೀ ನಿಲ್ಲದೇನೂ ನಿಲ್ಲದೋ ಚಿರಕಾಲದಲು ಅನುಭಾವಿಯೋ
ಜಡ ಪ್ರಕೃತಿ ನಿಯಮಿತ ಪ್ರೇರಣೆಯ ಬಿಟ್ಟಿನ್ನು ಜೀವನ ತೊಳೆವೆವು
ಹುಲು ಎದೆಯ ವಾಸನೆ ತೊಳೆವೆವುs ನಿಶ್ಚಿಂತೆ ಪರಿಣತಿಗೊಳುವೆವು
ಎಂದಿನಂತೆಯೆ ಹಿಂದಿನಂತೆಯೆ ಪ್ರಕೃತಿರಥವೋ ಸಾಗಲಿ
ತನ್ನ ರತಿಕೃತಿ, ಭಿನ್ನ ಗತಿಸ್ಥಿತಿ, ಅಂಧ ರೀತಿಯೊಳಾಗಲಿ
ಈ ಇಹದ ರಾಗದ್ವೇಷ ಈ ಸುಖದುಃಖ ಜಲಲಿಪಿಮಾನವು
ಏನಿಲ್ಲ ಅರ್ಥವು ವ್ಯರ್ಥವಿದು ಗುರಿಯಿರದ ಜಗ-ಸೋಪಾನವು
ಅಗೊ ಪುರುಷನೋ, ಅದು ಆತ್ಮವೋ, ಆ ಜೀವವೋ ಕಾಯುತಲಿರೆ
ಆಕಾಶವ್ಯೂಹಪರಾಕ್ರಮುಕ್ಕದೊ ಕಾಲತತಿ ಸಾಯುತಲಿರೆ
ತಮದ ಸೀಮೆಯೊಳಚಲವಿರುವೆವು, ನಿಯತಿ ಮರಣವ ನೂಗಲಿ
ನೀನಾರು ಹೇಳೈ ಸಾಕ್ಷಿಯೇ, ನಾನಾರು ನಿನ್ನೊಡನಾತನು
ಈ ಲೋಕಚಕ್ರವ ಕಾಲವೇತದಿ ಕಾಂಬ ನಾಮಾತೀತನು

## ೪ ಪುನರ್ನವ

(§ *Renewal*)

ಹೃದಯವು ದಣಿವಿಲಿ ನವೆದಿತ್ತು, ಸ್ಪಂದಕೆ ಮರೆಹೋ ಕವಿದಿತ್ತು
ಎಲ್ಲವು ಇತ್ತೆಂದಾಗಿತ್ತು, ಮುಂದಕೆ ಇನ್ನಿಲ್ಲೆನಿಸಿತ್ತು

* Collected Poems and Plays, Vol. II, Page 367. § Ibid Page 370.

ಬಿಲ್ಲೀ ಕಳಚಿದೆ ಕೈಯಿಂದ, ಹೆದೆ ಹರಿದಿದೆ ಒಳಹುರಿಯಿಂದ
ಕೈಗಳ ಹಿಡಿತವೆ ಸಡಿಲಾಗಿ, ಎನಿಸಿದೆ ಆಗದು ಒಂದಾಗಿ—
ಪ್ರಾಣಲಿಂಗವೇ ಹೊರಟಿರಲು, ಹೊಸ ಮೈ ಹೊಸ ಜನ್ಮವೆ ಬರಲು
ಮುನ್ನೋಡದ ಹೊಸ ಹೊಸ ದೇಶ, ಹೊಸ ಮುಖಗಳು ಹೊಸ ಹೊಸ ವೇಷ
ಬಿಲ್ಲೀರುವದೇ ಗುರಿ ನೋಡಿ, ಹೆದೆ ಹೊಂದಿಸಿ ಬಾಣವ ಹೂಡಿ
ವ್ಯರ್ಥ ಕರ್ಮಹತ ವಿಧಿ ವಕ್ರ, ಮುಗಿವುದೆ ಪ್ರಾರಬ್ಧದ ಚಕ್ರ ?
ಕಾಲವು ಜೀವಗಳಗಲಿಸಿರೆ, ಮತ್ತೆ ಅವರು ಒಂದಾಗುವರೇ ?
ಪ್ರೇಮವು ಹತವಾಗಿರೆ ವಿಕಲ, ಮರುಮೈ ಮಾಡುವದೇ ಸಫಲ ?
ಇಂದ್ರಿಯಗಳು ಅವ ಬಂಧಿಸವು, ಎದೆಯ ತಂತಿಗಳು ಸ್ಪಂದಿಸವು
ಮರೆತಿದೆ ಪೂರಾ ಮುಮ್ಮನವು, ಆದರು ಆತ್ಮಕೆ ಘನ ನೆನೆವು.

## ೨೨ ಪ್ರತೀಕ್ಷಾ-ಸಮಾಧಿ

### ( **Trance of Waiting* )

ಬ್ರಹ್ಮಾಂಡಕೆ ಕಾವ್ ಕೊಡುತಿದ್ದೆs, ಒಬ್ಬೊಂಟಿಗ ಶಮ-ಶಿಖರದಲೂ
ಮುತ್ತಿತ್ತೋ ಗುಜುಗುಜು ನಾದಾ
ಝುಗಝುಗಿಸುವ ನಿದ್ದೆಯೊಳದ್ದಿs, ಮಾನಸವನು ಸುತ್ತಿದೆ ಎತ್ತೂ
ಮರ್ಮರಿಸುವ ನಿರ್ಭರ ಮೌನಾ.
ಚಿರತುಭ್ರಜ್ವಾಲಾ ಗೂಢಾ, ಮನನಕ್ಕೆ ಪ್ರಾಪ್ತ ಪದಾರ್ಥಾ
ಜಿನುಗುಡುತಿದೆ ಅಸ್ಫುಟ ನಾದಾ
ದೃಕ್‌ಪಥಕತಿಗೋಚರಸೀಮಾ, ಪಡಿಪನಿಸುತ್ತಿಹುದು ಅಲೀನಾ
ಜಡವಾದದ ಗಾಢ ವಿವಾದಾ
ಯಃಕಶ್ಚಿತ್ ಛಾಯಾವಿಹಗಾ, ಪಕ್ಷಾಹತ ಚಂಚಲವಾದಾ
ನಿಸ್ತೇತಿಜ ಪಲ್ವಲದಂತೆ,
ಕೆಳಕೆಳಗೋ ದೂರವಿದೂರಾ ಅಕ್ರಾಮಿತರಾಗ ವಿಭಂಗಾ
ಅಜೀವನ ಜಲಧಿ ಅಪಾರಾ
ಲಗುಬಗೆ ಬಗೆ ಚಕ್ರಾಕಾರಾ ಹಾರಾಟವ ಸಿಲಿಸಿದೆ ಪೂರಾ
ಸ್ವನಿವೃತ್ತವೋ, ಸ್ವಾಂತವಿಚಾರಾ
ನಿಸ್ತಬ್ಧಾ ನಾಡಿಸ್ಪಂದಾ, ಈ ಅಸ್ಮಿತೆ ಶಾಂತಾ ನಿಷ್ಠಾ
ಅದ್ಭುತ ವಿಶ್ರಾಂತಿ ಸ್ನಾತಾ,—
ಅವಲೋಕಿಸ ಬಂದಿದೆ ಜ್ಞಾನಾ, ವಿಜ್ಞಾನದ ಮೀರಿದ ಮಾನಾ
ಆ ಮಾನಸ ಪ್ರಮೆಗೆ ಅಮೇಯಾ

* Collected Poems and Plays, Vol. II, Page 363.

ತುಂತುಂಬಿದೆ ತೂತೂಬಿನೊಳು, ಚೈತನ್ಯದ ಘನ ಅವಕಾಶಾ
ಸತ್‌ಸಾಕ್ಷಾತ್ಕಾರ ಪ್ರಕಾಶಾ,
ಕಂಪಿಸುತಿದೆ ಸಂವಿತ್ತಾಗ್ನಿ, ಪುಲಕಿಸುತಿದೆ ತಂತಾನಾಗಿ
ಸ್ವಾಧಿಷ್ಠಾನಪ್ರಭಾವಾ,
ಭೂದೇವಿಯ ನೂತನ ಪಾತ್ರಾ ಸಮಾಧಿಯೇ ಕಾಂಚೀದಾಮಾ
ಸ್ವರ್ಗಾಂಬರ ವಸನ ಸಮಾನಾ
ಶಾಶ್ವತತೆಯ ಹೆಬ್ಬಾಗಿಲೊಳು, ದಿವ್ಯಪ್ರಭೆ ಪಕ್ಷಗಳಾದ
ನಿಯತಿಯು ಶುಭನಿದ್ರಾಮಗ್ನಾ
ಕಾಲನಿರೀಕ್ಷಾಶೂನ್ಯಾ, ಚೇತಿಸುವಾ ವಿದ್ಯುಲ್ಲೇಖಾ
ವೈವರ್ತಿಕ ಮಂತ್ರೋತ್ರೇಕಾ,
ಪಾರ್ಥಿವ ಗೃಹ ಸರ್ಜನ ಸಿದ್ಧಾ ಅವಕಾಶಾವಸ್ಥಿತ ದೇವಾ
ಯೋಗಾಲಂಬಿ ಸ್ವಭಾವಾ
ಚಿರಂತನದ ಪಾದಾರ್ಪಣಕೆ, ಆದೇಶಾಗಮನಾರ್ತಸ್ಥಾ
ಪ್ರತೀಕ್ಷಾಪೇಕ್ಷ ಬುಭೂಷಾ
ಬೀಸಿತ್ತೋವೋ ಸಂಭಾವ್ಯಾ, ಆನಂದ ರಾಗಾಲಾಪಾ
ಆನಂತ್ಯದ ಸಾಗರದಿಂದಾ.

## ೬ ಆತ್ಮದ ದೃಶ್ಯ

(*Soul's Scene)

ಮೋಡಗಳೊರಗಿವೆ ನಿರ್ವಾಸಿತವಾದಾಕಾಶದ ಅವಕಾಶದೊಳು
ಆಲಸದಲಿ ದಣಿವಾದವೊಲು
ಗತಿಸಿದ ಕಡಲಿನ ನರೆ ತೆರೆ ಅವಲೋಕಿಸಿ ಸುತ್ತಾಡುತ್ತಿವೆ ಖಿನ್ನ
ಉರುಳುರುಳುತ್ತಿವೆ ಅವಸನ್ನ
ಒರಿ ಚಿಂತೆಂಹೊಳೋ ಕರಿ ಕರೆ ಚಾಚಿದೆ ಶೋಕಾಕುಲತೆಯ ಮುಸುಕಿದೊಲು
ವಾಯುವ್ಯದ ಉಸಿರಾಟದಲು
ಅಗೊ ಅದರಾಚೆಗೆ ಅಡಕಿಲವಾಗಿವೆ ವಿಷಾದದಲಿ ಹಲ ದಿನ್ನೆಗಳು

ಪ್ರಕೃತಿಯಲ್ಲಿ ಏಕಾಕಿಯಾದ ಆ ಆತ್ಮದ ವಿಸ್ಫಾರಿತ ಭಾವ
ರಿಕ್ತವಾದ ಹುಸಿಪುಸಿ ಚಾವ
ಗರ್ಭಿತಾರ್ಥದಲಿ ಕೆತ್ತಿದಂತೆ ಇರೆ ನೆಲದ ಮುಖಕೆ ಮೊಗವಾಡವಿದೆ
ವಿಕಾರದಲಿ ಕೊರೆದಂತೆ ಇದೆ

* Collected Poems and Plays, Vol II, Page 371.

ಸ್ತಬ್ಧಮನೋದಯ ಮಾನವ ಹೃದಯ, ಆಧ್ಯಾತ್ಮಿಕ ಅನುರಾಗದಲಿ
ಇದಿರಿಸುತಿದೆ ಸಂಸ್ತ್ಯಾಗದಲಿ
ವಿಜನ ವನದ ಹತ ಪ್ರತೀಕ್ಷೆಯನ್ನೆ ಅನುಕರಿಸುವ ಆಕಾರದಲಿ

ಎತ್ತರಿಸದೆ ಅಗೊ ನಿಂತಿದೆ ಕಾದು, ಸಹಸ್ರರಶ್ಮಿಯ ವರಕಾಗಿ
ಬಂಗಾರಕು ನೀಲಿಗು ಆಗಿ
ಸಾಗರ ಗೀತದ ಮಂಥರ ಸುಂದರ ಮಂಗಲಮಯ ಧ್ರುವಪದಗಾನ
ಸುಖಸಂಚಲ ತಾನವಿತಾನ
ಗಭೀರ ತಲದಲಿ ಮಾನವನಾತ್ಮದಿ ದಿವ್ಯಪ್ರಭವಿಸ್ಫೋಟನಕೆ
ಅಂತರ್ಗತ ಉದ್ಘಾಟನಕೆ
ಸ್ವಪ್ರತಿಬಿಂಬವ ಮೂಡಿಸಿದಾಗಃ ಹಿಗ್ಗಾದೊಲು ದೇವನ ಮನಕೆ

## ೭ ಐಕ್ಯಸಾಗರ

### ( *Ocean Oneness )

ಇಗೋss ಈ ಮೌನಾ ಸುತ್ತೂಮುತ್ತೂ ಜಗದಗಲಾ ವಾಚಾತೀತಾ
ಶ್ವೇತಾss ಶುಭ್ರಾಸ್ಫೀತಾ ಖಗಮಾಲಾ ಸಾಗರಮಗ್ನಾs ದಿಗಂತೋಡ್ಡೀನಾ ಲೀನಾ
ನಿಃಶಬ್ದಾಕಾಶವ್ಯಾಪ್ತಾs ನಿರ್ನಾದಾ ಪಾರಾವಾರಾ
ನೀಲಾಂತರ್ನೀಲಾ ಅಗಾಧಾss ಅನ್ಯೋನ್ಯಾ ಸಾಕ್ಷೀಮೂಕಾ
—ಇಗೋ ಈ ಮೌನಾ.

ಗುರುಗುಮ್ಮಾs ಅನಂತಾನಂತಾ ಏಕಾತ್ಮಾ ಏಕೋರಾಮಾ
ಈ ವಿಶ್ವಾಶ್ಲಿಷ್ಟಾ ಪುರುಷಾ ಶ್ರೀ-ವಿಶ್ವಾಕಾರ ಪ್ರಾಪ್ತಾ
ದೃಷ್ಟಾs ಅದೃಷ್ಟಾs ಸರ್ವಾss ನಿಜಬೀಜಾಂಕುರಿತಾ ಭರಿತಾ
ಒಂದೇ ಇದೋ ಮಹೋದಾರಾ, ಒಂದೇ ಒಂದೇ ಬೃಹದಾಕಾರಾ, ಅಪಾರಾ
—ಅಹೋ ಈ ಮೌನಾ

ಇದು ಯಾರೋ ಏನೋ ಧ್ಯಾನಾಸಕ್ತಾ ವಿದೇಹಾ ನಾಮಾತೀತಾ
ಅಸ್ಮೀತ್ಯಾಸ್ಮಿಕತಾಲಗ್ನಾ ಏಕೈಕಾ ಅಮೃತಾ ಭೂಮಾ
ಓ ಸ್ಥಾಣೋ, ಶಾಶ್ವತಾ, ಸಮಾಧಿಪ್ರಜ್ಞಾ, ಕೇವಲಾಃಸೀಮಾ
ಆಃ ಸತತಾ ವಿತತಾ ವಿವಿಧಾ ಲೋಕೈಕೇ ಹೃದಯೇ ಮಗ್ನಾ
—ಓಹೋ ಈ ಮೌನಾ.

* Collected Poems and Plays, Vol. II, Page 362.

## ೮ ಅಗ್ನಾಯಿ

(*Bride of Fire)

ಅಗ್ನಾಯಿ ! ಇನ್ನು ಆಲಿಂಗಿಸೆನ್ನ
ಓ ಜಾತವೇದಜಾಯೆ
ಗಂಧ-ಪಕಳೆಗಳು ಎಂದೊ ಉರುಳಿದವು
ಕೊಂದೆ ಕಾಮಮಾಯೆ

ತೆಕ್ಕೆಯಲ್ಲಿ ಮುತ್ತೆನ್ನ ಜೀವನವ
ಜ್ಯೋತಿಲಲಿತೆ ನಲ್ಲೆ !
ಬಯಕೆ ಸುಟ್ಟೆ ಆ ದುಗುಡ ಬಿಟ್ಟೆ
ಹಿ-ಗ್ಗನ್ನು ತಾಳಬಲ್ಲೆ

ಮೋದಮೂರ್ತಿ ! ಪುಲಕಿಸುತ ಬಾರ
ಆ-ನಂದದೇಕ ಪ್ರತಿಮೆ
ಮೊಗದ ಬೆಡಗಿನಲಿ ನಾಟಿ ಹೀರುವೆನು
ಮುತ್ತಿನೊಂದೆ ಮಹಿಮೆ

ದಿವ್ಯಧ್ವನಿಯೆ ಹೃದಯದಲಿ ನುಡಿಸು
ಆ-ನಂದದೇಕ ತೂರ್ಯ
ಮುದ್ರೆ ಹಾಕು ತವ ತೇಜ ನೆಲಿಸು ಓ
ಪ್ರಾಣಪೂರ್ಣ ಸೂರ್ಯ

ಅನುವಾದಕರು:
**ದ. ರಾ. ಬೇಂದ್ರೆ**

* Poems Past and Present, Page 3

ಸ್ತಬ್ಧಮನೋದಯ ಮಾನವ ಹೃದಯ, ಆಧ್ಯಾತ್ಮಿಕ ಅನುರಾಗದಲಿ
ಇದಿರಿಸುತಿದೆ ಸಂಸ್ತ್ಯಾಗದಲಿ
ವಿಜನ ವನದ ಹತ ಪ್ರತೀಕ್ಷೆಯನ್ನೆ ಅನುಕರಿಸುವ ಆಕಾರದಲಿ

ಎತ್ತರಿಸದೆ ಅಗೊ ನಿಂತಿದೆ ಕಾದು, ಸಹಸ್ರರಶ್ಮಿಯ ವರಕಾಗಿ
ಬಂಗಾರಕು ನೀಲಿಗು ಆಗಿ
ಸಾಗರ ಗೀತದ ಮಂಥರ ಸುಂದರ ಮಂಗಲಮಯ ಧ್ರುವಪದಗಾನ
ಸುಖಸಂಚಲ ತಾನವಿತಾನ
ಗಭೀರ ತಲದಲಿ ಮಾನವನಾತ್ಮದಿ ದಿವ್ಯಪ್ರಭವಿಸ್ಫೋಟನಕೆ
ಅಂತರ್ಗತ ಉದ್ಘಾಟನಕೆ
ಸ್ವಪ್ರತಿಬಿಂಬವ ಮೂಡಿಸಿದಾಗಃ ಹಿಗ್ಗಾದೊಲು ದೇವನ ಮನಕೆ

## ೭ ಐಕ್ಯಸಾಗರ

### ( *Ocean Oneness )

ಇಗೋss ಈ ಮೌನಾ ಸುತ್ತೂಮುತ್ತೂ ಜಗದಗಲಾ ವಾಚಾತೀತಾ
ಶ್ವೇತಾss ಶುಭ್ರಾಸ್ಫೀತಾ ಖಗಮಾಲಾ ಸಾಗರಮಗ್ನಾs ದಿಗಂತೋಡ್ಡೀನಾ ಲೀನಾ
ನಿಃಶಬ್ದಾಕಾಶವ್ಯಾಪ್ತಾs ನಿರ್ನಾದಾ ಪಾರಾವಾರಾ
ನೀಲಾಂತರ್ನೀಲಾ ಅಗಾಧಾss ಅನ್ಯೋನ್ಯಾ ಸಾಕ್ಷೀಮೂಕಾ
—ಇಗೋ ಈ ಮೌನಾ.

ಗುರುಗುಮ್ಮಾs ಅನಂತಾನಂತಾ ಏಕಾತ್ಮಾ ಏಕೋರಾಮಾ
ಈ ವಿಶ್ವಾಶ್ಲಿಷ್ಟಾ ಪುರುಷಾ ಶ್ರೀ-ವಿಶ್ವಾಕಾರ ಪ್ರಾಪ್ತಾ
ದೃಷ್ಟಾs ಅದೃಷ್ಟಾs ಸರ್ವಾss ನಿಜಬೀಜಾಂಕುರಿತಾ ಭರಿತಾ
ಒಂದೇ ಇದೋ ಮಹೋದಾರಾ, ಒಂದೇ ಒಂದೇ ಬೃಹದಾಕಾರಾ, ಅಪಾರಾ
—ಅಹೋ ಈ ಮೌನಾ

ಇದು ಯಾರೋ ಏನೋ ಧ್ಯಾನಾಸಕ್ತಾ ವಿದೇಹಾ ನಾಮಾತೀತಾ
ಅಸ್ಮೀತ್ಯಾಸ್ತಿಕತಾಲಗ್ನಾ ಏಕೈಕಾ ಅಮೃತಾ ಭೂಮಾ
ಓ ಸ್ಥಾಣೋ, ಶಾಶ್ವತಾ, ಸಮಾಧಿಪ್ರಜ್ಞಾ, ಕೇವಲಾಃಸೀಮಾ
ಆಃ ಸತತಾ ವಿತತಾ ವಿವಿಧಾ ಲೋಕೈಕೇ ಹೃದಯೇ ಮಗ್ನಾ
—ಓಹೋ ಈ ಮೌನಾ.

* Collected Poems and Plays, Vol. II, Page 362.

# ೮ ಅಗ್ನಾಯಿ

## (*Bride of Fire)

ಅಗ್ನಾಯಿ ! ಇನ್ನು ಆಲಿಂಗಿಸೆನ್ನ
ಓ ಜಾತವೇದಜಾಯೆ
ಗಂಧ-ಪಕಳೆಗಳು ಎಂದೊ ಉರುಳಿದವು
ಕೊಂದೆ ಕಾಮಮಾಯೆ

ತೆಕ್ಕೆಯಲ್ಲಿ ಮುತ್ತೆನ್ನ ಜೀವನವ
ಜ್ಯೋತಿಲಲಿತೆ ನಲ್ಲೆ !
ಬಯಕೆ ಸುಟ್ಟೆ ಆ ದುಗುಡ ಬಿಟ್ಟೆ
ಹಿ-ಗ್ಗನ್ನು ತಾಳಬಲ್ಲೆ

ಮೋದಮೂರ್ತಿ ! ಪುಲಕಿಸುತ ಬಾರ
ಆ-ನಂದದೇಕ ಪ್ರತಿಮೆ
ಮೊಗದ ಬೆಡಗಿನಲಿ ನಾಟಿ ಹೀರುವೆನು
ಮುತ್ತಿಸೊಂದೆ ಮಹಿಮೆ

ದಿವ್ಯಧ್ವನಿಯೆ ಹೃದಯದಲಿ ನುಡಿಸು
ಆ-ಸಂದದೇಕ ತೂರ್ಯ
ಮುಪ್ರೆ ಹಾಕು ತನ ತೇಜ ಸಲಿಸು ಓ
ಪ್ರಾಣಪೂರ್ಣ ಸೂರ್ಯ

ಅನುವಾದಕರು:
**ದ. ರಾ. ಬೇಂದ್ರೆ**

* Poems Past and Present, Page 3

# ಅತಿಮಾನಸ ಸ್ವರೂಪ

[ಶ್ರೀ ಅರವಿಂದಾಶ್ರಮವನ್ನು ಸೇರುವ ಮೊದಲು ಸಾಧಕ ಶಿರೋಮಣಿ ಶ್ರೀ. ಅನಿಲಬರಣ ರಾಯರವರು 'ಯೋಗ ಸಾಧನ'ವನ್ನು ಕುರಿತು ಶ್ರೀ ಅರವಿಂದರೊಡನೆ ಪತ್ರವ್ಯವಹಾರ ನಡೆಸಿದ್ದರು. ಅದು ಶ್ರೀ. ಸಿಂಪಿ ಲಿಂಗಣ್ಣನವರಿಂದ ಕನ್ನಡಿಸಲ್ಪಟ್ಟು, 'ಯೋಗದೀಕ್ಷೆ' ಎಂಬುದಾಗಿ ಪುಸ್ತಕರೂಪದಲ್ಲಿ ಪ್ರಕಟವಾಗಿದೆ. ಅದರಲ್ಲಿಯ ಒಂದು ಅವತರಣಿಕೆ ಇದು. ಶ್ರೀ. ಅನಿಲಬರಣರವರ ಪ್ರಶ್ನೆಗೆ ಶ್ರೀ ಅರವಿಂದರ ಉತ್ತರವನ್ನು ತಿಳಿಸುವ (ಶ್ರೀ. ನಲಿನೀಕಾಂತ ಗುಪ್ತರವರು ಬರೆದ) ಪತ್ರದಿಂದ ಇದನ್ನು ಆಯ್ದುಕೊಳ್ಳಲಾಗಿದೆ.]

"....ಮನದ ಮೇಲೆ ಒಂದು ಲೋಕವದೆ; ಅಲ್ಲಿ ಸಚೇತನನಾಗಿ ಅದರ ಸತ್ತೆ, ಹಾಗೂ ಧರ್ಮಗಳಲ್ಲಿ ಸಮಸ್ತಜೀವನವನ್ನು ನೂತನ ರೂಪದಲ್ಲಿ ಸಂಘಟಿಸುವುದೇ ಶ್ರೀ ಅರವಿಂದರ ಸಾಧನೆಯಾಗಿದೆ. ಮನದ ಮೇಲಕ್ಕೆ ಯಾವ ಪ್ರತಿಷ್ಠಾನವಿದೆಯೋ ಅದಕ್ಕೆ ಶ್ರೀ ಅರವಿಂದರು ಅತಿಮಾನಸ ಇಲ್ಲವೆ ವಿಜ್ಞಾನ ಎಂದು ಹೆಸರುಕೊಟ್ಟಿದ್ದಾರೆ. ಇನ್ನು ಮನ ಹಾಗೂ ಅತಿಮನ ಇವುಗಳ ಭೇದವನ್ನು ತಿಳಿಯುವುದು ಆವಶ್ಯಕವಾಗಿದೆ. ಮೊಟ್ಟಮೊದಲು, ಮನುಷ್ಯನ ಸ್ವಭಾವವೇನು ? ಮನವು ಸತ್ಯವನ್ನು ಕಂಡುಹಿಡಿಯಲಾರದು. ಅದು ಸತ್ಯವನ್ನು ಅಲ್ಲಿ ಇಲ್ಲಿ ಹುಡುಕುತ್ತ ತಿರುಗುತ್ತದೆ; ತಡವರಿಸುತ್ತದೆ. ಅದು ಸತ್ಯದ ಯಾವ ಆಭಾಸವನ್ನು ಕಾಣುತ್ತದೆಯೋ ಅದು ಖಂಡಖಂಡವೂ ಸಂಕೀರ್ಣವೂ ಆಗಿರುತ್ತದೆ. ಇದಲ್ಲದೆ ಮನವು ಯಾವ ಖಂಡಸತ್ಯವನ್ನು ಇಲ್ಲವೆ ಸತ್ಯದ ಆಭಾಸವನ್ನು ಹಿಡಿಯುತ್ತದೆಯೋ ಅದನ್ನೇ ಪೂರ್ಣಸತ್ಯವೆಂದು ಅಂಟಿಕೊಂಡುಬಿಡುತ್ತದೆ. ಸತ್ಯದ ಎಲ್ಲ ಮಗ್ಗಲುಗಳನ್ನು ಅದು ಏಕಕಾಲಕ್ಕೆ ನೋಡಲಾರದು. ಯಾವೆಡೆಗೆ ನಡೆದಿರುವುದೋ ಅದೇ ಮಗ್ಗಲು ಅದಕ್ಕೆ ಏಕಮಾತ್ರ ಸತ್ಯವಾಗಿಬಿಡುತ್ತದೆ. ಆದರೆ ಅತಿಮಾನಸ ಇಲ್ಲವೆ ವಿಜ್ಞಾನದ ಸ್ತರದಲ್ಲಿ ಸತ್ಯದ ಸಲುವಾಗಿ ಅರಸುವುದಾಗಲಿ, ಹುಡುಕುವುದಾಗಲಿ ಇಲ್ಲ. ವಿಜ್ಞಾನವು ಸತ್ಯಪ್ರತಿಷ್ಠಿತವಾಗಿದೆ. ಸತ್ಯವು ಅದರಲ್ಲಿ ಸ್ವಯಂ ಪ್ರಕಾಶವಾಗಿದೆ. ಅತಿಮಾನಸವು ಸತ್ಯದ ಸಮಗ್ರವೂ ಅಖಂಡವೂ ಆದ ರೂಪವನ್ನು ನೋಡುತ್ತದೆ. ಮನದ ಎದುರಿಗೆ ಯಾವ ಸತ್ಯಗಳು ಪರಸ್ಪರವಿರೋಧಿಯಾಗಿರುವವೋ ಅವು ಅತಿಮಾನಸದಲ್ಲಿ ನಿಬಿಡವೂ ಅಚಲವೂ ಆದ ಸಾಮಂಜಸ್ಯವನ್ನು ಕಂಡಿರುತ್ತವೆ. ವಿವಿಧವಾದ ವಿರೋಧೀ ಸತ್ಯಗಳ ಸಮ್ಮೇಲನಕ್ಷೇತ್ರವೇ ವಿಜ್ಞಾನ ವಾಗಿದೆ.

" ಆದರೆ ಈ ಮಾನಸಾತೀತ ಕ್ಷೇತ್ರದ ಯಥಾರ್ಥ ಸ್ವಭಾವವೇನು ? ವಿಜ್ಞಾನಶಕ್ತಿಯ ಕರ್ಮಧಾರಣವು ಏನಿದೆ? ನಾವು ಅದರೊಳಗೆ ಮೇಲೇರಿ ಅವಸ್ಥಿತವಾಗುವ ವರೆಗೆ ಇವುಗಳ ಸಂಪೂರ್ಣಧಾರಣನನ್ನು ಮಾಡಲಾರೆವು. ಜಿಜ್ಞಾಸೆಮಾಡಿ ಪ್ರಶ್ನೆಮಾಡಿ ಯಾವುದಾದರೊಂದು ಮೀಮಾಂಸೆಯನ್ನು ತಲುಪುವುದು ಮನದ ಧರ್ಮವಾಗಿದೆ. ಮನದ ಈ ವೃತ್ತಿಯು ಎಲ್ಲಿಯ ವರೆಗೆ ಶಾಂತವಾಗುವುದಿಲ್ಲವೋ, ವಿಜ್ಞಾನಲೋಕವು ಎಲ್ಲಿಯ ವರೆಗೆ ಸ್ವತಃ ಸಾಧಕನೊಳಗೆ ಇಳಿಯುವುದಿಲ್ಲವೋ ಅಲ್ಲಿಯವರೆಗೆ ಅದನ್ನು ತಿಳಿಯುವುದಕ್ಕಾಗಲಿ, ಗುರುತಿಸುವುದಕ್ಕಾಗಲಿ ಉಪಾಯವಿಲ್ಲ. " ಯಮೇವೈಷ ವೃಣುತೇ ತನುಂ ಸ್ವಾಮ್ || " ಅದಕ್ಕಾಗಿ ಸಾಧಕನು ಈ ಮೇಲಿನ ಬೆಳಕಿನ ಅವತರಣದ ಸಲುವಾಗಿ ಶಾಂತಮನದಿಂದ ಪ್ರತೀಕ್ಷೆ ಮಾಡಬೇಕಾಗುವುದು. ಮನದಿಂದಾಗಲಿ ತರ್ಕಬುದ್ಧಿಯ ಸಹಾಯದಿಂದಾಗಲಿ ಸಮಸ್ಯೆಯನ್ನು ಪೂರ್ತಿಗೊಳಿಸುವ ಪ್ರಯತ್ನವನ್ನು ದೂರೀಕರಿಸಿ ನಿಶ್ಚಿಂತನಾಗಿರಬೇಕಾಗು ವುದು. ಎಲ್ಲ ಸಮಸ್ಯೆಗಳೂ ತಮ್ಮಿಂದ ತಾವೇ ಮೀಮಾಂಸಿತವಾಗಿಬಿಡುವವು. ಯಾವಾಗ? ಊರ್ಧ್ವ ಭೂಮಿಕೆಯ ಈ ಜ್ಞಾನವು ಪ್ರಸ್ಫುಟಿತವಾದಾಗ. "

# ಶ್ರೀ ಅರವಿಂದರ ಪತ್ರಗಳು

( Letters of Sri Aurobindo: Fourth Series — Section One — Integral Yoga and Partial Spiritual Paths ಎಂಬ ಭಾಗದಿಂದ. )

## ೧. ಮಾಯಾವಾದ, ನಿರ್ವಾಣ ಮತ್ತು ಸಮನ್ವಯ ಯೋಗ

( Mayavada, Nirvana and the Integral Yoga, p. 14. )

ನಾನು 'ಆರ್ಯ'ದಲ್ಲಿ ಬರೆಯುವ ಕಾಲಕ್ಕೆ ಅಧಿಮನಸ್ಸಿಗೆ (over-mind) ಗೋಚರವಾಗುವ ವಸ್ತುಸ್ಥಿತಿಯನ್ನು ಮನೋಮಯ (mental) ಪರಿಭಾಷೆಯಲ್ಲಿ ಮನಸ್ಸಿಗೆ ತಿಳಿಯುವಂತೆ ನಿರೂಪಿಸುವ ಧೋರಣೆಯನ್ನು ಅನುಸರಿಸುತ್ತಿದ್ದೆ. ಅದಕ್ಕಾಗಿ ಕೆಲವು ಸಲ ನಾನು ತರ್ಕವನ್ನು (logic) ಉಪಯೋಗಿಸ ಬೇಕಾಗುತ್ತಿತ್ತು. ಯಾಕಂದರೆ ಕೇವಲ ಬುದ್ಧಿಗೂ ಮತ್ತು ಅತೀತ ಬುದ್ಧಿಗೂ (supra-intellectual) ಇರುವ ಮಧ್ಯಂತರಕ್ಕೆ ಸೇತುವೆಯಂತೆ ಉಪಯೋಗವಾಗಬೇಕಾದ ಇಂಥ ಕೃತಿಯಲ್ಲಿ ತರ್ಕಕ್ಕೆ ಒಂದು ಸ್ಥಾನವಿದೆ; ಆದರೆ ಕೇವಲ ಮನೋಮಯ ವಿವೇಚನ ಪ್ರಚೋದಿತ ವೇದಾಂತಗಳಲ್ಲಿ ಆಕ್ರಮಿಸಿರುವಷ್ಟು ಪ್ರಮುಖ ಸ್ಥಾನ ವಲ್ಲ. ಮಾಯಾವಾದಿಯಾದರೂ ಸ್ವತಃ ತನ್ನ ದೃಷ್ಟಿಯನ್ನಾಗಲಿ, ವಾದವನ್ನಾಗಲಿ ಅಥವಾ ತನ್ನ ಅನುಭವ ವನ್ನಾಗಲಿ ಸ್ಥಾಪಿಸುವದಕ್ಕಾಗಿ ಕಠಿಣ ತರ್ಕದ ವಿಚಾರಸರಣಿಯನ್ನು ಅವಲಂಬಿಸಿ ಅದನ್ನು ಸಿದ್ಧಮಾಡಿ ತೋರಿ ಸುವ ಪ್ರಯತ್ನವನ್ನು ಮಾಡುವನು. ಆದರೆ ಇದು ಎಲ್ಲಿಯವರೆಗೆ? ಮಾಯೆಯ ಸ್ಫುಟವಾದ ಸ್ವರೂಪ ನಿರೂಪಣೆ ಬರುವವರೆಗೆ. ಆ ಪ್ರಶ್ನೆಯು ಎದ್ದಿತೆಂದರೆ, ಯಾವ ಪ್ರಕಾರ ನಿಸರ್ಗವಿಜ್ಞಾನಿಯು ಪ್ರಕೃತಿಯ ಮೂಲಸ್ವರೂಪ ಮತ್ತು ಅಸ್ತಿತ್ವ, ಮೂಲಪ್ರಕೃತಿಯ ಉತ್ಪತ್ತಿ ಮತ್ತು ಉದ್ದೇಶಗಳ ಪ್ರಶ್ನೆ ಬಂತೆಂದರೆ ಈ ವಿಶ್ವವಿಮೋಹಿನೀ ರಹಸ್ಯದ ಇಂಗಿತವನ್ನು, ಅದರ ವಿಷಯವಾಗಿದ್ದ ತನ್ನ ಕಲ್ಪನೆ ವಿಚಾರಗಳನ್ನು ಮತ್ತು ತಾನು ನಿರೀಕ್ಷಿಸಿದ ಅದರ ಕ್ರಿಯಾ ವ್ಯಾಪಾರಗಳನ್ನು ಯಥಾಸಾಂಗವಾಗಿ ಕ್ರಮಗೊಳಿಸಿ ಮಥನ ಮಾಡುವದರಲ್ಲಿಯೇ ತನ್ನ ಪೃಥಕ್ಕರಣದ ಕೊನೆ ಮುಟ್ಟಬೇಕಾಗುವದೋ, (ಅದಕ್ಕೂ ಮುಂದೆ ಪ್ರಕೃತಿಯ ರಹಸ್ಯದ ಒಗಟವನ್ನು ಬಿಡಿಸುವದು ಅವನಿಂದ ಸಾಧ್ಯವಿಲ್ಲವೋ), ಅದೇ ಪ್ರಕಾರ ಮಾಯಾವಾದಿಗಾದರೂ ಅವನ ಭ್ರಾಮಕ ಮಾಯೆಯು ಯಾಕೆ ಅಥವಾ ಹೇಗೆ ಅಸ್ತಿತ್ವದಲ್ಲಿ ಬಂತು ಎಂಬುದನ್ನು ಸ್ಪಷ್ಟವಾಗಿ ಸ್ಫುಟವಾಗಿ ಹೇಳಲಿಕ್ಕಾಗುವದಿಲ್ಲ. "ಯಾಕೆ", "ಹೇಗೆ" ಎಷ್ಟು ಕೇಳಿದರೇನು? "ಅದೆಲ್ಲ ಸರಿ. ಅದೇನೋ ಅಲ್ಲಿದೆ. ಹಾಗಿದೆ." ಎಂದಿಷ್ಟೇ ಅವನ ಹೇಳಿಕೆ.

---

* ಈ ಪತ್ರಗಳಲ್ಲಿ ಶ್ರೀ ಅರವಿಂದರು ತಮ್ಮ ಯೋಗಾನುಭವಗಳನ್ನು ವಿವರಿಸಿರುವರು "ಸಮರ್ಪಣ"ದ ೧ನೆಯ ಹಾಗೂ ೨ನೆಯ ಸಂಪುಟಗಳಲ್ಲಿ ಬಂದ ಪತ್ರಗಳಲ್ಲಿ ವಿವೇಚಿಸಲಾದ ವಿಷಯಗಳೆಂದರೆ ಅನುಕ್ರಮವಾಗಿ "ಸಾಧಕರಿಗೆ ಸಲಹೆಗಳು" ಹಾಗೂ "ಅವರ ಯೋಗದ ಗೊತ್ತುಗುರಿಗಳು".

ಹೌದು ! ನಿಜ ! ಅದೇನೋ ಅಲ್ಲಿದೆ, ಹಾಗಿದೆ. ಆದರೆ ಮೊದಲೆ ಏಳುವ ಪ್ರಶ್ನೆ ಅಂದರೆ, ಅದು ಏನಿದೆ? ಅದು (ಮಾಯಾ) ನಿಜವಾಗಿಯೂ ಒಂದು ಭ್ರಾಮಕ ಶಕ್ತಿ ಮಾತ್ರವೇ ಆಗಿದೆಯೋ ಅಥವಾ ಈ ಅಭಿಪ್ರಾಯವು ಅವನ ಪ್ರಥಮ ಪರಿಚಯದ ತಪ್ಪು ಗ್ರಹಿಕೆಯೋ ? ಮನಸ್ಸಿನ ಅಪೂರ್ಣ ತಿಳುವಳಿಕೆಯೋ ? ಅಥವಾ ಅದೂ ಸ್ವತಃ ಒಂದು ಭ್ರಮೆಯೋ ? ಎರಡನೆಯ ಪ್ರಶ್ನೆ: ಭ್ರಮಶಕ್ತಿಯು (ಮಾಯೆಯು) ಮಾತ್ರ ಪರಮಾತ್ಮ ಚೈತನ್ಯದ (Divine Consciousness) ಅಥವಾ ಪರಾಚೈತನ್ಯದ (Super-consciousness) ಒಂದೇ ಶಕ್ತಿಯೋ ಅಥವಾ ಇದೇ ಅತಿಶ್ರೇಷ್ಠವಾದದ್ದೋ ? ನಿರಪೇಕ್ಷಕವಾದ ಪರತತ್ವವು ಮಾಯೆಗೆ ಅಧೀನವಲ್ಲದ ಸ್ವತಂತ್ರವಾದ ಪರಮ ಸತ್ಯವು; ಹಾಗಿಲ್ಲದಿದ್ದರೆ ಮುಕ್ತಿಯು ಸಾಧ್ಯವಾಗುವ ಸಂಭವವೇ ಇಲ್ಲ. ಅಂದಮೇಲೆ ಕ್ರಿಯಾಶಾಲಿಯಾದ ಅಸತ್ಯದ ಶಕ್ತಿಯನ್ನು ಬಿಟ್ಟು ಕರ್ತೃತ್ವಸಾಮರ್ಥ್ಯವುಳ್ಳ ಬೇರೆ ಯಾವ ಶಕ್ತಿಯೂ ಪರಾತ್ಪರ ಮತ್ತು ಪರಮ ಸತ್ಯದಲ್ಲಿ ಇಲ್ಲವೋ ? ಅಥವಾ ಅಸತ್ಯದ ಶಕ್ತಿಯೊಟ್ಟಿಗೆಯೇ ಅದನ್ನು ಲಯ ಮಾಡುವ ಅಥವಾ ನಿರಾಕರಿಸುವ ಶಕ್ತಿಯೊಂದು ಇರಬೇಡವೆ ? ಮತ್ತು ನಿಸ್ಸಂಶಯವಾಗಿ ಇವೆರಡೂ ಜೊತೆಯಾಗಿಯೇ ಇದ್ದೂ—ಅಸತ್ಯವು ನಿರಂತರವಾಗಿ ಉಳಿಯುವದೇ ? ಇದು ಸ್ವಲ್ಪ ಚಮತ್ಕಾರವಾಗಿ ಕಾಣಿಸುತ್ತಿದೆ ಎಂದು ನಾನು ಸೂಚಿಸಿದೆನು. ಚಮತ್ಕಾರವಾಗಿರಲಿ ಬಿಡಲಿ, ಅದಿರುವದೇ ಹಾಗಿದ್ದರೆ ಅದಿರುವದು ಹಾಗೆಯೇ—ಯಾಕಂದರೆ ಕಲ್ಪನಾತೀತವಾದದ್ದನ್ನು, ನೀನು ಹೇಳಿದಂತೆ, ತರ್ಕದ ಅಧೀನ ಮಾಡಲಿಕ್ಕೆ ಬರುವದಿಲ್ಲ; ಆದರೆ ಅದು ಇರುವದು ಹೀಗೇಯೋ ಅಲ್ಲವೊ ?—ಎಂಬುದನ್ನು ಯಾರು ನಿರ್ಣಯ ಮಾಡಬೇಕು ? “ ಅಲ್ಲಿಯ ವರೆಗೆ ಅದನ್ನು ಯಾರು ಮುಟ್ಟಿರುವರೋ ಅವರು ” ಎಂದು ನೀನು ಹೇಳಬಹುದು. ಆದರೆ ಅಲ್ಲಿಯ ವರೆಗೆ ಅಂದರೆ ಎಲ್ಲಿಯ ವರೆಗೆ ? ಮತ್ತು ಅದನ್ನು ಅಂದರೆ ಯಾವುದನ್ನು ? ಸಂಪೂರ್ಣವಾದ ಪರಮೋತ್ತಮವಾದ “ ಪೂರ್ಣಂ ಪರಂ ” ತತ್ವವಲ್ಲವೆ ? ಮಾಯಾವಾದಿಯ ಅನಿರ್ದೇಶ್ಯವಾದ ಬ್ರಹ್ಮವೇ ಆ ಸಂಪೂರ್ಣ ಪೂರ್ಣತೆಯೋ ? ಅದೇ ಪರಮೋತ್ತಮವಾದ ತತ್ವವೊ ? ಆ ಪರಮೋತ್ತಮವಾದದ್ದಕ್ಕಿಂತಲೂ ಪರಾತ್ಪರೋತ್ತಮವಾದ ಇನ್ನೊಂದು ತತ್ವವು ಇಲ್ಲವೊ ? ಅಥವಾ ಇರಲಿಕ್ಕೆ ಶಕ್ಯವಿಲ್ಲವೊ ? ಇದು ತಾರ್ಕಿಕ ಪ್ರಶ್ನೆ ಅಲ್ಲ, ಆಧ್ಯಾತ್ಮಿಕ ಸತ್ಯತೆಯ ಸಂಪೂರ್ಣ ಪರಾತ್ಪರ ಪರಮಾರ್ಥಾನುಭವದ ಪ್ರಶ್ನೆ. ಈ ಪ್ರಶ್ನೆಯ ಉತ್ತರವನ್ನು ತರ್ಕದಿಂದ ಬಗೆಹರಿಸಲಿಕ್ಕಾಗುವದಿಲ್ಲ; ಆದರೆ ಸದಾ ಅಭಿವೃದ್ಧಿಯನ್ನು ಹೊಂದುತ್ತಿರುವ, ಸತತ ಉನ್ನತಿಯನ್ನು ಪಡೆಯುತ್ತಲಿರುವ, ವ್ಯಾಪ್ತಿಯನ್ನು ತಾಳುತ್ತಿರುವ ಆಧ್ಯಾತ್ಮಿಕ ಅನುಭವವನ್ನೇ, ಅನುಭವದ ಆಧಾರವನ್ನೇ ಅವಲಂಬಿಸಿದೆ. ಮತ್ತು ಇಂಥ ಅನುಭವವು ಮಾಯೆಯ ಮತ್ತು ನಿರ್ವಾಣದ ಅನುಭವಗಳನ್ನು ಒಳಗೊಂಡದ್ದಾದರೂ ಆಗಿರಬೇಕು, ಇಲ್ಲವೇ ಅವುಗಳನ್ನು ದಾಟಿಯಾದರೂ ಹೋಗಿರಬೇಕು ಎಂದು ಬೇರೆ ಒತ್ತಿ ಹೇಳುವ ಅಗತ್ಯವಿಲ್ಲ; ಯಾಕಂದರೆ ಹಾಗಿಲ್ಲದ ಪಕ್ಷದಲ್ಲಿ ಅದು ಅಪೂರ್ಣವಾಗಿಯೇ ಉಳಿಯುವದು, ಮತ್ತು ಅದರಿಂದ ಯಾವದೇ ನಿಶ್ಚಿತವಾದ ನಿರ್ಣಯವನ್ನು ಮಾಡಲಿಕ್ಕೆ ಬರುವದಿಲ್ಲ.

ಇನ್ನು ನನ್ನ ಯೋಗದ ಮೊದಲನೆಯ ಅತಿಮುಖ್ಯವಾದ ಅನುಭವವೆಂದರೆ ನನ್ನನ್ನು ನಿರ್ವಾಣಕ್ಕೆ ಮುಟ್ಟಿಸುವದೇ ಆಯಿತು. ಅದು ನನ್ನನ್ನು ಒಮ್ಮಿಂದೊಮ್ಮೆಲೇ ವಿಚಾರಭೂಮಿಕೆಯನ್ನು ಮೀರಿದ ಮತ್ತು ವಿಚಾರರಹಿತವಾದ, ಮನಸ್ಸಿನ ಮತ್ತು ಪ್ರಾಣದ ಯಾವ ಕ್ರಿಯೆ-ಸಂಪರ್ಕದಿಂದ ಕಲುಷಿತವಾಗದ, ನಿಷ್ಕಲ್ಮಷವಾದ ಸ್ಥಿತಿಯಲ್ಲಿ ಒಯ್ದು ಒಗೆದು ಬಿಟ್ಟಿತು. ಅಲ್ಲಿ ಯಾವ ಅಹಂಕಾರದ ಅಭಿಮಾನವೂ ಇಲ್ಲ; ಯಾವ ನಿಜವಾದ ಸಂಸಾರವೂ ಇಲ್ಲ—ಆದರೆ ಸ್ತಬ್ಧವಾದ ಇಂದ್ರಿಯಗಳ ಮೂಲಕ ಯಾವಾಗ ಅದು ನಿರೀಕ್ಷಣೆ ಮಾಡಿತೋ, ಆಗ ಒಳಗಿನಿಂದೇನೋ ಅವಲೋಕಿಸಹತ್ತಿತು; ಅಥವಾ ಅದು ತನ್ನ ಶಾಂತಿಯ ಕೇವಲ ಗಭೀರ ಪ್ರಶಾಂತಿಯಲ್ಲಿ ಪ್ರಪಂಚದ (ಜಗತ್ತಿನ) ಪೊಳ್ಳು ರೂಪಗಳನ್ನು, ಜಡತ್ವ ಹೊಂದಿದ, ವಸ್ತುರಹಿತವಾದ ಛಾಯೆಗಳಂತೆ ಧರಿಸಿತು. ಅಲ್ಲಿ “ ಏಕ ”ವೂ ಇದ್ದಿಲ್ಲ. “ ಅನೇಕ ”ವೂ ಕೂಡಾ ಇದ್ದಿಲ್ಲ. ಕೇವಲ “ ತತ್ ” ಮಾತ್ರ ಅಷ್ಟೇ ಇದ್ದಿತು :

ಅನಿರ್ದೇಶ್ಯವಾಗಿ, ಸಂಬಂಧರಹಿತವಾಗಿ, ಅಖಂಡವಾಗಿ, ಅವರ್ಣನೀಯವಾಗಿ, ಅಚಿಂತ್ಯವಾಗಿ, ಕೇವಲವಾಗಿದ್ದರೂ ಪರಮಸತ್ಯವಾಗಿಯೂ ಏಕಮೇವ ಸತ್ಯವಾಗಿಯೂ ಇದ್ದಿತು. ಇದು ಮನಸ್ಸಿನ ಯಾವುದೇ ಮಾನಸಿಕ ಸಿದ್ಧಿ ಅಲ್ಲ, ಅಥವಾ ಎಲ್ಲಿಯೋ ಮೇಲೆ ಮಿಂಚಿ ಗೋಚರಿಸಿದ ವಸ್ತುವಲ್ಲ—ಕೇವಲ ವಿಚಾರಪ್ರಣಿಧಾನತೆ ಅಲ್ಲ, ಭಾವ ರಹಿತ, ಅಸ್ತಿತ್ವವರ್ಜಿತ ಶೂನ್ಯ ವಿಚಾರವಲ್ಲ—ಅದು "ಸತ್" ಪ್ರತಿಷ್ಠಿತವಾದದ್ದು. ಸತ್ಯದ ಸದ್ಘನಸ್ವರೂಪ ವೆಂದರೆ ಅದೇ. ದೇಶಾಕಾಶರೂಪೀ ಭೌತಿಕ ಜಗತ್ತಿನ ಸ್ವರೂಪವಲ್ಲದಿದ್ದರೂ, ಆಭಾಸರೂಪೀ ಭೌತಿಕ ಜಗತ್ತನ್ನು ಪ್ರವೇಶಿಸಿ, ವ್ಯಾಪಿಸಿ, ಅಥವಾ ಅದನ್ನೆಲ್ಲ ತುಂಬಿ ಕೋಡಿ ಹರಿದು ಮತ್ತು ಮುಳುಗಿಸಿ ಬಿಟ್ಟು, ತನ್ನನ್ನು ಬಿಟ್ಟು ಉಳಿದ ಯಾವ ಸತ್ಯಕ್ಕೂ ಸ್ಥಾನಾವಕಾಶವನ್ನು ಬಿಡದೆ, ಉಳಿದ ಯಾವದನ್ನೂ ಸತ್ಯದ ನೈಜವನ್ನಾಗಿ ಆಗಲಿ, ಸತ್ಯದ ಘನಭಾವ ಸ್ವರೂಪವನ್ನಾಗಿ ಆಗಲಿ, ವಸ್ತುವನ್ನಾಗಿ ಆಗಲಿ ಆಗಿ ಕಾಣಲಿಕ್ಕೆ ಬಿಡದಿರುವ ಅಪೂರ್ವ ಅನುಭವ ಅದು. ಈ ಅನುಭವದಲ್ಲಿ, ಅದು ಆಗ ಬಂದ ರೀತಿಯಲ್ಲಿ, ಯಾವ ವಿಧವಾದ ಹರ್ಷೋಲ್ಲಾಸವಾಗಲಿ ಅಥವಾ ಪ್ರೇಮಾತಿಶಯದ ಆನಂದಾನುಭವವಾಗಲಿ ಇದ್ದಿತೆಂದು ಹೇಳಲಿಕ್ಕಾಗುವದಿಲ್ಲ; (ಶಬ್ದಾತೀತವಾದ ಆನಂದದ ಪ್ರೇಮಾನುಭವವು ನನಗೆ ಬಂದದ್ದು ಇದಾದ ಕೆಲವು ವರ್ಷಗಳ ತರುವಾಯ)—ಆದರೆ ಇದು ಕೊಟ್ಟ ಪ್ರಸಾದವೆಂದರೆ, ಅನಿರ್ವಚನೀಯವಾದ ಶಾಂತಿ, ಅತಿ ಗಹನ ಗಂಭೀರವಾದ ಮೌನ, ಅಂತರರಹಿತವಾದ ಮುಕ್ತಿ ಮತ್ತು ಸ್ವಾತಂತ್ರ್ಯ. ಆ ನಿರ್ವಾಣಸ್ಥಿತಿಯಲ್ಲಿ ಎಷ್ಟೋ ಹಗಲುರಾತ್ರಿಗಳನ್ನು ನಾನು ಎಡೆಬಿಡದೇ ಕಳೆದೆ. ಆಗ ಅದು ಬೇರೆ ಯಾವ ವಿಷಯವನ್ನೂ ತನ್ನಲ್ಲಿ ಪ್ರವೇಶ ಮಾಡುವದಕ್ಕಾಗಲಿ, ಅಥವಾ ತಾನು ಎಷ್ಟುಮಾತ್ರವೂ ಬದಲಾಗುವದಕ್ಕಾಗಲಿ ಕೊಡಲಿಲ್ಲ. ಮತ್ತು ಈ ಅನುಭವದ ಗರ್ಭವು, ಅದರ ನಿರಂತರ ಸ್ಮೃತಿಯು ಹಾಗೂ ಅದು ಮರಳಿ ಬರುವ ಶಕ್ತಿಯು—ಈ ಅನುಭವವು ಇನ್ನೂ ಮೇಲಣ ಅತಿ ಚೇತನದಲ್ಲಿ ಲೀನವಾಗುವವರೆಗೂ—ಸ್ಥಿರವಾಗಿ ಉಳಿದು ಬಿಟ್ಟವು. ಆದರೆ ಈ ಮಧ್ಯಕಾಲದಲ್ಲಿ ಸಾಕ್ಷಾತ್ಕಾರದ ಅನುಭವಗಳು ಒಂದರ ಮೇಲೊಂದು ಬರುತ್ತ, ಮೂಲ ಅನುಭವದೊಡನೆ ಸಮರಸೈಕ್ಯತೆಯನ್ನು ಹೊಂದಿದವು. ಅಲ್ಪಾವಧಿಯ ಪ್ರಥಮ ಸ್ಥಿತಿಯಲ್ಲಿಯೇ ಈ ಜಗತ್ತಿನ ಭ್ರಾಮಕ ಮಾಯಾಸ್ವರೂಪವು ಜಾರುತ್ತ ಹೋಗಿ, ಅದರ ಸ್ಥಾನದಲ್ಲಿ ಮತ್ತೊಂದು ರೂಪವು ಕಾಣಿಸಹತ್ತಿತು. ಈ ರೂಪದಲ್ಲಿ ಮಾಯೆಯ ಭ್ರಮವು* ಅತಿ ಹೊರಗಿನ ಸ್ತರದ (ಹೊರಮೈ : surface phenomena) ಅಲ್ಪಾಂಶವು ಮಾತ್ರ ಆಗಿದ್ದು, ಅದರ ಹಿಂದೆ ಅಗಾಧವಾದ ಅಧ್ಯಾತ್ಮ ಸತ್ಯವೂ, ಅದರ ಮೇಲೆ ಅತಿ ಶ್ರೇಷ್ಠವಾದ ಅಧ್ಯಾತ್ಮ ಸತ್ಯವೂ, ಮತ್ತು ಮೊದಲು ಕಂಡುಬಂದ ಕೇವಲ ಚಲಚ್ಚಿತ್ರಸದೃಶ ಅಥವಾ ಛಾಯೆಯಂತಿದ್ದ, ಪ್ರತಿ ಒಂದರ ಹೃದಯದ ಅಂತರಂಗದಲ್ಲಿ ಅತ್ಯುತ್ಕಟವಾದ ಅಧ್ಯಾತ್ಮ ಸತ್ಯವೂ ಆಗಿದ್ದ ಸ್ವರೂಪವನ್ನು ತಾಳಿತು. ಮತ್ತು ಇದು ಇಂದ್ರಿಯಗಳ ಪುನರ್ಬಂಧನವನ್ನು ಉಂಟು ಮಾಡಲಿಲ್ಲ; ಪರಮಾನುಭವದಲ್ಲಿ ಯಾವ ಲೋಪವಾಗಲಿ, ಚ್ಯುತಿಯಾಗಲಿ ಉಂಟಾಗಲಿಲ್ಲ. ಅದು ಸತ್ಯವನ್ನು ಉನ್ನತವಾಗಿಯೂ ವಿಶಾಲವಾಗಿಯೂ ಸತತವಾಗಿ ಬೆಳೆಸುವ ರೂಪದಲ್ಲಿ ಬಂತು; ಮತ್ತು ದೃಶ್ಯವನ್ನು ಚೈತನ್ಯವು (Spirit) ನಿರೀಕ್ಷಿಸುತ್ತಲಿತ್ತು, ಇಂದ್ರಿಯಗಳಲ್ಲ; ಮತ್ತು ಆ ಶಾಂತಿ, ಮೌನ, ಅನಂತತೆಯಲ್ಲಿಯ ಸ್ವಾತಂತ್ರ್ಯಗಳು ನಿರಂತರವಾಗಿ ಉಳಿದವು—ಕಾಲಾತೀತನಾದ ಶಾಶ್ವತನಾದ ಪರಮಾತ್ಮನಲ್ಲಿ ಈ ಜಗತ್ತು ಮತ್ತು ಇತರ ಲೋಕಗಳು ಸತತ ಸಂಭವಿಸುವ ಘಟನೆಗಳಾಗಿದ್ದವು.

ಈಗ ಮಾಯಾವಾದದ ವಿಷಯವಾಗಿ ನನ್ನಲ್ಲಿರುವ ಎಡಚು, ಅಭ್ಯಂತರ ಇದೇ. ನನ್ನ ಮುಕ್ತ ಚೈತನ್ಯದಲ್ಲಿ ನಿರ್ವಾಣವು ಸಿದ್ಧ ಸಾಕ್ಷಾತ್ಕಾರದ ಪ್ರಾರಂಭ ಮಾತ್ರ—ಪೂರ್ಣಸ್ಥಿತಿಗೆ ಮೊದಲಮೆಟ್ಟಲು ಮಾತ್ರ ಹೊರತು,

* ನಿಜವಾಗಿ ನೋಡಿದರೆ ಅದು ಚೈತನ್ಯದ ಮೇಲೆ ಅಸತ್ಯವಾದ, ಆಧಾರರಹಿತ ಆರೋಪಾತ್ಮಕವಾದ ಭ್ರಮೆ ಅಲ್ಲವೇ ಅಲ್ಲ; ಆದರೆ ಜಾಗ್ರತ ಮನಸ್ಸು ಮತ್ತು ಇಂದ್ರಿಯಗಳು ಹಚ್ಚಿದ ವ್ಯಕ್ತಜಗತ್ತಿನ ಅಪಾರ್ಥವು ಮತ್ತು ಅಸತ್ಯಕಾರಕವಾದ ದುರುಪಯೋಗವು.

ಅದೇ (ನಿರ್ವಾಣವೇ) ಏಕಮಾತ್ರ ಸಾಧ್ಯವಾದ ಸಿದ್ಧಿಯಾಗಿ ಆಗಲಿ ಅಥವಾ ಅದೇ ಸಿದ್ಧಿಯ ಕೊನೆಯ ಶಿಖರ ವಾಗಿ ಆಗಲಿ ಆಗಲಿಲ್ಲ. ಅದು (ನಿರ್ವಾಣವು)ಬಂದದ್ದಕ್ಕೆ ಸ್ವಾಗತವಿದ್ದರೂ, ಅದು ಕರೆಯಿಂದೇ, ಬೆನ್ನು ಹತ್ತದೇ ಬಂದದ್ದು. ಅದು ಬರುವ ಪೂರ್ವದಲ್ಲಿ ಅದರ ವಿಷಯವಾಗಿ ನನ್ನಲ್ಲಿ ಸ್ವಲ್ಪವಾದರೂ ಕಲ್ಪನೆಯ ಗಂಧವಿರಲಿಲ್ಲ; ಯಾವದೇ ತರಹದ ಜಜ್ಞಾಸೆ, ಅಭೀಪ್ಸೆ (aspiration) ಇದ್ದಿಲ್ಲ. ನಿಜವಾಗಿ ಹೇಳಬೇಕಾದರೆ ನನ್ನ ಹೃದಯದ ಇಚ್ಛೆಯು ಇದರ ವಿರುದ್ಧವೇ ಆಗಿದ್ದಿತು; ಆಧ್ಯಾತ್ಮಿಕ ಶಕ್ತಿಯ ಬಲದಿಂದ ಜಗತ್ತಿಗೆ ಸಹಾಯವನ್ನು ಮಾಡ ಬೇಕೆಂಬುದಾಗಿಯೂ, ನಾನದಕ್ಕಾಗಿ ಕಾರ್ಯತತ್ಪರನಾಗಿರಬೇಕೆಂಬುದಾಗಿಯೂ ನನ್ನ ಅಪೇಕ್ಷಿತ ಉದ್ದಿಶ್ಯವಿದ್ದಿತು. ಆದರೂ ಅದು (ನಿರ್ವಾಣವು) ಬಂತು—ಯಾವ ರೀತಿಯಿಂದಲೂ ನನ್ನನ್ನು ವಿಚಾರಿಸದೇ, ನನ್ನ ಆಜ್ಞೆಯನ್ನಾಗಲಿ ಅನುಮತಿಯನ್ನಾಗಲಿ ಕೇಳದೇ, ಕೊನೆಗೆ ಕೇಳಿದಂತೆ ನಟಿಸದೇ ಕೂಡ ಬಂದುಬಿಟ್ಟಿತು. ಅದು ತನ್ನಷ್ಟಕ್ಕೆ ತಾನೇ ಬಂದದ್ದು, ಮತ್ತು ಶಾಶ್ವತವಾಗಿ ಇರಲಿಕ್ಕೆ ಬಂದವರಂತೆ ಅಥವಾ ನಿರಂತರವಾಗಿ ಮೊದಲಿನಿಂದಲೂ ಇದ್ದವರಂತೆ ಗಟ್ಟಿಯಾಗಿ ನೆಲಿಸಿಬಿಟ್ಟಿತು. ಆ ಮೇಲೆ ಅದು ಸಾವಕಾಶವಾಗಿ, ತನ್ನ ಪ್ರಥಮ ಅವಸ್ಥೆಗಿಂತಲೂ ಕಡಿಮೆಯದಲ್ಲದ, ಆದರೆ ಅಧಿಕಾಧಿಕ ಊರ್ಜಿತಸ್ಥಿತಿಯ ಕಡೆಗೆ ತಿರುಗಿ ಬೆಳೆಯಹತ್ತಿತು. ಆದ್ದರಿಂದ ನಾನು ಮಾಯಾವಾದವನ್ನು ಸ್ವೀಕರಿಸುವದಾದರೂ ಹೇಗೆ, ಮೇಲಿನಿಂದಿಳಿದು ಬಂದ ಈ ನನ್ನ ಅನುಭವದ ಸತ್ಯದ ವಿರುದ್ಧ ಶಂಕರಾಚಾರ್ಯರ ತರ್ಕವನ್ನು ಹೂಡುವದಾದರೂ ಹೇಗೆ?

ಆದರೂ ಎಲ್ಲರೂ ನನ್ನ ಅನುಭವವನ್ನು ಪಡೆಯಬೇಕೆಂದಾಗಲಿ ಅಥವಾ ಅದರಿಂದ ಉದಯವಾದ ಸತ್ಯ ವನ್ನು ಅನುಸರಿಸಬೇಕೆಂದಾಗಲಿ ನನ್ನ ಹಟವಿಲ್ಲ, ಆಗ್ರಹವಿಲ್ಲ. ಮಾಯಾವಾದವನ್ನು ತಮ್ಮ ಜೀವನದ ಸತ್ಯವನ್ನಾಗಿ ಆಗಲಿ ಅಥವಾ ಮನಸ್ಸಿನ ಸತ್ಯವನ್ನಾಗಿ ಆಗಲಿ, ಅಥವಾ ವಿಶ್ವಸಮಸ್ಯೆಯನ್ನು ಬಿಡಿಸುವ ಉಪಾಯವೆಂದಾಗಿ ಆಗಲಿ, ಯಾರಿಗೆ ಬೇಕೋ ಅವರು ಅದನ್ನು ಸ್ವೀಕರಿಸಬಹುದು. ಅದಕ್ಕೆ ನನ್ನ ಆಕ್ಷೇಪ ವೇನೂ ಇಲ್ಲ. ಆದರೆ ಯಾರಾದರೂ ಅದನ್ನು ಸಕಲ ವಿಷಯಗಳನ್ನು ತಿಳಿಸುವ ಏಕಮೇವ ಸಾಧ್ಯವಾದ, ಸಮಾಧಾನಕರವಾದ ತತ್ವವೆಂದು ನನ್ನ ಗಂಟಲಿನಲ್ಲಿ ಅಥವಾ ಜಗತ್ತಿನ ಗಂಟಲಿನಲ್ಲಿ ಬಲುಮೆಯಿಂದ ತುರುಕುವ ದಕ್ಕೆ ಬಂದರೆ ಮಾತ್ರ ಅವರ ಆ ಪ್ರಯತ್ನಕ್ಕೆ ನನ್ನ ಆಕ್ಷೇಪಣೆ ಇದೆ, ಅಡ್ಡಿ ಇದೆ. ಈ ಕಾರ್ಯಕ್ಕೆ ಮಾಯಾ ವಾದದ ಹೊರತಾಗಿ ಅನೇಕ ವಾದಗಳೂ ತತ್ವಗಳೂ ಸಮರ್ಥವಾಗಿವೆ. ಅಲ್ಲದೆ ಈ ವಾದವು ಯಾವ ರೀತಿ ಯಲ್ಲೂ ಪೂರ್ಣ ಸಮಾಧಾನಕರವಾಗಿಲ್ಲ, ಯಾಕಂದರೆ ಕೊನೆಯಲ್ಲಿ ಅದು ಯಾವುದನ್ನೂ ಸಮರ್ಪಕವಾಗಿ ತಿಳಿಸುವದಿಲ್ಲ—ಬಿಡಿಸುವದಿಲ್ಲ; ಅದು ತನ್ನ ತರ್ಕದ ಹೊರತಾಗಿ ಇನ್ನೊಂದನ್ನು ಅವಲಂಬಿಸದೆ ಇದ್ದದ್ದಾದರೆ— ಅದು ಸರ್ವನಿಷೇಧಾತ್ಮಕವಾಗಿಯೇ ಉಳಿಯಬೇಕಾಗುವದು, ಎಷ್ಟು ಮಾತ್ರದಲ್ಲೂ ಸರ್ವಗ್ರಾಹಿಯಾಗಿ ಅಲ್ಲ. ಆದರೆ ಅದೇನು ಒಂದು ದೊಡ್ಡ ಪ್ರಶ್ನೆ ಅಲ್ಲ. ಒಂದು ಸಿದ್ಧಾಂತವು ಪ್ರಮಾದಯುಕ್ತವಾಗಿದ್ದರೂ, ಅಥವಾ ಏಕ ಪಕ್ಷಪಾತಿಯಾಗಿದ್ದರೂ, ಅಪೂರ್ಣವಾಗಿದ್ದರೂ ಅದರಲ್ಲಿ ವ್ಯವಹಾರಕುಶಲತೆಯೂ ಉಪಯುಕ್ತತೆಯೂ ಬಹಳ ವಾಗಿರಬಹುದು. ಇದರ ನಿದರ್ಶನವನ್ನು ವಿಜ್ಞಾನದ (Science) ಇತಿಹಾಸವು ವಿಪುಲವಾಗಿ ಎತ್ತಿ ತೋರಿಸುತ್ತದೆ. ನಿಜವಾಗಿ ನೋಡಿದರೆ, ವೇದಾಂತದ ಸಿದ್ಧಾಂತವೇ ಆಗಲಿ ವಿಜ್ಞಾನದ್ದೇ ಆಗಲಿ, ಅದರ ಪ್ರಯೋಜನ-ಉಪಯೋಗ, ಮನಸ್ಸಿಗೆ ಒಂದು ಆಧಾರ-ಆಶ್ರಯವನ್ನು ಕೊಡುವದಕ್ಕಾಗಿ; ತನ್ನ ಈಪ್ಸಿತ ವಿಷಯವನ್ನು ಸಾಧಿಸುವದಕ್ಕೆ ಕ್ರಿಯಾಮಾರ್ಗವನ್ನು ಸೂಚಿಸುವದಕ್ಕಾಗಿ; ಮತ್ತು ಕಠಿಣವಾದ ಜೀವನಪಥದಲ್ಲಿ ಧೈರ್ಯ-ವಿಶ್ವಾಸದಿಂದ ಬಗ್ಗದೇ ಕುಗ್ಗದೇ ನೆಟ್ಟಗೆ ನಡೆಯುವದಕ್ಕೆ ಅನುಕೂಲವಾದ ಕೈಗೋಲಾಗಿ ಪರಿಣಮಿಸು ವದಕ್ಕಾಗಿ. ಮಾಯಾವಾದದ ಸಕಲನಿಷೇಧಕತೆ, ಮತ್ತು ಏಕಪಕ್ಷಪಾತತೆ—ಇವುಗಳಾದರೋ ಯಾವದೇ ಏಕಪಕ್ಷಪಾತಿಯಾದ, ಸಮೂಲ ನಿಷೇಧಾತ್ಮಕವಾದ ಅಧ್ಯಾತ್ಮಸಾಧನೆಗೆ ಸಬಲವಾದ ಆಧಾರದಂಡವಾಗಿ ಅಥವಾ ಸಮರ್ಥವಾದ ಪ್ರೋತ್ಸಾಹವಾಗಿ ಪರಿಣಮಿಸುವವು. ಮಾಯಾವಾದವು, ತನ್ನಿಂದ ಮತ್ತು ಜೀವನದಿಂದ ಪಾರಾಗಿ ಪರಾಚೇತನದಲ್ಲಿ ಲಯವಾಗುವ ಮನಸ್ಸಿನ ಪ್ರಯತ್ನಕ್ಕೆ ಶೀಘ್ರವಾದ, ಸಮೀಪದ ನಡುದಾರಿಯಾಗಿ ಬೆಂಬಲವನ್ನು

ಕೊಡುವದು. ಹಾಗೆ ನೋಡಿದರೆ, ಜೀವನದ ಮತ್ತು ಮನಸ್ಸಿನ ನಿರ್ಬಂಧನೆಗಳಿಂದ ಪಾರಾಗಿ ಪರಾಚೈತನ್ಯದ ಅನಂತತೆಯಲ್ಲಿ ಲೀನವಾಗಬೇಕೆನ್ನುವದು ಮನಸ್ಸಲ್ಲ, ಮನಸ್ಸಿನಲ್ಲಿದ್ದ ಪುರುಷ. ತತ್ವತಃ ಪರಿಶೀಲಿಸಲಾಗಿ ಅದನ್ನು ಸಾಧಿಸುವ ಮಾರ್ಗವೆಂದರೆ, ಮನಸ್ಸು ತನ್ನ ಎಲ್ಲ ನೋಟಗಳನ್ನೂ ಪ್ರಾಣದ ಎಲ್ಲ ಚಟುವಟಿಕೆಗಳನ್ನೂ ನಿಷೇಧಿಸಿ, ಅವುಗಳನ್ನೆಲ್ಲ ಭ್ರಮೆಯೆಂದು ಕಾಣುವದು. ಆದರೆ ಕಾರ್ಯತಃ ನೋಡಿದರೆ, ಮನಸ್ಸು ಯಾವಾಗ ತನ್ನಿಂದ ತಾನೇ ಹಿಂತಿರುಗುವದೋ ಆಗ ಅದು ಸುಲಭವಾಗಿ (ಎಲ್ಲ) ಸಂಬಂಧರಹಿತವಾದ ಶಾಂತಿಯನ್ನು ಪ್ರವೇಶಿಸುವದು.

ಆ ಶಾಂತಿಯಲ್ಲಿ ಯಾವದಕ್ಕೂ ವಿಶೇಷ ಮಹತ್ವವಿಲ್ಲ, ವಿಶಿಷ್ಟ ಬೆಲೆ ಇಲ್ಲ. ಯಾಕಂದರೆ ಅದರ ಕೇವಲತೆಯಲ್ಲಿ (absoluteness) ಯಾವ ಮಾನಸಿಕ ಅಥವಾ ಪ್ರಾಣಿಕ ಬೆಲೆಯೂ ಮಹತ್ವವೂ ಅನಿಸುವದಿಲ್ಲ— ಮತ್ತೂ ಅಲ್ಲಿಂದ ಮನಸ್ಸು ಸತ್ವರವಾಗಿ ಪರಾಚೇತನಕ್ಕೆ, ಮನೋರಹಿತವಾದ ಅವಸ್ಥೆಗೆ, ಸುಷುಪ್ತಿಗೆ, ಸಮೀಪವಾದ ನಡುದಾರಿಯ ಕಡೆಗೆ ತಿರುಗಬಲ್ಲದು. ಈ ತಿರುಗುವಿಕೆಯು ಎಷ್ಟು ಪೂರ್ತಿಯಾಗಿದೆಯೋ ಅಷ್ಟೇ ಪೂರ್ಣವಾಗಿ ಅದಕ್ಕೆ ಒಮ್ಮೆ ಸ್ವೀಕರಿಸಿದ ಎಲ್ಲ ನಿರೀಕ್ಷಣೆಗಳು (ದೃಶ್ಯವು) ಈಗ ಅಸತ್ಯವಾಗಿ ತೋರಹತ್ತುವವು, ಭ್ರಮೆಯಾಗಿ ಮಾಯೆಯಾಗಿ ಕಾಣಹತ್ತುವವು. ಅದು ಆಗ ಐಯ್ಯೆಕ್ಯದ ಕಡೆಯ ಮಾರ್ಗದ ಮೇಲಿರುವುದು.

ಆದುದರಿಂದ ಮಾಯವಾದವು ಕೇವಲ ನಿರ್ವಾಣಕ್ಕೆ ಕೊಟ್ಟ ಪ್ರಾಧಾನ್ಯದಿಂದ ಅದರಲ್ಲಿ ಮನಸ್ಸಿನ ತತ್ವದ ದೃಷ್ಟಿಯಿಂದ ಎಷ್ಟೇ ಲೋಪಗಳಿದ್ದರೂ, ಅದು ಒಂದು ಬಹು ದೊಡ್ಡ ಆಧ್ಯಾತ್ಮಿಕ ಉದ್ದೇಶವನ್ನು ಈಡೇರಿಸುತ್ತದೆ, ಮತ್ತು ಅದನ್ನು ಸಾಧನೆಯ ಮಾರ್ಗವಾಗಿಟ್ಟುಕೊಂಡರೆ ಬಹು ಉನ್ನತವಾಗಿಯೂ ದೂರದವರೆಗೂ ಒಯ್ದು ಮುಟ್ಟಿಸಬಲ್ಲದು. ಮನಸ್ಸೇ ಕೊನೆಯ ತತ್ವವಾಗಿದ್ದರೆ ಮತ್ತು ಅದರಿಂದಾಚೆಗೆ ಶುದ್ಧ ಚೈತನ್ಯವನ್ನು ಬಿಟ್ಟು ಬೇರೆ ಯಾವ ಮಧ್ಯಂತರ ತತ್ವವೂ ಇಲ್ಲದಿದ್ದರೆ, ಎಲ್ಲ ಸಮಸ್ಯೆಗಳನ್ನು ಪರಿಹರಿಸುವದಕ್ಕೆ ಇದೊಂದೇ ಉಪಾಯವೆಂದು ಸ್ವೀಕರಿಸುವದಕ್ಕೆ ನಾನು ಅಸಂಮತಿಸುತ್ತಿದ್ದಿಲ್ಲ. ಯಾಕಂದರೆ ಮನಸ್ಸು ತನ್ನ ನಿರೀಕ್ಷಣೆಗಳಿಂದಲೂ, ಪ್ರಾಣವು ತನ್ನ ಆಶೆಗಳಿಂದಲೂ ಜೀವನಕ್ಕೆ ಈ ಜಗತ್ತಿನಲ್ಲಿ ಕೊಟ್ಟ ರೂಪವೆಂದರೆ ಅತಿ ಅಸಹ್ಯವಾದ ವಿರೂಪವೇ; ಮತ್ತು ಇದಕ್ಕಿಂತಲೂ ಒಳ್ಳೆಯ ಸದ್ರೂಪವನ್ನು ಸಾಧಿಸುವದು ಶಕ್ಯವೇ ಇಲ್ಲದಿದ್ದರೆ, ಅದರಿಂದ ಹೊರಬೀಳುವದಕ್ಕೆ ಹಾದಿಯು ಎಷ್ಟು ಸಮೀಪದ್ದೋ ಅಷ್ಟು ಒಳ್ಳೆಯದೇ ಅಲ್ಲವೇ ? ಆದರೆ ನನ್ನ ಅನುಭವಕ್ಕೆ, ಮನಸ್ಸಿನ ಆಚೆಗೆ ಯಾವದೋ ಇದೆ ಎಂದು ಅನಿಸುತ್ತಿದೆ. ಮನಸ್ಸೇ ಚೈತನ್ಯದ ಕೊನೆಯ ಪರಿಣಾಮವಲ್ಲ, ತತ್ವವಲ್ಲ ಈ ಜಗತ್ತಿನಲ್ಲಿ; ಮನಸ್ಸು ಅಜ್ಞಾನ-ಚೈತನ್ಯಯುಕ್ತವಾದದ್ದು, ಮತ್ತು ಅದರ ನಿರೀಕ್ಷಣೆಗಳು ಅಸತ್ಯಾತ್ಮಕವಾಗಲಿ, ಮಿಶ್ರವಾಗಲಿ, ಅಪೂರ್ಣವಾಗಲಿ ಇರಬಲ್ಲನಲ್ಲದೆ ಬೇರೆ ಆಗುವದು ಸಾಧ್ಯವಿಲ್ಲ. ಸತ್ಯಾತ್ಮಕವಾಗಿದ್ದಾಗ ಸಹ ಅದು ಸತ್ಯದ ಅಂಶ ಪ್ರತಿಬಿಂಬ ಮಾತ್ರ ಆಗಿರುವದೇ ಹೊರತು ಸತ್ಯದ ಪೂರ್ಣ ಸ್ವ-ಬಿಂಬವೇ (ಸ್ವದೇಹವೇ) ಅಲ್ಲ. ಆದರೆ ಸತ್ಯ-ಚೈತನ್ಯವೊಂದಿದೆ, ಕೇವಲ ಅಕ್ರಿಯವಾದದ್ದು—ಅಂತರ್ಮುಖವಾದದ್ದು ಅಲ್ಲ, ಆದರೆ ಸಕ್ರಿಯವೂ ನಿರ್ಮಾಣಶಕ್ತಿಯುಕ್ತವೂ ಆದದ್ದು. ಮತ್ತು ನಾನು ಅದರ ಪರಿಚಯವನ್ನು ಮಾಡಿಕೊಂಡಮಟ್ಟಿಗೆ ಹೇಳುವದಾದರೆ, ಎಲ್ಲ ವಸ್ತುಗಳ ವಿಷಯವಾಗಿ ಅದರ ಅಭಿಪ್ರಾಯ ಏನು, ಮತ್ತು ಅದು ಏನು ಮಾಡಬಲ್ಲದು ಎಂಬದನ್ನು ತಿಳಿದುಕೊಳ್ಳುವದು, ಅಜ್ಞಾನಜನ್ಯ ಸಂಕುಚಿತಾನುಭವದಿಂದ ಪಾರಾಗುವದಕ್ಕೆ ಸಮೀಪದ ದಾರಿಯನ್ನು ಹಿಡಿಯುವದಕ್ಕಿಂತಲೂ, ನನಗೆ ಹೆಚ್ಚು ಪ್ರಶಸ್ತವಾದದ್ದೆನಿಸುವದು.

ಆದರೂ ನಿರ್ವಾಣದ ಬಗ್ಗೆ ನಿನಗಿದ್ದ ಆಕರ್ಷಣೆಯು, ಮನಸ್ಸಿನ ಮತ್ತು ಪ್ರಾಣದ ಕೇವಲ ಅಸ್ಥಿರ ಚಪಲಭಾವವಾಗದೇ ಮನಸ್ಸಿಗೆ ನಿಜವಾದ ಮಾರ್ಗದರ್ಶಕವೂ, ಜೀವಾತ್ಮರ ಪ್ರಶ್ನೆಗಳನ್ನು ಬಿಡಿಸಲು

ಸಹಾಯಕವೂ ಇದ್ದ ಪಕ್ಷಕ್ಕೆ, ನಾನು ಆ ಬಗ್ಗೆ ಯಾವ ಆಕ್ಷೇಪಣೆಯನ್ನೂ ಎತ್ತುವದಿಲ್ಲ. ಇದು ಜೀವಾತ್ಮನು ಸಂತೋಷದಿಂದ ತನ್ನ ಮಾರ್ಗಾಭಿಮುಖವಾಗಿ ಹಾರುವ ವೃತ್ತಿಯೆಂದು ನನಗೆ ತೋರುವದಿಲ್ಲ; ಆದರೆ ಪ್ರಾಣಭಾವವು ತನ್ನ ಆಶೆಗಳ ಭಂಗದಿಂದ ಆದ ಅತಿ ನಿರಾಶತೆಯಿಂದ ತನ್ನಿಂದ ತಾನೇ ಪ್ರತಿಕ್ರಿಯಾರೂಪವಾಗಿ ಹೀಗೆ ಚಲಿಸುತ್ತಿದೆಯೆಂದು ಕಾಣುತ್ತದೆ. ಇಂಥ ಈ ವೈರಾಗ್ಯವು ಸ್ವತಃ ಒಂದು ಪ್ರಾಣದ ವೃತ್ತಿಯೇ; ಪ್ರಾಣದ ವೈರಾಗ್ಯಪ್ರವೃತ್ತಿಯು, ಪ್ರಾಣದ ಆಶಾವೃತ್ತಿಯ ಪ್ರತಿವೃತ್ತಿಯೇ, ವಿರುದ್ಧಮುಖವಾದ ವೃತ್ತಿಯೇ— ಅಲ್ಲಿ ಕಾರಣಗಳನ್ನು ತೋರಿಸುವದಕೂ, ಸಂಮತಿಯ ಧ್ವನಿ ಎಳೆಯುವದಕ್ಕೂ ಮಾತ್ರ ಮನಸ್ಸು ಇರುವದು. ಇಂಥ ವೈರಾಗ್ಯವು ಕೂಡಾ, ಏಕನಿಷ್ಠವೂ ಪೂರ್ಣ ನಿಷೇಧಾತ್ಮಕವೂ ಆಗಿದ್ದ ಪಕ್ಷಕ್ಕೆ ನಿರ್ವಾಣಕ್ಕೆ ಒಯ್ದು ಮುಟ್ಟಿಸಬಹುದು ಅಥವಾ ನಿರ್ವಾಣಪಥದರ್ಶಕವಾಗಬಹುದು. ಆದರೆ ನಿನ್ನ ವ್ಯಕ್ತಿತ್ವಕ್ಕೆ ಅನೇಕ ಅಂಗಗಳಿವೆ, ಅಥವಾ ನಿನ್ನಲ್ಲಿ ವಿವಿಧ ವ್ಯಕ್ತಿತ್ವಗಳ ಅಂಗಗಳಿವೆ; ನಿಜವಾಗಿಯೂ ಅವೆಲ್ಲವುಗಳ ವಿಷಮಕ್ರಿಯೆಯೇ, ಒಂದು ಇನ್ನೊಂದರ ಮಾರ್ಗದಲ್ಲಿ ಅಡ್ಡ ಬಂದು, ನಿನ್ನ ಸಾಧನೆಯಲ್ಲಿ ಆತಂಕವಾಗಿ ನಿಂತಿವೆ; ಮತ್ತು ಸ್ಥೂಲ ಮನಸ್ಸಿನ ಮುಖಾಂತರ ಅವು ವ್ಯಕ್ತವಾಗುವಾಗ ಹೀಗಾಗುವದು ಸಹಜ. ನಿನ್ನ ಒಂದು ಪ್ರಾಣಿಕ ಪ್ರವೃತ್ತಿಯು ಯಶಸ್ಸು (ಕೀರ್ತಿ) ಮತ್ತು ಭೋಗಗಳ ಕಡೆಗೆ ತಿರುಗಿತ್ತು; ಮತ್ತು ಅವು ಅದಕ್ಕೆ ದೊರೆತವು; ಮತ್ತು ಅದು ಅದನ್ನೇ (ಆ ಮಾರ್ಗವನ್ನೇ) ಮುಂದುವರಿಸಬೇಕೆನ್ನುತ್ತಿತ್ತು: ಆದರೆ ನಿನ್ನ ಉಳಿದ ವ್ಯಕ್ತಿತ್ವಾಂಗಗಳು ಅದನ್ನೊಂದನ್ನೇ ಅನುಸರಿಸುವಂತೆ ಮಾಡಲು ಅದು ಸಮರ್ಥವಾಗಲಿಲ್ಲ. ನಿನ್ನ ಇನ್ನೊಂದು ಪ್ರಾಣಿಕ ಊರ್ಮಿಗೆ—ಇದಕ್ಕಿಂತ ಹೆಚ್ಚಿನ ಆಳವಾದ ಭೋಗವು ಅವಶ್ಯವೆನಿಸಿತು; ಈ ಅಪೂರ್ಣ ತೃಪ್ತಿಯ ಭೋಗಗಳ ಬದಲು ಉಚ್ಚತರ ಭೋಗಗಳನ್ನು ಬೇರೆ ಕಲ್ಪನಾಲೋಕಗಳಲ್ಲಿ ಪಡೆಯಬಹುದಾಗಿಯೂ, ಅದಕ್ಕಾಗಿ ಇವುಗಳನ್ನು ಸುಲಭವಾಗಿ ಬಿಡಬಹುದೆಂದೂ ಅದು ಸೂಚಿಸಿತು. ನಿನ್ನ ಇನ್ನೊಂದು ಜೀವ-ಪ್ರಾಣಮಯ ವ್ಯಕ್ತಿತ್ವಕ್ಕೆ—ಇದೇ ನಿನ್ನಲ್ಲಿಯ 'ವೈಷ್ಣವವೃತ್ತಿ'—ಶ್ರೀಕೃಷ್ಣ ಪರಮಾತ್ಮನ ಭಕ್ತಿ ಮತ್ತು ಆನಂದಗಳು ಆಗತ್ಯವೆನಿಸಿದವು. ಮತ್ತೊಂದು ವ್ಯಕ್ತಿತ್ವಕ್ಕೆ ಕಾವ್ಯ ಕಲೆಗಳ ಎಳೆತವಿದೆ; ಕಾವ್ಯ ಮತ್ತು ಸಂಗೀತಗಳ ಮುಖಾಂತರ ಸೌಂದರ್ಯೋಪಾಸನೆ ನಡೆಸಬೇಕೆನ್ನುವದು. ಮತ್ತೊಂದು ಮನಃಪ್ರಾಣಮಯ ವ್ಯಕ್ತಿತ್ವ; ಯಾವಾಗ ಪ್ರಾಣವು ಸಾಧನೆಯಲ್ಲಿ ಅಡ್ಡಾಗಿ ನಿಂತಿರುವದನ್ನು ನೋಡಿತೋ, ಆಗ ಕಠಿಣವಾದ ತಪಸ್ಸನ್ನಾಚರಿಸ ಬೇಕೆಂದು ಹಟ ಹಿಡಿದದ್ದು ಹಾಗೂ ವೈರಾಗ್ಯ ಮತ್ತು ನಿರ್ವಾಣವನ್ನು ಪುರಸ್ಕರಿಸಿದ್ದು ನಿಸ್ಸಂಶಯವಾಗಿ ಅದೇ. ಮತ್ತೊಂದು ಸ್ಥೂಲ-(ಜಡ)-ಮಾನಸ ವ್ಯಕ್ತಿತ್ವ; ಇದೇ ರಸೆಲ್ಲನ ಅಭಿಮಾನಿ, ಬಹಿರ್ಮುಖ ವೃತ್ತಿಯುಳ್ಳದ್ದು, ಸಂಶಯಗಳನ್ನು ಎತ್ತುವ ಸ್ವಭಾವವುಳ್ಳದ್ದು. ಇನ್ನೊಂದು ಮನೋಭಾವಮಯ ವ್ಯಕ್ತಿತ್ವ—ಇದರ ಎಲ್ಲ ಭಾವ-ವಿಚಾರಗಳು ಪರಮಾತ್ಮ, ಯೋಗ, ಗುರುವಾದ, ಇವುಗಳಲ್ಲಿ ವಿಶ್ವಾಸವನ್ನು ಇಡುವ ವೃತ್ತಿಯುಳ್ಳದ್ದು; ಮತ್ತೂ ಒಂದು ಜೀವಾತ್ಮ ವ್ಯಕ್ತಿತ್ವವಿದೆ—ಅದೇ ನಿನ್ನನ್ನು ಸಾಧನೆಯಲ್ಲಿ ನೂಕಿದ್ದು, ಮತ್ತು ತನ್ನ ಅಭಿವ್ಯಕ್ತಿಯ ಉದಯದ ಕಾಲವನ್ನು ನಿರೀಕ್ಷಿಸುತ್ತಲಿದೆ.

ಈ ಎಲ್ಲ ವ್ಯಕ್ತಿತ್ವಗಳನ್ನು ನೀನು ಏನು ಮಾಡುವವ, ಯಾವ ಗೊತ್ತಿಗೆ ಹಚ್ಚುವವ? ನಿನಗೆ ನಿರ್ವಾಣವೇ ಬೇಕೆಂದರೆ, ಉಳಿದ ಎಲ್ಲವನ್ನೂ ನೀನು ಹೊರಗಾದರೂ ತಳ್ಳಬೇಕು ಇಲ್ಲವಾದರೆ ಪ್ರಜ್ಞೆ ತಪ್ಪಿ ನಿಶ್ಚೇತನವಾಗಿ ಬೀಳುವಂತೆ ಬಗ್ಗುಬಡಿಯಬೇಕು. ಎಲ್ಲ ಶ್ರೇಷ್ಠ ಅನುಭವಶಾಲಿಗಳೂ ಕೊಡುವ ಎಚ್ಚರಿಕೆ ಯೆಂದರೆ ನಿಷೇಧಪ್ರಧಾನವಾದ ನಿರ್ವಾಣವನ್ನು ಸಾಧಿಸುವದು ಅತಿ ಕಷ್ಟಸಾಧ್ಯವಾದ, ಗಹನ ವಿಷಯವೆಂದೇ. ('ಕಷ್ಟಂ ದೇಹವದ್ಭಿಃ' ಎಂದು ಗೀತೆಯ ಅಭಿಪ್ರಾಯ). ಅವುಗಳನ್ನು ಬಗ್ಗುಬಡಿಯುವ ನಿನ್ನ ಪ್ರಯತ್ನಗಳೂ ಅಷ್ಟೊಂದು ಉತ್ತೇಜನ-ಪ್ರೋತ್ಸಾಹನಕಾರಕವಾಗಲಿಲ್ಲ—ನಿನ್ನ ಹೇಳಿಕೆಯ ಮೇರೆಗೆ, ಅದು (ಇಂಥ ಪ್ರಯತ್ನವು) ನಿನ್ನನ್ನು ಹಿಂಡಿ ಹಿಪ್ಪೆ ಮಾಡಿ ಬಿಸಾಡಿದ ಕಿತ್ತಳೆಹಣ್ಣಿನಂತೆ ಮಾಡಿ, ರುಕ್ಷ ಮತ್ತು ನಿರಾಶಾಪ್ರಕ್ಷುಬ್ಧ ಅವಸ್ಥೆ ಯಲ್ಲಿ ಮುಳುಗಿಸಿ, ಒಂದು ಹನಿ ರಸವೂ ಎಲ್ಲಿಯೂ ಉಳಿಯದಂತೆ ಮಾಡಿತು ನೀನು ಬಯಸಿದ ನಾಡಿಗೆ

ಮರುಭೂಮಿಯೇ ಮಾರ್ಗವಾಗಿದ್ದ ಪಕ್ಷಕ್ಕೆ ಅದರದೇನೂ ಅಷ್ಟು ಮಹತ್ವವಿಲ್ಲ: ಆದರೆ—ಅದು ಹಾಗೆ ಆಗದಿದ್ದ ಪಕ್ಷಕ್ಕೆ—ಮತ್ತೊಂದು ಮಾರ್ಗವಿದೆ,—ಅದನ್ನು ನಾವು "ಸಮನ್ವಯ" (Integration) ವೆಂದು, 'ಪೂರ್ಣ ಸಮರಸತೆ'ಯೆಂದು ಕರೆಯುತ್ತೇವೆ. ಅದನ್ನು ಹೊರಗಿನಿಂದ (ಬಾಹ್ಯಕ್ರಿಯಾವ್ಯಾಪಾರಗಳಿಂದ) ಸಾಧಿಸುವದಕ್ಕೆ ಶಕ್ಯವಿಲ್ಲ; ಅದನ್ನು ಮನಸ್ಸಿಗಾಗಲಿ, ಪ್ರಾಣಕ್ಕಾಗಲಿ ಸಾಧಿಸಲಿಕ್ಕಾಗುವದಿಲ್ಲ; ಅವು ಆ ಕಾರ್ಯವನ್ನು ಅವ್ಯವಸ್ಥಿತವಾಗಿ ಮಾಡುವದು ಖಂಡಿತ. ಅದನ್ನು ಒಳಗಿನಿಂದಲೇ ಸಾಧಿಸುವದು ಶಕ್ಯ; ಐಕ್ಯಕಾರಕ ಜೀವಾತ್ಮನಿಂದ, ಎಲ್ಲ ವ್ಯಾಸಗಳಿಗೆ ತಾನೇ ಕೇಂದ್ರವಾದ ಆತ್ಮನಿಂದ ಸಾಧ್ಯ. ಇವೆಲ್ಲವುಗಳಲ್ಲಿಯೂ ಒಂದು ಸತ್ಯವಿದೆ, ಮತ್ತದು ಇತರ ನಿಜವಾದ ಸತ್ಯಗಳೊಡನೆ ಸಮರಸವಾಗಬಲ್ಲದು. ಯಾಕಂದರೆ ನಿರ್ವಾಣದಲ್ಲಿಯೂ ಒಂದು ಸತ್ಯವಿದೆ—ನಿರ್ವಾಣವೆಂದರೇನು?—ಆತ್ಮವು (Spirit) ಶಾಂತಿಯಿಂದ, ಸ್ವತಂತ್ರವಾಗಿ ತನ್ನಲ್ಲಿ ತಾನೇ ವಾಸಿಸುವದೇ ನಿರ್ವಾಣ—ಜಗತ್ತಿರಲಿ, ಬಿಡಲಿ; ಲೋಕ-ಪ್ರಪಂಚ-ಕ್ರಮ-ವ್ಯವಹಾರ ಇರಲಿ, ಇರದಿರಲಿ.... ಭಕ್ತಿಯಲ್ಲಿಯೂ, ಪರಮಾತ್ಮನ ಆಕರ್ಷಣೆಯಲ್ಲಿಯೂ ಒಂದು ಸತ್ಯವಿದೆ--ದಿವ್ಯಪ್ರೇಮದ ಮತ್ತು ನಿಜವಾದ ಆನಂದದ ಸತ್ಯವಿದೆ ತಪಸ್ಸಿನ ಹಟದಲ್ಲಿಯೂ ಒಂದು ಸತ್ಯವಿದೆ--ಅದು ತನ್ನ ಅಂಗಾಂಗಗಳ ಮೇಲೆ ಆತ್ಮನಿಗಿರುವ ನಿಗ್ರಹ-ನಿರೋಧದ ಸತ್ಯವು. ಕವಿ-ಸಂಗೀತಕಾರರು ಒಂದು ಸತ್ಯವನ್ನು ಎತ್ತಿಹಿಡಿಯುವರು—ಅದು ಕಲಾಸೌಂದರ್ಯದ ಮೂಲಕ ಆತ್ಮನ ಜೀವಜೀವಾಳವನ್ನು ಅಭಿವ್ಯಕ್ತ ಮಾಡುವ ಸತ್ಯ. ಕೇವಲ ಮಾನಸಿಕ ಪ್ರತಿಪಾದನೆಯನ್ನು ಮಾಡುವವನ ಹಿಂದೆಯೂ ಒಂದು ಸತ್ಯವಿದೆ—ಮಾನಸಿಕ ಸಂಶಯವಾದನನ್ನು ಹೂಡುವವನ ಹಿಂದೆಯೂ ಒಂದು ಸತ್ಯವಿದೆ—ಇವನು ರಸೆಲ್‌ನ ವರ್ಗಕ್ಕೆ ಸೇರಿದವನು, ಆದರೂ ಅವನಿಗಿಂತ ಕಡಿಮೆ ದರ್ಜೆಯವನು,—ಅಸತ್ಯರೂಪಗಳನ್ನು ನಿರಾಕರಿಸುವ ಸತ್ಯವೇ ಅವನಲ್ಲಿಯ ಸತ್ಯ. ಅಧಃಪ್ರಾಣದ, ಊರ್ಧ್ವಪ್ರಾಣದ (lower vital, higher vital) ಎರಡೂ ವ್ಯಕ್ತಿತ್ವಗಳ ಹಿಂದೆಯೂ ಒಂದು ಸತ್ಯವಿದೆ- ಒಳಗಿನ ಮತ್ತು ಹೊರಗಿನ (ಬಾಹ್ಯಾಭ್ಯಂತರ) ಪ್ರಪಂಚಗಳನ್ನು ಸ್ವವಶದಲ್ಲಿ, ಅಹಂಕಾರದ ವಶದಲ್ಲಿ ಅಲ್ಲ, ಸ್ವಾತ್ಮವಶದಲ್ಲಿ ಇಟ್ಟುಕೊಳ್ಳಬೇಕೆನ್ನುವ ಸತ್ಯ. ಅಂಥ (ಅವೆಲ್ಲವುಗಳ) ಸಮರಸತೆಯನ್ನು ಸಾಧಿಸುವ ಸಮನ್ವಯಧ್ಯೇಯವನ್ನಿಟ್ಟುಕೊಂಡದ್ದೇ ನಮ್ಮ ಯೋಗ;—ಆದರೆ ಹೊರಗಿನ ವ್ಯವಸ್ಥೆಯಿಂದ (ಬಾಹ್ಯ ಉಪಾಯಗಳಿಂದ) ಅದು ಸಾಧ್ಯವಲ್ಲ; ಒಳಗೆ ಪ್ರವೇಶಿಸಿ, ಹೃತ್ಪುರುಷನ ಅನುಭವಕೇಂದ್ರದಿಂದ (Psychic Being) ಮತ್ತು ಅಧ್ಯಾತ್ಮ ಕೇಂದ್ರದಿಂದ, ಜಾಗೃತವಾಗಿ ನೋಡಬೇಕು; ದೃಢಸಂಕಲ್ಪ ಮಾಡಬೇಕು; ಕಾರ್ಯತತ್ಪರರಾಗಬೇಕು; ಅಂದರೇ ಅದು ಸಾಧ್ಯ. ಯಾಕಂದರೆ ಆತ್ಮನ ಅತ್ಯುಚ್ಚ ಅಸ್ತಿತ್ವದ ಸತ್ಯವೂ ಹಾಗೂ ಸಮರಸತೆಯ ರಹಸ್ಯವೂ ಅಲ್ಲಿಯೇ ಇದೆ.

## ೨ ಐಹಿಕತೆ, ಪಾರಲೌಕಿಕತೆ ಮತ್ತು ಸಮನ್ವಯ ಯೋಗ

(This-Worldliness, Other-Worldliness and the Integral Yoga, p. 28.)

ಭಾರತದ ಜೀವಜೀವಾಳದ ವಿಷಯವಾಗಿ ತೆಗೆದ ನಿಮ್ಮ ಉದ್ಗಾರದ ಸಂಬಂಧದಲ್ಲಿ, ಮತ್ತು "ಪಾರಲೌಕಿಕತೆಯನ್ನು ಬಿಟ್ಟು ಈ ಐಹಿಕತೆಯನ್ನು ಒತ್ತಿ ಹೇಳಿ ಅದಕ್ಕೆ ಅಷ್ಟು ಮಹತ್ವವನ್ನು ಕೊಡುವದು" ಎಂಬ "ಕ್ಷ"ರವರ ಉದ್ಗಾರಗಳ ವಿಷಯವಾಗಿ ಒಂದು ಮಾತನ್ನು ನಾನು ಹೇಳಲೇಬೇಕೆಂದು ನನಗೆ ಅನಿಸುತ್ತದೆ. ಯಾವ ಸಂದರ್ಭದಲ್ಲಿ, ಯಾತರ ಸಂಬಂಧವಾಗಿ ಈ ಶಬ್ದಗಳನ್ನು ಅವರು ಆಡಿದರೆಂಬುದು ನನಗೆ ಪೂರ್ಣ ತಿಳಿಯಲಿಕ್ಕಾಗದ ವಿಷಯ; ಮತ್ತು "ಐಹಿಕತೆ"ಯೆಂದರೆ ಅವರು ಮಾಡುವ ಅರ್ಥವೇನು, ಅದೂ ನನಗೆ ಗೊತ್ತಿಲ್ಲ. ಆದರೆ ಈ ವಿಷಯದಲ್ಲಿ ನನ್ನ ನಿಲುಮೆಯನ್ನು ಹೇಳುವದು ಅವಶ್ಯವೆನಿಸುತ್ತದೆ.

ನನ್ನ ಸ್ವಂತ ಜೀವನವೂ ಮತ್ತು ನನ್ನ ಯೋಗವೂ ನಾನು ಹಿಂದುಸ್ಥಾನಕ್ಕೆ ಬಂದ ಕ್ಷಣದಿಂದ ಯಾವಾಗಲೂ ಐಹಿಕವಾಗಿಯೂ ಮತ್ತು ಪಾರಲೌಕಿಕವಾಗಿಯೂ ಕೂಡಿಯೇ ಇವೆ; ಒಂದನ್ನು ನಿಷೇಧಿಸಿ

ಇನ್ನೊಂದನ್ನೇ ಸ್ವೀಕರಿಸುವ ವೃತ್ತಿಯಿಲ್ಲದೆ, ಅವು ಒಂದನ್ನೊಂದು ಹೊಂದಿಕೊಂಡಿವೆ. ಮಾನವನ ಎಲ್ಲ ಅಭಿರುಚಿ-ಆಕಾಂಕ್ಷೆಗಳು, ನನಗೆ ತಿಳಿದ ಮಟ್ಟಿಗೆ, ಐಹಿಕವೇ ಆಗಿವೆ, ಮತ್ತು ಅವುಗಳಲ್ಲಿ ಅಧಿಕಸಂಖ್ಯೆ ನನ್ನ ಮನೋಭೂಮಿಕೆಯಲ್ಲಿ ಕಾಲಿಟ್ಟಿವೆ, ಮತ್ತು ಕೆಲವು—ಉದಾಹರಣೆಗಾಗಿ ರಾಜಕಾರಣ—ನನ್ನ ಜೀವನದಲ್ಲಿ ಪ್ರವೇಶಿಸಿವೆ; ಆದರೆ ಇವುಗಳ ಜತೆಜತೆಗೇ, ನಾನು ಹಿಂದುಸ್ಥಾನದ ಭೂಮಿಯ ಮೇಲೆ—ಬೊಂಬಾಯಿಯ ಅಪೋಲೋ ಬಂದರದ ಮೇಲೆ—ಕಾಲಿಟ್ಟಂದಿನಿಂದ ನನಗೆ ಆಧ್ಯಾತ್ಮಿಕ ಅನುಭವಗಳು ಬರುವದಕ್ಕೆ ಪ್ರಾರಂಭವಾಯಿತು. ಆದರೆ ಇವು ಈ ಲೋಕಜೀವನದ ಸಂಬಂಧ ತಪ್ಪಿದುವು ಆಗಿರಲಿಲ್ಲ; ಇಷ್ಟೇ ಅಲ್ಲ, ಒಳಗಿನಿಂದ ಈ ಜೀವನದ ಮೇಲೆ ಸೂಕ್ಷ್ಮ ಮತ್ತು ಅನಂತ ಪರಿಣಾಮ ಮತ್ತು ವ್ಯಾಪ್ತಿಯುಳ್ಳವಾಗಿದ್ದುವು ಭೌತಿಕಾಕಾಶದಲ್ಲಿ ಅನಂತ ಚೈತನ್ಯದ ವ್ಯಾಪ್ತಿ ಹೇಗಿದೆಯೋ ಹಾಗೆ ಅಥವಾ ಸರ್ವಭೂತಾಂತರಾತ್ಮ ಚೈತನ್ಯವು ಸ್ಥೂಲವಸ್ತುಗಳಲ್ಲಿ ಮತ್ತು ದೇಹಗಳಲ್ಲಿ ಹೇಗೆ ವ್ಯಾಪ್ತವಾಗಿದೆಯೋ ಹಾಗೆ. ಅದೇ ಕಾಲಕ್ಕೆ ನಾನು ಅತಿಭೌತಿಕ ಲೋಕಗಳಲ್ಲಿ, ಮತ್ತು ಭೂಮಿಕೆಗಳಲ್ಲಿ ಪ್ರವೇಶಿಸತೊಡಗಿದೆನು, ಮತ್ತು ಅವುಗಳ ವರ್ಚಸ್ಸೂ ಪರಿಣಾಮವೂ ಭೌತಿಕದ ಮೇಲೆ ಆಗುವದನ್ನು ನೋಡತೊಡಗಿದೆನು. ಆದುದರಿಂದ ಜೀವನದ ಎರಡು ಧ್ರುವಗಳೆಂದು ನಾನು ಕರೆದಿರುವ ಇವುಗಳಲ್ಲಿಯೂ ಮತ್ತವುಗಳ ಮಧ್ಯ ಇರುವ ಎಲ್ಲವುಗಳಲ್ಲಿಯೂ ಯಾವ ತೀಕ್ಷ್ಣ ವಿಯೋಗವನ್ನಾಗಲಿ, ದುರ್ನಿವಾರ್ಯ ವಿರೋಧವನ್ನಾಗಲಿ ಕಾಣುವದು ನನ್ನಿಂದಾಗಲಿಲ್ಲ. ನನಗೆ ಎಲ್ಲವೂ ಬ್ರಹ್ಮವೇ ಆಗಿದೆ ಮತ್ತು ನಾನು ಪರಮಾತ್ಮನನ್ನು ಎಲ್ಲ ಕಡೆಯಲ್ಲಿಯೂ ನೋಡುತ್ತೇನೆ. ಐಹಿಕತೆಯನ್ನು ಬಿಸಾಟಬಿಟ್ಟು ಪಾರಲೌಕಿಕತೆಯನ್ನು ಮಾತ್ರ ಆರಿಸಿಕೊಳ್ಳುವ ಅಧಿಕಾರವು ಪ್ರತಿ ಒಬ್ಬನಿಗೂ ಇದ್ದೇ ಇದೆ. ಮತ್ತು ಹೀಗೆ ಆರಿಸಿಕೊಳ್ಳುವದರಿಂದ ಅವನಿಗೆ ಶಾಂತಿಯು ಲಭಿಸಿದರೆ ಅವನು ಅತಿ ಧನ್ಯನಾದನೆಂದೇ ಹೇಳಬೇಕು. ಆದರೆ ನನ್ನ ಅನುಭವದ ಮಟ್ಟಿಗೆ ಶಾಂತಿಯ ಪ್ರಾಪ್ತಿಯ ಸಲುವಾಗಿ ಹೀಗೆ ಮಾಡುವದು ಅವಶ್ಯವೆಂದು ನನಗೆ ಕಂಡುಬಂದಿಲ್ಲ. ನನ್ನ ಯೋಗದಲ್ಲಿ ಸಹ ಎರಡಕ್ಕೂ—ಭೌತಿಕತೆ ಮತ್ತು ಪಾರಮಾರ್ಥಿಕತೆಗಳಿಗೆ—ಯೋಗ್ಯ ಸ್ಥಾನವನ್ನು ಕೊಡುವದೇ ನನ್ನ ಪ್ರವೃತ್ತಿಯಾಯಿತು; ಮತ್ತು ಪರಮಾತ್ಮಚೈತನ್ಯವನ್ನು ಜನರ ಹೃದಯದಲ್ಲಿಯೂ ಪೃಥ್ವಿಯ ಜೀವನದಲ್ಲಿಯೂ ಸ್ಥಾಪಿಸುವ ಪ್ರಯತ್ನವನ್ನು ಕೈಕೊಳ್ಳಲಣಿಯಾದೆನು. ಕೇವಲ ವ್ಯಕ್ತಿಗತವಾದ ಮುಕ್ತಿಗೋಸ್ಕರವಾಗಿ ಅಲ್ಲ, ಆದರೆ ಪೃಥ್ವಿಯಲ್ಲಿಯೇ ಪಾರಮಾರ್ಥಿಕ ಜೀವನವು ನೆಲಸುವಂತೆ ಮಾಡುವ ಉದ್ದೇಶದಿಂದ ಈ ಧ್ಯೇಯದ ಆಧ್ಯಾತ್ಮಿಕತೆಯು ಉಳಿದ ಯಾವ ಆಧ್ಯಾತ್ಮಿಕ ಧ್ಯೇಯಗಳಿಗಿಂತಲೂ ಎಷ್ಟು ಮಾತ್ರವೂ ಕಡಿಮೆ ಎಂದು ನನಗೆ ತೋರುವದಿಲ್ಲ. ಮತ್ತು ಜೀವನದಲ್ಲಿ ಲೌಕಿಕ ಕ್ರಿಯೆಗಳಿಗೂ ಭೌತಿಕ ವಸ್ತುಗಳಿಗೂ ಒಂದು ಸ್ಥಾನ ಕೊಡುವದರಿಂದ ಅದರ ಆಧ್ಯಾತ್ಮಿಕತೆಗೆ ಕಲಂಕ ತಗಲುವದೆಂದಾಗಲಿ ಅದರ ಭಾರತೀಯತೆಯು ಚ್ಯುತಿಗೊಳ್ಳುವದೆಂದಾಗಲಿ ನಾನು ನಂಬುವದಿಲ್ಲ. ನನ್ನ ಮಟ್ಟಿಗೆ ನನ್ನ ಸತ್ಯ—ಜಗತ್ತಿನ ಸ್ವರೂಪ—ವಸ್ತುಮಾತ್ರಗಳು—ಪರಮೇಶ್ವರ ಇವುಗಳ ಬಗ್ಗೆ ನನ್ನ ದೃಷ್ಟಿ ಮತ್ತು ಅನುಭವ ಯಾವಾಗಲೂ ಈರೀತಿಯದಾಗಿದೆ. ಈ ವಿಷಯಗಳ ಬಗ್ಗೆ ನನ್ನದು ಸಾಧ್ಯವಿದ್ದಷ್ಟು ಸಮಗ್ರ ಸತ್ಯದರ್ಶನವೆನಿಸಿತು; ಅಂತೆಯೆ ಅದರ ಸಾಧನವನ್ನು ನಾನು ಪೂರ್ಣಯೋಗವೆಂದು ಕರೆದಿರುವೆನು. ಪ್ರತಿಯೊಬ್ಬನಿಗೂ ಇಂಥ ಸಮಗ್ರದರ್ಶನದಲ್ಲಿ ನಂಬಿಕೆಯನ್ನು ಇಡದಿರುವದಕ್ಕೂ, ಅವನ್ನು ತ್ಯಜಿಸುವದಕ್ಕೂ ಅಥವಾ ಅಧ್ಯಾತ್ಮಕ್ಕಾಗಿ ಕೇವಲ ಪಾರಲೌಕಿಕತೆಯ ಆವಶ್ಯಕತೆಯಲ್ಲಿ ವಿಶ್ವಾಸವನ್ನಿಡುವದಕ್ಕೂ ಸ್ವತಂತ್ರತೆಯು ಇದ್ದೇ ಇದೆ; ಆದರೆ ಹಾಗೆ ಮಾಡುವದರಿಂದ ನನ್ನ ಯೋಗವನ್ನು ಕೈಕೊಳ್ಳುವದು ಸಾಧ್ಯವಿಲ್ಲ.

ನನ್ನ ಯೋಗದಲ್ಲಿ ಇತರ ಲೋಕಗಳ ಅನುಭವವು ನಿಜವಾಗಿಯೂ ಅಂತರ್ಗತವಾಗುವದು ಸಾಧ್ಯವಿದೆ. ಪರಮ ಚೈತನ್ಯದ ಅವಸ್ಥಾಭೂಮಿಕೆ ಮತ್ತು ಮಧ್ಯಂತರವಾಗಿರತಕ್ಕ ಭೂಮಿಕೆಗಳು ಮತ್ತು ಅವುಗಳಿಂದ ನಮ್ಮ ಜೀವನ ಮತ್ತು ಭೌತಿಕ ಜಗತ್ತಿನ ಮೇಲಾಗಬಹುದಾದ ಪರಿಣಾಮ—ಇವೆಲ್ಲಕ್ಕೂ ನನ್ನ ಯೋಗದಲ್ಲಿ ಸ್ಥಾನವಿದೆ; ಆದರೆ ಪುರುಷೋತ್ತಮನ ಅಥವಾ ಈಶ್ವರನ ಒಂದೇ ರೂಪವನ್ನೇ—ಉದಾ: ಶಿವ, ಕೃಷ್ಣ—

ಸಾಕ್ಷಾತ್ಕರಿಸಿಕೊಳ್ಳುವದಾಗಿ, ಅಥವಾ ಆತನನ್ನು ಜಗದೀಶ್ವರನೆಂದೂ ನಮ್ಮ ಮತ್ತು ನಮ್ಮ ಕರ್ಮದ ಸ್ವಾಮಿಯೆಂದೂ ಅಥವಾ ವಿಶ್ವಗತ ಸಚ್ಚಿದಾನಂದನೆಂದೂ ಸಾಕ್ಷಾತ್ಕರಿಸಿಕೊಳ್ಳುವದಾಗಿ ಹಟಹಿಡಿಯುವದು ಸಾಧ್ಯವಿದೆ; ಮತ್ತು ಈ ಬಗೆಯ ಯೋಗದ ಮುಖ್ಯ ಫಲವನ್ನು ಪಡೆದು ಆ ಮೇಲೆ ಸಮನ್ವಯಯೋಗದ ಫಲವನ್ನು ಪ್ರಾಪ್ತ ಮಾಡಿಕೊಳ್ಳಲಿಕ್ಕೆ ಉದ್ಯುಕ್ತರಾಗಬಹುದು; ಭಾಗವತ ಜೀವನ, ಹಾಗೂ ಭೌತಿಕ ಜೀವನದ ಮೇಲೆ ಪರಮೇಶ್ವರೀ ವಿಜಯ, ಇವುಗಳನ್ನು ಒಪ್ಪಿದರೆ ಮಾತ್ರ ಇದು ಸಾಧ್ಯವಿದೆ....ಪರಾತ್ಪರದ, ಪುರುಷೋತ್ತಮನ ಸಾಕ್ಷಾತ್ಕಾರವು ಖಂಡಿತವಾಗಿಯೂ ಮುಖ್ಯ ವಿಷಯ; ಆದರೆ ಅವನನ್ನು ಪ್ರೇಮದಿಂದ, ನಿಷ್ಠೆಯಿಂದ, ಭಕ್ತಿಯಿಂದ ಉಪಾಸಿಸುವದು, ಸ್ವಕರ್ಮದಿಂದ ಅವನ ಸೇವೆಯನ್ನು ಮಾಡುವದು ಮತ್ತು ಅವನನ್ನು ಕೇವಲ ಬೌದ್ಧಿಕ ಜ್ಞಾನದಿಂದ ಮಾತ್ರವೇ ಅಲ್ಲ, ಆದರೆ ಆಧ್ಯಾತ್ಮಿಕ ಅನುಭೂತಿಯಿಂದ ತಿಳಿದುಕೊಳ್ಳುವದು, ಇದಾದರೂ ಸಮನ್ವಯ ಯೋಗದ ಮಾರ್ಗದಲ್ಲಿ ಮುಖ್ಯವಾದದ್ದು. 'ಕ' ಅವರ ಆಗ್ರಹದಂತೆ ಬೇರೆ ಯಾವ ಕಡೆಗೂ ಹೊರಳದೆ ಇದೇ ನಿನ್ನ ಮಾರ್ಗವೆಂದು ಸ್ವೀಕರಿಸಿದರೆ, ಇದೇ ನೀನು ಸಾಧಿಸಬೇಕಾದ ಸಿದ್ಧಿ ಮತ್ತು ಸಾಕ್ಷಾತ್ಕಾರವಾದರೆ, ಬೇರೆ ಯಾವದೇ ಅತ್ಯಂತಿಕ ಪಾರಲೌಕಿಕತೆಯು ನಿನ್ನ ಮಾರ್ಗವಾಗಲಾರದು,ಇದನ್ನು ಸಾಧಿಸುವದು ಮತ್ತು ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುವದು ನಿನಗೆ ಪೂರ್ಣ ಸಾಧ್ಯವಿದೆಯೆಂದು ನನ್ನ ನಂಬಿಕೆ ಇದೆ; ನಿನ್ನ ಯೋಗ್ಯತೆಯ ವಿಷಯವಾಗಿ ಪುನಃಪುನಃ ಏಳುವ ನಿನ್ನ ಸಂಶಯಗಳಲ್ಲಿ ಭಾಗಿಯಾಗುವದು ನನಗೆ ಶಕ್ಯವಿಲ್ಲ; ಮತ್ತು ಅವುಗಳ ಎಡೆಬಿಡದ ಪುನರಾವೃತ್ತಿಯು, ಅವುಗಳನ್ನು ಜಯಿಸಲಿಕ್ಕಾಗುವದಿಲ್ಲವೆಂದು ನಂಬುವದಕ್ಕೆ ಎಷ್ಟು ಮಾತ್ರವೂ ಆಧಾರ ಪ್ರಮಾಣವಲ್ಲ. ಈ ತೆರದ ಸತತ ಪುನರಾವೃತ್ತಿಯು ಅನೇಕರ ಸಾಧನೆಯಲ್ಲಿ ಒಂದು ಅಂಗಲಕ್ಷಣವೇ ಆಗಿದ್ದರೂ ಅವರು ಕೊನೆಗೆ ಅದರಿಂದ ಪಾರಾಗಿ ಧ್ಯೇಯವನ್ನು ಮುಟ್ಟಿರುವರು; ಅತಿ ದೊಡ್ಡ ಮಹಾಯೋಗಿಗಳ ಸಾಧನೆಯು ಕೂಡಾ ಇಂಥ ಉಗ್ರ, ಪ್ರಬಲ ಮತ್ತು ತಿರುತಿರುಗಿ ಬರುವ ಆವರ್ತನೆಗಳಿಂದ ಪಾರಾಗಿಲ್ಲ; ಇಷ್ಟೇ ಅಲ್ಲ, ಅವರು ಇಂಥ ಮರಮರಳಿ ಬರುವ ಅನೇಕ ವಿಶೇಷ ಆಘಾತಗಳಿಗೆ ಎಷ್ಟೋಸಲ ಗುರಿಯಾಗಿದ್ದುದು, ನಾನೇ "ಸಾವಿತ್ರಿ"ಯಲ್ಲಿ ಒಂದಲ್ಲ ಅನೇಕ ಕಡೆ ಸೂಚಿಸಿರುವಂತೆ, ನಿಜವಾದ ಸಂಗತಿಯೇ; ಮತ್ತು ಅದು ನಿಜವಾಗಿಯೂ ನನ್ನ ಸ್ವಂತ ಅನುಭವದ ಆಧಾರದ ಮೇಲಿಂದ ಹೇಳಿದ ಮಾತೇ ಆಗಿದೆ. ಸ್ವಭಾವಗತವಾಗಿಯೇ, ಈ ಪುನರಾವೃತ್ತಿಗಳಲ್ಲಿ ಸತತವಾಗಿ ಅದೇ ಪ್ರತಿಕೂಲವಾದ ಅನುಭವಗಳ ಆವರ್ತನೆ, ಅದೇ ಪ್ರತಿಕೂಲ ವಿರೋಧ,ಎಲ್ಲ ನಂಬಿಕೆ, ಶ್ರದ್ಧೆ ಮತ್ತು ಸಾಧನೆಯ ಭವಿಷ್ಯದ ಬಗೆಗಿರುವ ವಿಶ್ವಾಸ--ಇವುಗಳನ್ನು ನಾಶಮಾಡುವ ವಿಚಾರಗಳು, ಸತ್ಯವೆಂದು ತಿಳಿದುಕೊಂಡದ್ದನ್ನು ಧ್ವಂಸಮಾಡುವ ಸಂಶಯಗಳು, ಯೋಗವನ್ನು ತ್ಯಜಿಸುವದಕ್ಕಾಗಿ ಒತ್ತಾಯಗಳು, ಇಲ್ಲವೆ "ವಿನಾಶಕಾಲೇ ವಿಪರೀತ ಬುದ್ಧಿಃ"ಎಂಬಂತೆ ಭ್ರಷ್ಟತೆಯ ಘಾತಕ ಸಮಾಲೋಚನೆಗಳು ಬರುತ್ತವೆ. ಈ ವಿಘ್ನಕಾರಕ ಆಘಾತಗಳು ಅನುಸರಿಸುವ ಕ್ರಮವು ನಿಜವಾಗಿ ಎಲ್ಲರಲ್ಲಿಯೂ ಒಂದೇ ಆಗಿರುವದಿಲ್ಲ, ಆದರೂ ಅವುಗಳಲ್ಲಿ ಒಂದು ವರ್ಗದ-ಜಾತಿಯ ಸಾಮ್ಯ-ಸಾದೃಶ್ಯಗಳು ಇವೆ. ಆದರೆ ಈ ಆಘಾತಗಳ ಗುಣ, ಸ್ವಭಾವ ಮತ್ತು ಕಾರಣಗಳ ಪರಿಶೀಲನೆ-ಪರಿಚಯಗಳಿಂದ ಅವುಗಳ ನಿಜವಾದ ಜ್ಞಾನವನ್ನು ಮಾಡಿಕೊಂಡು, ಅವುಗಳ ಮಡುವಿನಲ್ಲಿ ಬೀಳದೇ, ಅವುಗಳಿಗೆ ಬಲಿ ಬೀಳದೇ ಅವುಗಳನ್ನು ಸಹಿಸುವದರಿಂದ,ಹಾಗೂ ಕೊನೆಗೆ ಅವುಗಳ ಆಗಮನವನ್ನು ಸಾಕ್ಷಿಭಾವದಿಂದ ನೋಡುತ್ತ, ಪ್ರಾಣಭಾವವು ಆ ಆವರ್ತನೆಯ ಮಡುವಿನಲ್ಲಿ ಸಿಕ್ಕು ಹೊಯ್ದಾಡುತ್ತಿದ್ದರೂ ಮತ್ತು ಅತಿಬಾಹ್ಯವಾದ ಸ್ಥೂಲ ಭೌತಿಕ ಮನಸ್ಸು ಇನ್ನೂ ಅವುಗಳ ಪ್ರತಿಕೂಲ ಸೂಚನೆಗಳನ್ನು ಪ್ರತಿಬಿಂಬಿಸುತ್ತಿದ್ದರೂ, ಮನಸ್ಸಿನ ಸಂಮತಿಸೂಚಕ ಅಪ್ಪಣೆಯನ್ನು ಅವುಗಳಿಗೆ ಕೊಡದೇ ಪ್ರಯತ್ನ ಮಾಡಿದರೆ, ಕ್ರಮೇಣ ಕೊನೆಗೆ ಇವುಗಳನ್ನು ಜಯಿಸಬಹುದು. ಅಂತ್ಯದಲ್ಲಿ ಈ ಆಘಾತಗಳು ತಮ್ಮ ಬಲವನ್ನು ಕಳೆದುಕೊಂಡು ಪ್ರಕೃತಿಯಿಂದ ದೂರ ಜಾರಿಹೋಗುವವು;ಪುನರಾವರ್ತನೆಯ ರಭಸವು ಕ್ಷೀಣವಾಗುವದು, ಅಥವಾ ದೀರ್ಘಕಾಲ ನಿಲ್ಲುವದಕ್ಕೆ ಶಕ್ತಿಯಿಲ್ಲದ್ದಾಗುವದು. ಅನಾಸಕ್ತಿಯು ಸಬಲವಾಗಿದ್ದ ಪಕ್ಷಕ್ಕೆ ಅವುಗಳನ್ನು ಅತಿ ಶೀಘ್ರವಾಗಿ ಅಥವಾ ಒಮ್ಮೆಲೇ ಕಡಿದು ಹಾಕಲೂ ಬಹುದು.

## ಸಮರ್ಪಣ

ಇವುಗಳನ್ನೆದುರಿಸಲು ಅತಿಸಮರ್ಥವಾದ ನಿಲುಮೆಯೆಂದರೆ, ಇವುಗಳ ನಿಜಸ್ವರೂಪವನ್ನು ತಿಳಿದುಕೊಂಡ ಅರಿವಿನ ದೃಷ್ಟಿಯೇ: ಅದೆಂದರೆ, ಭೌತಿಕ ಮನಸ್ಸಿನಲ್ಲಿಯ ಅಥವಾ ಪ್ರಾಣಭಾವದಲ್ಲಿಯ ಕೆಲವೊಂದು ತೆರೆದಿದ್ದ ಭಾಗಗಳ (ದ್ವಾರಗಳ) ಅನುಚಿತ ಲಾಭವನ್ನು ತೆಗೆದುಕೊಂಡು ಹೊರಗಿನಿಂದ ಒಳನುಗ್ಗುವ ಕೃಷ್ಣ ಆಸುರೀ ಶಕ್ತಿಗಳು ಇವು; ನಮ್ಮ ನಿಜವಾದ ಅಂಗಗಳಲ್ಲ, ಅಥವಾ ನಮ್ಮ ಪ್ರಕೃತಿಯ ಸಹಜವಾದ ಸೃಷ್ಟಿಯಲ್ಲ. ಭೌತಿಕ ಮನಸ್ಸಿನಲ್ಲಿ ಅಸ್ತವ್ಯಸ್ತತೆ-ಅಂಧಕಾರಗಳನ್ನುಂಟುಮಾಡುವದು ಮತ್ತು ಅದರಲ್ಲಿ ತಪ್ಪು ಕಲ್ಪನೆಗಳನ್ನು, ಕೆಟ್ಟ ವಿಚಾರಗಳನ್ನು, ಅಸತ್ಯ ಭಾವನೆಗಳನ್ನು ಎಸೆಯುವದು ಅಥವಾ ಉಂಟುಮಾಡುವದು ಈ ಘಾತಕ ಕಾಕರ ಪ್ರಿಯ ಉದ್ಯೋಗವೇ ಆಗಿದೆ; ಮತ್ತು ತನ್ನದೆಲ್ಲವೂ ನ್ಯಾಯ-ಯೋಗ್ಯ ಎಂಬ ಅನುಚಿತ ವಿಶ್ವಾಸದಿಂದ, ಅಥವಾ ತನ್ನ ಭಾವನೆಗಳು ಮತ್ತು ಅನುಮಾನಗಳು ಸ್ವಾಭಾವಿಕವಾಗಿಯೇ ಸಮವಾದವುಗಳೆಂಬ ನಿರಾಧಾರವಾದ ಅತಿವಿಶ್ವಾಸದ ಸಹಾಯದಿಂದ ಈ ಭೌತಿಕ ಮನಸ್ಸಿನ ಬೆಂಬಲವನ್ನೂ ಸಂಮತಿ ಸಹಕಾರಗಳನ್ನೂ ಪಡೆದರೆ, ಈ ಘಾತಕಶಕ್ತಿಗಳ ಕೆಲಸವಾಯಿತು! ನಿಜವಾದ (ಸೂಕ್ಷ್ಮ) ಮನಸ್ಸು ಈ ಕಾರ್ಮೋಡಗಳನ್ನು ಹೊಡೆದೋಡಿಸಿ ಪುನಃ ತನ್ನ ಅಧಿಕಾರವನ್ನು ಸ್ಥಾಪಿಸುವ ವರೆಗೆ ಇವುಗಳಿಗೆ ಮಹೋತ್ಸವದ ಪರ್ವಕಾಲವೇ ! ಇವುಗಳ ಇನ್ನೊಂದು ಕುಯುಕ್ತಿ ಎಂದರೆ ಕೆಳಗಿನ ಅಧಃಪ್ರಾಣಭಾವದ ಅಂಗಗಳಲ್ಲಿ ಯಾವದಾದರೂ ದುಃಖದ ಸಂವೇದನೆಯನ್ನು ಹುಟ್ಟಿಸುವದು ಅಥವಾ ಅವುಗಳಲ್ಲಿ ತಮಗೆ ಅನ್ಯಾಯವಾಗಿದೆಯೆಂಬ ಭಾವಾಭಾಸವನ್ನು ಉತ್ಪನ್ನ ಮಾಡುವದು, ಮತ್ತು ಆ ದುಃಖದ ವೇದನೆಯನ್ನು ಅಥವಾ ಅನ್ಯಾಯದ ವೃಥಾಭಾವನೆಯನ್ನು ಆದಷ್ಟು ದೀರ್ಘಕಾಲ ಸ್ಥಿರಗೊಳಿಸುವದು. ಹಾಗಿದ್ದ ಪಕ್ಷಕ್ಕೆ ನಾವು ನಮ್ಮ ಪ್ರಕೃತಿಯಲ್ಲಿ ತೆರೆದಿದ್ದ ಈ ದ್ವಾರಗಳನ್ನು (ಭಾಗಗಳನ್ನು) ಶೋಧಿಸಿ ತೆಗೆದು, ಅವುಗಳನ್ನು ಶಾಶ್ವತವಾಗಿ ಮುಚ್ಚುವದಕ್ಕಾಗಲಿ ಅಥವಾ ಈ ಆಗಂತುಕ-ಅನಾಮಂತ್ರಿತ ಅತಿಥಿಗಳನ್ನು ಕೂಡಲೆ ಅಥವಾ ಆದಷ್ಟು ತೀವ್ರ ಹೊರಗೆ ತಳ್ಳಿ ಬಿಡುವದಕ್ಕಾಗಲಿ ಕಲಿಯಬೇಕು. ಪುನರಾವೃತ್ತಿಯು ಮೂಲ ಅಸಮರ್ಥತೆಯ ಸಿದ್ಧ ಲಕ್ಷಣವಲ್ಲ; ಯೋಗ್ಯವಾದ ಅಂತರ್ದೃಷ್ಟಿಯ ನಿಲುಮೆಯನ್ನು ದೃಢಪಡಿಸಿಕೊಂಡರೆ ಅದನ್ನು ಜಯಿಸುವದು ಶಕ್ಯವೂ ಇದೆ, ಸಾಧ್ಯವೂ ಇದೆ. ದೀರ್ಘಕಾಲದ ವರೆಗೆ ಭಗವಂತನು ನಮ್ಮಿಂದ ತನ್ನನ್ನು ಬಚ್ಚಿಟ್ಟುಕೊಂಡರೂ, ನಾವು ಆ ನಮ್ಮ ಜೀವನದ ಮತ್ತು ಕರ್ಮಗಳ ಸ್ವಾಮಿಯಾದ ಈಶ್ವರನಲ್ಲಿ ನಮ್ಮ ಶ್ರದ್ಧೆಯನ್ನು ಅಚಲವಾಗಿಡಬೇಕು;—ಅವನು ತನಗೆ ಯುಕ್ತ ತೋರಿದ ಯೋಗ್ಯ ಕಾಲದಲ್ಲಿ ತನ್ನ ಅಸ್ತಿತ್ವವನ್ನು ತಾನೇ ಬಿಚ್ಚಿ ತೋರಿಸುವನು.

ನೀನು ಯಾವಾಗಲೂ ಗುರುವಾದದಲ್ಲಿ ವಿಶ್ವಾಸವನ್ನಿಟ್ಟಿರುವಿ: ನಾನು ನಿನಗೆ ಹೇಳುವದಿಷ್ಟೇ—ಗುರುವಿನಲ್ಲಿ ಮತ್ತವನ ಮಾರ್ಗದರ್ಶಿತ್ವದಲ್ಲಿ ಶ್ರದ್ಧೆಯನ್ನಿಡು ಮತ್ತು ಪೂರ್ಣ ಫಲ ದೊರಕುವ ವಿಷಯದಲ್ಲಿ ಈಶ್ವರನನ್ನು ನಂಬು; ನನ್ನ ಸ್ಥಿರವಾದ ಪ್ರೇಮ ಮತ್ತು ಮಮತೆಯಲ್ಲಿ, ಹಾಗೆಯೇ ಮಾತೆಯ ಮಮತೆಯಲ್ಲಿ, ದೈವೀ ಕೃಪೆಯಲ್ಲಿ ಮತ್ತು ಪ್ರೀತಿಯ ಕರುಣೆಯಲ್ಲಿ ಶ್ರದ್ಧೆಯಿರಲಿ; ಸ್ಥಿರವಾಗಿ ನಿಂತು, ಎಲ್ಲ ವಿಘ್ನ ಆಘಾತಗಳನ್ನು ಇದಿರಿಸು, ಮತ್ತು ಆಧ್ಯಾತ್ಮಿಕ ಗಮ್ಯದ ಕಡೆಗೆ ಹಾಗೂ ಸಕಲಪೂರಕ,-ಸರ್ವಸುಖಕಾರಕ, ಸಂಪೂರ್ಣಾನಂದದಾಯಕ ಈಶ್ವರನ ಸನ್ನಿಧಿಯೆಡೆಗೆ, ಆತನ ಸಂಪರ್ಕದ ಕಡೆಗೆ ದೃಢವಾಗಿ ಹೆಜ್ಜೆಗಳನ್ನು ಹಾಕುತ್ತ ಹೋಗು.

ಅನುವಾದಕರು:
**ರಾ. ಕೃ. ವಾಳವೇಕರ**

**ಶ್ರೀ ಅರವಿಂದರಚಿತ**

# ದುರ್ಗಾಸ್ತೋತ್ರ

**(ಬಂಗಾಲಿ ಮತ್ತು ಆಂಗ್ಲ ಆವೃತ್ತಿಗಳನ್ನು ಆಧರಿಸಿದುದು)**

ದುರ್ಗಾಮಾತೆಯೆ ! ನೀನು ಸಿಂಹವಾಹಿನಿ, ಸರ್ವಶಕ್ತಿದಾಯಿನಿ, ಮಾತೆ, ಶಿವಪ್ರಿಯೆ ! ನಿನ್ನ ಶಕ್ತ್ಯಂಶಜಾತರಾದ ಭಾರತದ ಯುವಕರಾದ ನಾವು ನಿನ್ನ ದೇಗುಲದಲ್ಲಿ ಕುಳಿತು ಪ್ರಾರ್ಥಿಸುತ್ತಿರುವೆವು. ಕೇಳು ಮಾತೆಯೇ, ಭೂಮಿಗೆ ಇಳಿದು ಬಂದು ಈ ಭಾರತದಲ್ಲಿ ಪ್ರಕಾಶಗೊಳ್ಳು.

ದುರ್ಗಾಮಾತೆಯೆ ! ಯುಗಯುಗದಲ್ಲಿ ಮಾನವಶರೀರದಲ್ಲಿ ಅವತರಿಸಿ ಬಂದು ಜನ್ಮಜನ್ಮದಲ್ಲಿ ನಿನ್ನ ಕಾರ್ಯವನ್ನೇ ಮಾಡಿ ನಿನ್ನ ಆನಂದಧಾಮಕ್ಕೆ ಮರಳುವೆವು. ಈ ಬಾರಿಯೂ ನಿನ್ನ ಕಾರ್ಯಕ್ಕಾಗಿಯೇ ವ್ರತಿಗಳು ನಾವು. ಕೇಳು ಮಾತೆಯೇ, ಭೂಮಿಗೆ ಇಳಿದು ಬಂದು ನಮಗೆ ನೆರವನ್ನು ನೀಡು.

ದುರ್ಗಾಮಾತೆಯೆ ! ನೀನು ಸಿಂಹವಾಹಿನಿ, ತ್ರಿಶೂಲಧಾರಿಣಿ, ತೊಟ್ಟ ಕವಚದಿಂದ ಸುಂದರಶರೀರೆ, ಜಯದಾಯಿನಿ. ಭಾರತವು ನಿನ್ನ ಪ್ರತೀಕ್ಷೆಯಲ್ಲಿದೆ. ನಿನ್ನ ಆ ಮಂಗಲಮಯಿ ಮೂರ್ತಿಯನ್ನು ನೋಡಲು ಉತ್ಸುಕವಾಗಿದೆ. ಕೇಳು ಮಾತೆಯೇ, ಭೂಮಿಗೆ ಇಳಿದು ಬಂದು ಈ ಭಾರತದಲ್ಲಿ ಪ್ರಕಾಶಗೊಳ್ಳು.

ದುರ್ಗಾಮಾತೆಯೆ ! ನೀನು ಬಲದಾಯಿನಿ, ಪ್ರೇಮದಾಯಿನಿ, ಜ್ಞಾನದಾಯಿನಿ, ಶಕ್ತಿಸ್ವರೂಪಿಣಿ, ಭೀಮೆ, ಸೌಮ್ಯ-ರೌದ್ರ ರೂಪಿಣಿ ! ಜೀವನ ಸಂಗ್ರಾಮದಲ್ಲಿ, ಭಾರತ ಸಂಗ್ರಾಮದಲ್ಲಿ, ನಿನ್ನಿಂದ ಪ್ರೇರಿತರಾದ ಯೋಧರು ನಾವು; ಮಾತೆಯೇ, ಪ್ರಾಣ-ಮನಗಳಿಗೆ ಅಸುರರ ಶಕ್ತಿ-ಉದ್ಯಮಗಳನ್ನು ನೀಡು. ಮಾತೆಯೇ, ಹೃದಯ-ಬುದ್ಧಿಗಳಿಗೆ ದೇವತೆಗಳ ಶೀಲ-ಜ್ಞಾನಗಳನ್ನು ನೀಡು.

ದುರ್ಗಾಮಾತೆಯೆ ! ಜಗತ್‌ಶ್ರೇಷ್ಠ ಭಾರತ ಜನಾಂಗವು ನಿಬಿಡ ತಿಮಿರದಿಂದ ಆಚ್ಛನ್ನವಾಗಿತ್ತು. ಮಾತೆಯಾದ ನೀನು ಗಗನತಲದಲ್ಲಿ ಮೆಲ್ಲಮೆಲ್ಲನೆ ಉದಯಗೊಳ್ಳುತ್ತಿರುವೆ. ನಿನ್ನ ಸ್ವರ್ಗೀಯ ಶರೀರದೊಳಗಿಂದ ತಿಮಿರವಿನಾಶಿಯಾದ ಪ್ರಭೆಯು ಉಷಃಪ್ರಕಾಶರೂಪದಲ್ಲಿ ಹೊರಹೊಮ್ಮುತ್ತಿದೆ. ನಿನ್ನ ಆ ಪ್ರಕಾಶವನ್ನು ವಿಸ್ತಾರಗೊಳಿಸು. ಮಾತೆಯೇ, ತಿಮಿರವನ್ನು ವಿನಾಶಗೊಳಿಸು.

ದುರ್ಗಾಮಾತೆಯೆ ! ಶ್ಯಾಮಲೆಯಾದ ನೀನು ಸರ್ವಸೌಂದರ್ಯಾಲಂಕೃತಳು. ಜ್ಞಾನ-ಪ್ರೇಮ-ಶಕ್ತಿಗಳ ಆಧಾರವಾದ ಭಾರತದಲ್ಲಿ ನಿನ್ನ ಸತ್ತ್ವವೇ ಉಂಟು. ಇಷ್ಟು ದಿನ ಭಾರತವು ಆತ್ಮರಕ್ಷಣೆಗಾಗಿ ಶಕ್ತಿಯನ್ನು ಸಂಗ್ರಹಿಸುತ್ತಿತ್ತು. ಈ ಯುಗದಲ್ಲಿ ಇಂದು ಭಾರತದ ಭಾರವನ್ನು ಹೊತ್ತು ಯುವಕಗಣವು ಅಣಿಯಾಗಿ ನಿಂತಿದೆ. ಮಾತೆಯೇ, ನೀನು ಬಂದು ಪ್ರಕಾಶಗೊಳ್ಳು.

ದುರ್ಗಾಮಾತೆಯೆ ! ನಾವು ನಿನ್ನ ಸಂತಾನ. ನಿನ್ನ ಪ್ರಸಾದದಿಂದ, ನಿನ್ನ ಪ್ರಭಾವದಿಂದ ಮಹತ್ಕಾರ್ಯದ ಮಹದ್ಧಾರಕ್ಕಾಗಿ ಉಪಯುಕ್ತರನ್ನಾಗಿ ಮಾಡು. ಕ್ಷುದ್ರತೆಯನ್ನು ನಾಶಗೊಳಿಸು, ಸ್ವಾರ್ಥವನ್ನು ನಾಶಗೊಳಿಸು, ಭಯವನ್ನು ನಾಶಗೊಳಿಸು.

## ಸಮರ್ಪಣ

ದುರ್ಗಾಮಾತೆಯೆ! ನೀನು ಕಾಲೀರೂಪಿಣಿ, ನೃಮುಂಡಮಾಲಿನಿ, ದಿಗಂಬರಿ, ಕೃಪಾಣಪಾಣಿ, ದೇವಿ, ಅಸುರವಿನಾಶಿನಿ! ನಿನ್ನ ಕ್ರೂರ ಗರ್ಜನೆಯಿಂದ ಅಂತಃಸ್ಥ ರಿಪುಗಳನ್ನು ನಾಶಗೊಳಿಸು. ನಮ್ಮ ಒಳದಲ್ಲಿ ಒಬ್ಬ ಶಿಶುವೂ ಉಳಿಯದಿರಲಿ. ನಮ್ಮ ಹೃದಯವು ವಿಮಲವಾಗಲಿ. ಇದುವೇ ನಮ್ಮ ಪ್ರಾರ್ಥನೆ. ಮಾತೆಯೇ, ನೀನು ನಮ್ಮಲ್ಲಿ ಪ್ರಕಾಶಗೊಳ್ಳು.

ದುರ್ಗಾಮಾತೆಯೆ! ಭಾರತವು ಇಂದು ಸ್ವಾರ್ಥ-ಭಯ-ಕ್ಷುದ್ರತೆಗಳಿಂದಾಗಿ ಸಾಯುತ್ತಿದೆ. ನಮ್ಮನ್ನು ಮಹಂತರನ್ನಾಗಿ ಮಾಡು, ಮಹತ್-ಪ್ರಯಾಸಿಗಳನ್ನಾಗಿ ಮಾಡು, ಉದಾರಚೇತರನ್ನಾಗಿ ಮಾಡು. ಇನ್ನು ಮುಂದೆ ಅಲ್ಪಾಶೆ ಅಳಿಯಲಿ, ನಿಶ್ಚೇಷ್ಟತೆ ನಶಿಸಲಿ, ಆಲಸ್ಯವು ದೂರವಾಗಲಿ; ನಾವಾರೂ ಭಯಭೀತರಾಗದಿರಲಿ.

ದುರ್ಗಾಮಾತೆಯೆ! ಯೋಗಶಕ್ತಿಯನ್ನು ವಿಸ್ತಾರಗೊಳಿಸು. ನಾವು ನಿನ್ನ ಪ್ರಿಯ ಆರ್ಯ ಸಂತಾನ. ಲುಪ್ತವಾಗಿ ಹೋದ ವಿದ್ಯೆ, ಶೀಲ, ಮೇಧಾಶಕ್ತಿ, ಭಕ್ತಿ-ಶ್ರದ್ಧೆ, ತಪಸ್ಸೆ, ಬ್ರಹ್ಮಚರ್ಯ, ಸತ್ಯಜ್ಞಾನ—ಇವುಗಳನ್ನು ನಮ್ಮಲ್ಲಿ ಮತ್ತೆ ಪ್ರಕಾಶಗೊಳಿಸಿ ಜಗತ್ತಿಗಾಗಿ ಅವುಗಳನ್ನು ನೀಡುವಂತೆ ಮಾಡು. ದುರ್ಗತಿನಾಶಿನಿಯಾದ ಜಗದಂಬೆಯೇ, ಮಾನವಕುಲದ ಸಾಹಾಯ್ಯಕ್ಕಾಗಿ ನೀನು ಪ್ರಕಾಶಗೊಳ್ಳು.

ದುರ್ಗಾಮಾತೆಯೆ! ಅಂತಃಸ್ಥ ರಿಪುಗಳನ್ನು ಸಂಹರಿಸಿ ಬಾಹ್ಯ ಬಾಧೆ-ವಿಘ್ನಗಳನ್ನು ನಿರ್ಮೂಲಗೊಳಿಸು. ಬಲಶಾಲಿಯೂ ಪರಾಕ್ರಮಿಯೂ ಉನ್ನತಚೇತವೂ ಆದ ಭಾರತ ಜನಾಂಗವು ಏಕತ್ವ-ಪ್ರೇಮಗಳಿಂದಲೂ ಸತ್ಯ-ಶಕ್ತಿಗಳಿಂದಲೂ ಶಿಲ್ಪ-ಸಾಹಿತ್ಯಗಳಿಂದಲೂ ವಿಕ್ರಮ-ಜ್ಞಾನಗಳಿಂದಲೂ ಶ್ರೇಷ್ಠತೆಯನ್ನು ಪಡೆದು, ತನ್ನ ಪವಿತ್ರ ಕಾನನಗಳಲ್ಲಿ, ಫಲದ್ರೂಪ ಕ್ಷೇತ್ರಗಳಲ್ಲಿ, ಗಗನ-ಸಹಚರ ಪರ್ವತಗಳಲ್ಲಿ, ಪೂತಸಲಿಲ ನದೀತೀರಗಳಲ್ಲಿ ಶಾಶ್ವತವಾಗಿ ಬಾಳಿ ಬದುಕಲಿ. ಮಾತೃಚರಣಗಳಲ್ಲಿ ಇದುವೇ ಪ್ರಾರ್ಥನೆ. ಮಾತೆಯೇ, ನೀನು ಪ್ರಕಾಶಗೊಳ್ಳು.

ದುರ್ಗಾಮಾತೆಯೆ! ನಮ್ಮ ಶರೀರಗಳಲ್ಲಿ ಯೋಗಬಲದಿಂದ ಪ್ರವೇಶಿಸು. ನಾವು ನಿನ್ನ ಯಂತ್ರಗಳಾಗುವೆವು, ನಿನ್ನ ಅಶುಭವಿನಾಶಿ ಖಡ್ಗವಾಗುವೆವು, ಅಜ್ಞಾನವಿನಾಶಿ ಪ್ರದೀಪವಾಗುವೆವು, ನಿನ್ನ ಮಕ್ಕಳ ಈ ಆಶೆಯನ್ನು ಪೂರ್ಣಗೊಳಿಸು. ಒಳಗಿದ್ದು ನಿಯಂತಾರಳಾಗಿ ಯಂತ್ರವನ್ನು ನಡೆಯಿಸು, ಅಶುಭದ ಹಂತಾರಳಾಗಿ ಖಡ್ಗವನ್ನು ತಿರುಹು, ಜ್ಞಾನದೀಪ್ತಿಪ್ರಕಾಶಿನಿಯಾಗಿ ದೀವಟಿಗೆಯನ್ನು ಹಿಡಿದೆತ್ತು. ಮಾತೆಯೇ, ಪ್ರಕಾಶಗೊಳ್ಳು.

ದುರ್ಗಾಮಾತೆಯೆ! ಒಮ್ಮೆ ನಿನ್ನನ್ನು ಪಡೆದೆವೆಂದರೆ ಇನ್ನೆಂದೂ ನಿನ್ನ ವಿಸರ್ಜನೆ ಮಾಡಲಿಕ್ಕಿಲ್ಲ. ಶ್ರದ್ಧೆ-ಭಕ್ತಿ-ಪ್ರೇಮಗಳ ಪಾಶದಿಂದ ನಿನ್ನನ್ನು ಕಟ್ಟುವೆವು. ಮಾತೆಯೇ ಬಂದುಬಿಡು, ನಮ್ಮ ಪ್ರಾಣ-ಮನ-ಶರೀರಗಳಲ್ಲಿ ಪ್ರಕಾಶಗೊಳ್ಳು.

ವೀರಮಾರ್ಗಪ್ರದರ್ಶಿನಿಯಾದ ಮಾತೆಯೇ, ಬಂದುಬಿಡು. ಇನ್ನೆಂದೂ ನಿನ್ನ ವಿಸರ್ಜನೆ ಮಾಡುವುದಿಲ್ಲ. ನಮ್ಮ ಅಖಿಲ ಜೀವನವೂ ಅನವಚ್ಛಿನ್ನ ದುರ್ಗಾಪೂಜೆ. ನಮ್ಮ ಸರ್ವ ಕಾರ್ಯವೂ ಅವಿರತ ಪವಿತ್ರ ಪ್ರೇಮಮಯ ಶಕ್ತಿಮಯ ಮಾತೃಸೇವಾವ್ರತವಾಗಲಿ. ಮಾತೆಯೇ, ಇದುವೆ ನಮ್ಮ ಪ್ರಾರ್ಥನೆ. ಭೂಮಿಗೆ ಇಳಿದು ಬಂದು ಈ ಭಾರತದಲ್ಲಿ ಪ್ರಕಾಶಗೊಳ್ಳು.

ಅನುವಾದಕರು:

**ಪ್ರಹ್ಲಾದ ನರೇಗಲ್ಲ**

# ಯೋಗ ಹಾಗೂ ಅದರ ಉದ್ದೇಶ

ನಾವು ಅನುಷ್ಠಾನ ಮಾಡುತ್ತಿರುವ ಯೋಗವು ನಮಗಾಗಿ ಮಾತ್ರವೇ ಅಲ್ಲ, ಅದು ಪರಮಾತ್ಮನಿಗಾಗಿದೆ. ವಿಶ್ವದಲ್ಲಿಯ ಭಗವತ್ಸಂಕಲ್ಪವನ್ನು ಕಾರ್ಯಗತಗೊಳಿಸುವದು, ಆಧ್ಯಾತ್ಮಿಕ ಪರಿವರ್ತನೆಯಾಗುವಂತೆ ಮಾಡುವದು ಹಾಗೂ ಮಾನವಕುಲದ ಮನೋಮಯ–ಪ್ರಾಣಮಯ–ಅನ್ನಮಯ ಪ್ರಕೃತಿಯಲ್ಲಿ ಹಾಗೂ ಜೀವನದಲ್ಲಿ ದೈವಿಕ ಪ್ರಕೃತಿ ಹಾಗೂ ಜೀವನವು ಅವತರಿಸುವಂತೆ ಮಾಡುವದು ಈ ಯೋಗದ ಗುರಿಯಾಗಿದೆ. ಮುಕ್ತಿಯು ಯೋಗದಿಂದ ಆವಶ್ಯಕವಾಗಿ ಉಂಟಾಗುವ ಸ್ಥಿತಿಯಾಗಿದ್ದರೂ, ನಮ್ಮ ಯೋಗದ ಉದ್ದೇಶವು ಸ್ವಾತ್ಮ (ವ್ಯಷ್ಟಿ) ಮುಕ್ತಿಮಾತ್ರವಾಗಿರದೆ, ಮಾನವನ ವಿಮೋಚನೆಯೂ ಪರಿವರ್ತನೆಯೂ ಆಗಿದೆ. ಸ್ವಾತ್ಮಾನಂದಮಾತ್ರವಲ್ಲ, ದಿವ್ಯಾನಂದವು— ಯೇಸುಕ್ರಿಸ್ತನು ಭೂಮಿಯಲ್ಲಿ ಸ್ಥಾಪಿಸಲ್ಪಡಬೇಕೆಂದು ಬಯಸಿದ ಸ್ವರ್ಗ ರಾಜ್ಯವು—ನಮ್ಮ ಸತ್ಯಯುಗವು ಈ ಭೂಲೋಕದಲ್ಲಿ ಅವತೀರ್ಣವಾಗುವಂತೆ ಮಾಡುವದಾಗಿದೆ. ಆತ್ಮನು ನಿತ್ಯ ಮುಕ್ತನು. ಬಂಧವೆನ್ನುವದು ಭ್ರಾಂತಿ. ಆದುದರಿಂದ ನಮಗೆ ಸ್ವಾತ್ಮ(ವ್ಯಷ್ಟಿ)ಮುಕ್ತಿಯ ಆವಶ್ಯಕತೆಯೇ ಇಲ್ಲ. ನಾವು ನಿಜವಾಗಿ ಬದ್ಧರಲ್ಲ, ಆದರೆ ಬದ್ಧಜೀವನದ ಆಟವನ್ನಾಡುತ್ತಿರುವೆವು. ಪರಮಾತ್ಮನು ಸಂಕಲ್ಪಿಸಿದೊಡನೆ ನಾವು ಮುಕ್ತರಾಗಬಲ್ಲೆವು. ಈ ಆಟಕ್ಕೆ **ಆತನೇ,** ನಮ್ಮ ಪರಮ ಆತ್ಮನೇ ನಾಯಕನು. ಆತನ ಕೃಪೆಯು, ಆಜ್ಞೆಯು ಇಲ್ಲದೆ ಯಾವ ಜೀವಿಯೂ ಈ ಕ್ರೀಡೆಯಿಂದ ವಿರಮಿಸಲಾರನು. ಅಜ್ಞಾನದ ಹಾಗೂ ಮೋದ ಖೇದ, ಕಷ್ಟ–ಸುಖ, ಪುಣ್ಯ–ಪಾಪ, ತ್ಯಾಗ–ಭೋಗ ಎಂಬ ದ್ವಂದ್ವಗಳ ಭೋಗವನ್ನು ಮನಸ್ಸಿನ ಮೂಲಕವಾಗಿ ಉಣ್ಣುವದು ಹಲವು ಸಲ ಈಶ್ವರನ ಸಂಕಲ್ಪವಾಗಿರುತ್ತದೆ. ಯುಗಯುಗಾಂತರಗಳಿಂದ, ದೇಶ ವಿದೇಶಗಳಲ್ಲಿ **ಆತನು** 'ಯೋಗ'ವನ್ನು ಕುರಿತು ಯೋಚಿಸುತ್ತಿಲ್ಲ ಕೂಡ; ಆದರೂ ಆತನು ತನ್ನೀ ಲೀಲೆಯನ್ನು ಶತಕಾನುಶತಕಗಳಲ್ಲಿ ಬೇಸರಿಕೆಯಿಲ್ಲದೆ ಮುಂದುವರಿಸುತ್ತಿರುವದು ಕಂಡುಬರುತ್ತಿದೆ. ಇದರಲ್ಲಿ ಅನಿಷ್ಟವಾದುದೇನೂ ಇಲ್ಲ, ಖಂಡನೀಯವಾದ—ಅಸಮಾಧಾನಕಾರಕವಾದ ಯಾವ ಅಂಶವೂ ಇಲ್ಲ. ಇದು ಭಗವಲ್ಲೀಲೆ. ಯಾವನು ಈ ಸತ್ಯವನ್ನು ತಿಳಿದು, ತನ್ನ ನಿತ್ಯಮುಕ್ತತ್ವವನ್ನು ಗ್ರಹಿಸಿ ಭಗವಲ್ಲೀಲೆಯನ್ನು ಮುನ್ನಡೆಯಿಸುವನೋ ಹಾಗೂ ಈ ಕ್ರೀಡಾವಿಧಾನವನ್ನು ಬದಲಾಯಿಸುವದಕ್ಕೆ ಆತನ ಆಜ್ಞೆಯನ್ನು ನಿರೀಕ್ಷಿಸುತ್ತಿರುವನೋ ಆತನೇ ಪ್ರಾಜ್ಞನು.

ಈಗ ಭಗವದಾದೇಶವಾಗಿದೆ. ಆತನು ಯಾವಾಗಲೂ ತನ್ನ ಕಾರ್ಯಕ್ಕಾಗಿ ಯಾವದಾದರೊಂದು ದೇಶವನ್ನು ಆರಿಸಿಕೊಂಡು, ಅಲ್ಲಿ ಪರಾವಿದ್ಯೆಯನ್ನು ಕೆಲವರಾಗಲಿ, ಹಲವರಾಗಲಿ ಸಂತತವಾಗಿ—ಎಡರುತೊಡರುಗಳಿಗೆ ತುತ್ತಾಗದಂತೆ—ಉಳಿಸಿಕೊಂಡು ಬರುವಂತೆ ನೋಡಿಕೊಳ್ಳುತ್ತಾನೆ. ಪ್ರಕೃತದಲ್ಲಿ—ಈಗಿನ ಚತುರ್ಯುಗ ಕಾಲಪರಿಮಿತಿಯ ಮಟ್ಟಿಗಾದರೂ-- ಆ ದೇಶವು ನಮ್ಮ ಭರತವರ್ಷವೇ ಆಗಿದೆ. ಪರಮಾತ್ಮನು, ಅವಿದ್ಯೆಯ, ದ್ವಂದ್ವಗಳ, ಕಲಹಕ್ರೋಧಗಳ, ದುಃಖ ದೌರ್ಬಲ್ಯಗಳ, ಸ್ವಾರ್ಥಪರತೆಯ, ತಾಮಸಿಕ ರಾಜಸಿಕ ಸುಖಗಳ, ಅಂದರೆ ಒಟ್ಟಿನಲ್ಲಿ ಕಲಿಪುರುಷನ ವಿಕಟಲೀಲೆಯ ಪೂರ್ಣ ಸೌಖ್ಯವನ್ನು ಅನುಭವಿಸಬೇಕೆಂದು ಸಂಕಲ್ಪಿಸಿದಾಗ ಭರತವರ್ಷದಲ್ಲಿ ಜ್ಞಾನವು ಕ್ಷೀಣಿಸುವಂತೆ ಮಾಡಿ, ದೇಶವನ್ನು ಬಲಹೀನವನ್ನಾಗಿ ಮಾಡಿ, ಅತ್ಯಂತ ನೀಚಸ್ಥಿತಿಗಿಳಿಸಿ, ಅದು ತನ್ನಲ್ಲಿಯೇ ನಿವೃತ್ತವಾಗಿದ್ದುಕೊಂಡು, ಆತನ ಈ ವಿಶ್ವಲೀಲಾ ವಿಲಾಸಕ್ಕೆ ಅಡ್ಡಬರದಂತೆ ಮಾಡುವನು. ಈ ಪಂಕದಿಂದ ತಾನು ಹೊರಬಿದ್ದು, ಪುನಃ ನರನಲ್ಲಿಯ ನಾರಾಯಣನು ಮತ್ತೊಂದಾವರ್ತಿ ಶಕ್ತಿ

ಜ್ಞಾನಾನಂದ ಪೂರ್ಣನಾಗಲೆಂದು ಸಂಕಲ್ಪಿಸಿದಾಗ, ಅಧೋಗತಿಯಲ್ಲಿರುವ ಭಾರತಭೂಮಿಯನ್ನುದ್ಧರಿಸಿ, ಅದರ ಮೇಲೆ ಜ್ಞಾನವನ್ನು ವರ್ಷಿಸಿ, ಅದು ಜ್ಞಾನವನ್ನೂ ತತ್ಫಲಗಳಾದ ಜ್ಞಾನಾನಂದಗಳನ್ನೂ ಲೋಕಕ್ಕೆ ಬೀರುವ ಅವಕಾಶವನ್ನು ಒದಗಿಸುವನು. ಅಧ್ಯಾತ್ಮಜ್ಞಾನವು ಸಂಕೋಚನಗೊಂಡಾಗ ಭಾರತ ಭೂಮಿಯಲ್ಲಿರುವ ಯೋಗಿಪುಂಗವರು ಲೋಕದಿಂದ ನಿವೃತ್ತರಾಗಿ, ಸ್ವಕೀಯ ಮೋಕ್ಷಾನಂದಗಳಿಗೆ ಮಾತ್ರವೇ ಆಗಲಿ, ಕೆಲ ಶಿಷ್ಯರ ಮೋಕ್ಷದ ಸಲುವಾಗಿಯಾಗಲಿ ಯೋಗಸಾಧನೆಯಲ್ಲಿ ತೊಡಗಿರುವರು. ಆದರೆ ಜ್ಞಾನದ ಆಂದೋಲನವು ಹಬ್ಬಿ, ಅದರಿಂದ ಭಾರತದ ಆತ್ಮವು ಪ್ರವೃದ್ಧಮಾನವಾದಾಗ, ಈ ಯೋಗಿಗಳು ಮತ್ತೆ ಹೊರ ಬಂದು, ಲೋಕಹಿತಕ್ಕಾಗಿ ಕಾರ್ಯೋದ್ಯುಕ್ತರಾಗುವರು. ಜನಕ, ಅಜಾತಶತ್ರು, ಕಾರ್ತವೀರ್ಯರಂತಹ ರಾಜ ಯೋಗಿಗಳು ಲೋಕಸಿಂಹಾಸನಗಳನ್ನಲಂಕರಿಸಿ, ರಾಷ್ಟ್ರಗಳನ್ನಾಳುವರು.

ಮಾನವನಲ್ಲಿಯ ಭಗವಲ್ಲೀಲೆಯು ನಿರಂತರವಾಗಿ ಚಕ್ರಭ್ರಮಣದಂತೆ, ಸತ್ಯಯುಗದಿಂದ ಕಲಿ ಯುಗಕ್ಕೂ ಕಲಿಯುಗದೊಳಗಿಂದ ಸತ್ಯಯುಗಕ್ಕೂ ಸ್ವರ್ಣಯುಗದಿಂದ ಲೋಹಯುಗಕ್ಕೂ ಲೋಹಯುಗದೊಳ ಗಿಂದ ಮರಳಿ ಸ್ವರ್ಣಯುಗಕ್ಕೂ ನಿರಂತರವಾಗಿ ಚಲಿಸುತ್ತಿರುತ್ತದೆ ಆಧುನಿಕ ಭಾಷೆಯಲ್ಲಿ ಹೇಳುವದಾದರೆ, ಸತ್ಯಯುಗವೆಂಬ ಜಗತ್ತಿನ ಜೀವನದಶೆಯಲ್ಲಿ, ಅದೊಂದು ಸಾಮರಸ್ಯವು ಸುಸ್ಥಿರಸ್ವರೂಪದಲ್ಲಿ, ತಕ್ಕಷ್ಟು ರೀತಿ ಯಲ್ಲಿ ಸ್ಥಾಪಿತವಾಗಿರುತ್ತದೆ; ಹಾಗೂ ಮಾನವನು ಕೆಲವೊಂದು ನಿಯಮನಿಬಂಧನೆಗಳಿಗೊಳಗಾಗಿ, ತನ್ನ ಇರವಿನ ಪರಿಪೂರ್ಣತೆಯನ್ನು ಅನುಭವಿಸುತ್ತಾನೆ. ಈ ಯುಗದಲ್ಲಿ ಸುಪ್ರತಿಷ್ಠಿತವಾದ ಶುದ್ಧ ಸತ್ವದ ಬಲದಿಂದ ಮಾನವ ಸ್ವಭಾವದಲ್ಲಿ ಈ ಸಾಮರಸ್ಯವು ಉಂಟಾಗಿರುವದು. ಆದರೆ ಕಾಲಕ್ರಮದಲ್ಲಿ ಅದು ಕುಸಿದು ಬೀಳ ತೊಡಗುವದು. ಮುಂದೆ ತ್ರೇತಾಯುಗದಲ್ಲಿ ಮಾನವನು ವ್ಯಷ್ಟಿಸಮಷ್ಟಿಗತವಾದ ಸಂಕಲ್ಪಬಲದಿಂದ ಅದಕ್ಕಾ ಧಾರ ಕೊಟ್ಟು ನಿಲ್ಲಿಸುವನು. ಆದರೂ ಪುನಃ ಕಾಲಾನುಗುಣವಾಗಿ ಅದು ಮತ್ತಷ್ಟು ಕುಸಿಬೀಳುವದು; ಆಗ ದ್ವಾಪರಯುಗದಲ್ಲಿ ಆತನು ತನ್ನ ಬುದ್ಧಿಯುಕ್ತವಾದ ನಿಯಮರಚನೆಯಿಂದಲೂ ಸರ್ವಸಮ್ಮತ ಶಾಸನಗಳ ಬಲದಿಂದಲೂ ಅದನ್ನು ಸ್ಥಿರಗೊಳಿಸಲು ಪ್ರಯತ್ನಿಸುವನು. ಕೊನೆಗೆ ಕಲಿಯುಗದಲ್ಲಿ ಅದು ಸಂಪೂರ್ಣವಾಗಿ ಕಡಿದುಕೊಂಡು ಬಿದ್ದು, ನಾಶವಾಗುವದು. ಆದರೆ ಕಲಿಯು ಕೇವಲ ಅನಿಷ್ಟವಾದ ಯುಗವಲ್ಲ. ಅದರಲ್ಲಿ ನೂತನ ಸತ್ಯಯುಗಕ್ಕೂ ಆ ಯುಗದಲ್ಲಿಯ ನವೀನ ಸಾಮರಸ್ಯ ಸ್ಥಿತಿಗೂ ಮಹತ್ತರ ಪರಿಪೂರ್ಣತೆಗೂ ಆವಶ್ಯಕ ಗಳಾದ ಸ್ಥಿತಿಗತಿಗಳು ಕ್ರಮವಾಗಿ ಪ್ರಗತಿ ಹೊಂದುತ್ತ ನಿರ್ಮಿತವಾಗುತ್ತಿರುವವು. ಇದುವರೆಗೆ ಕಳೆದುಹೋದ—ಪರಿಣಾಮರೂಪವಾಗಿ ಉಳಿದ, ಆದರೆ ಇದೀಗ ಮುಗಿದ—ಕಲಿಯುಗದ ಕಾಲಭಾಗದಲ್ಲಿ ಪ್ರಾಚೀನ-ಜ್ಞಾನ-ಸಂಸ್ಕೃತಿಗಳು ಸರ್ವಸಾಧಾರಣವಾಗಿ ನಾಶವಾಗಿಬಿಟ್ಟವೆ. ವೇದೋಪನಿಷತ್ತುಗಳಲ್ಲಿ, ಇತರ ಪವಿತ್ರ ಗ್ರಂಥಗಳಲ್ಲಿ ಹಾಗೂ ಜಗತ್ತಿನ ಸಂದಿಗ್ಧ ಸಂಪ್ರದಾಯಗಳಲ್ಲಿ ಇವುಗಳ ಕೆಲವು ಅವಶೇಷಗಳು ಮಾತ್ರ ನಮಗೀಗ ಉಳಿದಿವೆ. ಆದರೀಗ ಆ ಮೇಲಣ ಭೂಮಿಕೆಗಳನ್ನೇರುವ ಉದ್ಯಮವನ್ನಾರಂಭಿಸುವದಕ್ಕೂ ನೂತನ ಸಾಮರಸ್ಯ-ಪೂರ್ಣಾವಸ್ಥೆ ಗಳನ್ನು ಪಡೆಯುವದಕ್ಕೆ ಮಾಡಬೇಕಾದ ಪ್ರಥಮ ಪ್ರಯತ್ನವನ್ನು ಕೈಕೊಳ್ಳುವದಕ್ಕೂ ತಕ್ಕ ಸಮಯವು ಸನ್ನಿ ಹಿತವಾಗಿದೆ. ಆದುದರಿಂದಲೇ ಮಾನವಸಮಾಜ-ಮಾನವನ ಜ್ಞಾನ-ಮಾನವನ ಧರ್ಮ-ನೀತಿಗಳ ಪೂರ್ಣತ್ವ ಸಿದ್ಧಿಗಾಗಿ ಅನೇಕ ಯೋಚನೆಗಳು ನಡೆದಿವೆ. ಆದರೂ ಸರಿಯಾದ ಸಾಮರಸ್ಯವಿನ್ನೂ ಲಭಿಸಿಲ್ಲ.

ಈ ಸಾಮರಸ್ಯವನ್ನು ಕಂಡುಹಿಡಿಯುವ ಯೋಗ್ಯತೆ ನಮ್ಮ ಭಾರತಭೂಮಿಗೆ ಮಾತ್ರವೇ ಇದೆ. ಏಕೆಂದರೆ ಈ ಸಾಮರಸ್ಯವು ಮಾನವನ ವರ್ತಮಾನ ಪ್ರಕೃತಿಯ ಪರಿವರ್ತನೆಯಿಂದ ಮಾತ್ರವೇ- ಕೇವಲ ಬಾಹ್ಯಸಂಸ್ಕರಣದಿಂದ ಅಲ್ಲ—ವೃದ್ಧಿ ಹೊಂದಲು ಸಾಧ್ಯ. ಅಂತಹ ಪರಿವರ್ತನೆಯು ಯೋಗದಿಂದಲ್ಲದೆ ಸಾಧ್ಯವಿಲ್ಲ. ಈಗಿನ ಕಾಲದಲ್ಲಿ ಮಾನವನ ಮತ್ತು ವಸ್ತುಮಾತ್ರಗಳ ಸ್ವಭಾವವೆಂದರೆ ಅದೊಂದು ವಿರಸ ಪ್ರಪಂಚ; ಅಪಶ್ರುತಿಯ ಸಂಗೀತ. ಮಾನವನ ಸಮಗ್ರ ಹೃದಯವು, ಕರ್ಮವು ಮತ್ತು ಮನಸ್ಸು ಪಲ್ಲಟಗೊಳ್ಳಬೇಕಾಗಿದೆ;

ಆದರೆ ಹೊರಗಿನಿಂದಲ್ಲ, ಒಳಗಿನಿಂದ. ರಾಜಕೀಯ, ಸಾಮಾಜಿಕ ಸಂಸ್ಥೆಗಳ ಮೂಲಕವಾಗಿ ಅಲ್ಲ, ಮತ-ತತ್ತ್ವಜ್ಞಾನಗಳಿಂದಲೂ ಅಲ್ಲ; ಬಾಹ್ಯಪ್ರಪಂಚದಲ್ಲಿಯೂ ನಮ್ಮ ಹೃದಯಾಂತರಾಳದಲ್ಲಿಯೂ ಭಗವತ್ಸಾಕ್ಷಾತ್ಕಾರವನ್ನು ಹೊಂದಿ, ತನ್ಮೂಲಕವಾಗಿ ನಮ್ಮ ಜೀವಿತವನ್ನೇ ರೂಪಾಂತರಗೊಳಿಸುವದರಿಂದ ಮಾತ್ರವೇ ಅದನ್ನು ಸಾಧ್ಯಗೊಳಿಸಬೇಕಾಗಿದೆ. ಈ ವಿಧವಾದ ಪರಿವರ್ತನೆ ಪೂರ್ಣಯೋಗದಿಂದಲೇ ಸಾಧ್ಯ; ಯಾವದಾದರೊಂದು ಫಲಸಿದ್ಧಿಯ ಉದ್ದೇಶದಿಂದ—ಆ ಫಲವು ಮೋಕ್ಷ ಇಲ್ಲನೆ ಆನಂದವಿದ್ದರೂ ಅಷ್ಟೇ—ಕೈಕೊಂಡ ಯೋಗದಿಂದಲ್ಲ; ಆದರೆ ನಮ್ಮಲ್ಲಿಯೂ ಇತರರಲ್ಲಿಯೂ ದಿವ್ಯಮಾನವತೆಯು ಪೂರ್ಣ ಪ್ರಕಟವಾಗಲೆಂದು ಕೈಕೊಳ್ಳಲಾದ ಯೋಗಾನುಷ್ಠಾನದಿಂದ. ಹಟಯೋಗ-ರಾಜಯೋಗ ಸಾಧನೆಯಾಗಲಿ, (ಭಕ್ತಿ-ಜ್ಞಾನ-ಕರ್ಮಗಳ) ತ್ರಿಮಾರ್ಗ ಸಾಧನೆಯಾಗಲಿ ಸಾಲದು. ಸಾಧಕನು ಇನ್ನೂ ಮೇಲಿನ ಅಂತಸ್ತಿಗೆ ಹೋಗಿ ಅಧ್ಯಾತ್ಮಯೋಗವನ್ನೇ ಅನುಷ್ಠಿಸಬೇಕು. ಅಧ್ಯಾತ್ಮಯೋಗದ ಮೂಲ ಸೂತ್ರವು ಇಬ್ಬಗೆಯಾಗಿದೆ; **ಜ್ಞಾನ—**ನಾವು ನೋಡುವ, ನೋಡದಿದ್ದರೂ ಅನುಭವಕ್ಕೆ ಗೋಚರವಾಗುವ ಸಕಲ ಪದಾರ್ಥಗಳು, ಎಂದರೆ ಮನುಜರು, ವಸ್ತುಮಾತ್ರಗಳು, ನಾವು, ಘಟನೆಗಳು, ಸುರಾಸುರರು, ದೇವದೂತರು—ಸಮಸ್ತವೂ ಅಖಂಡ ಪರಬ್ರಹ್ಮನೆಂಬ ಕಾಣ್ಕೆ; **ಕರ್ಮ ಹಾಗೂ ಭಾವ**--ಅತೀತನೂ ಅನಂತನೂ ವಿಶ್ವಮೂರ್ತಿಯೂ ಆಗಿ, ಏಕಕಾಲದಲ್ಲಿ ಸಗುಣ-ನಿರ್ಗುಣ, ಸಾಂತ-ಅನಂತ, ಸ್ವಸೀಮ-ನಿಸ್ಸೀಮ, ಏಕ-ಅನೇಕನಾಗಿ, ಸ್ವಸತ್ತಾಪ್ರಭಾವದಿಂದ ಊರ್ಧ್ವಲೋಕವಾಸಿಗಳಾದ ದೇವಕೋಟಿಯಲ್ಲಿ ಮಾತ್ರವಲ್ಲ, ಇಲ್ಲಿ ಕೆಳಗಿರುವ ನರ-ಕೀಟ-ವೃಕ್ಷಿಕೆಗಳಲ್ಲಿಯೂ ಓತಪ್ರೋತನಾಗಿರುವ ಆ ಪರಾತ್ಪರಪುರುಷನಿಗೆ ಪರಿಪೂರ್ಣವಾದ ಆತ್ಮಸಮರ್ಪಣ. ಈ ಸಮರ್ಪಣವು ಸಮಗ್ರವಾಗಿರಬೇಕು. ಪರಮಾತ್ಮನಿಗೆ ಅರ್ಪಿತವಾಗದ ಯಾವ ಸಂಗತಿಯೂ ನಮ್ಮಲ್ಲಿ ಉಳಿದಿರಕೂಡದು. ಕೋರಿಕೆಯಾಗಲಿ, ಬೇಡಿಕೆಯಾಗಲಿ, ಅಭಿಪ್ರಾಯವಾಗಲಿ, ಹೀಗೇ ಇರಬೇಕು, ಹಾಗೆ ಇರಕೂಡದು, ಇದು ಆಗಬೇಕಾಗಿದ್ದಿತು, ಅದು ಆಗಬಾರದಾಗಿದ್ದಿತು—ಈ ವಿಧವಾದ ಭಾವಗಳೇ ಆಗಲಿ, ನಮ್ಮಲ್ಲಿ ಉಳಿದಿರಕೂಡದು. ಸರ್ವವನ್ನು ಆ ಪರಾತ್ಪರಪುರುಷನಿಗೆ ಸಮರ್ಪಿಸಿ ಬಿಡಬೇಕು. ಹೃದಯವು ಸರ್ವ ಕಾಮಗಳಿಂದಲೂ, ಬುದ್ಧಿಯು ಸ್ವಸಂಕಲ್ಪದಿಂದಲೂ ಪೂರ್ತಿಯಾಗಿ ಮುಕ್ತವಾಗಬೇಕು; ದ್ವಂದ್ವಗಳೆಲ್ಲವನ್ನು ತ್ಯಜಿಸಬೇಕು; ದೃಶ್ಯಾದೃಶ್ಯವಾದ ವಿಶ್ವಪ್ರಪಂಚವು, ನಿಗೂಢ ಶಕ್ತಿಜ್ಞಾನಾನಂದಗಳ ಪರವು ಅಭಿವ್ಯಕ್ತಿಯೆಂದು ಗುರುತಿಸಬೇಕು; ಯಂತ್ರವನ್ನು ನಡಿಸುವವನ ಕೈಯಲ್ಲಿರುವ ಯಂತ್ರವು ಸ್ತಬ್ಧವಾಗಿರುವಂತೆ, ಆತನ ದಿವ್ಯಪ್ರೇಮ, ಶಕ್ತಿ ಮತ್ತು ಪೂರ್ಣ ಜ್ಞಾನವು ತನ್ನ ಕಾರ್ಯವನ್ನು ನೆರವೇರಿಸಿ, ಆತನ ದಿವ್ಯಲೀಲೆಯನ್ನು ಪೂರ್ಣಗೊಳಿಸುವ ಸಲುವಾಗಿ, ನಮ್ಮ ಸಮಗ್ರ ಜೀವಸತ್ತೆಯನ್ನು ನಿವೇದಿಸಿಕೊಳ್ಳಬೇಕು. ಭಗವಂತನ ಉದ್ದೇಶವು, ನಾವು ದಿವ್ಯಜೀವನದ ಪೂರ್ಣಾನಂದವನ್ನು, ಪೂರ್ಣ ಶಾಂತಿ-ಜ್ಞಾನಗಳನ್ನು, ಪೂರ್ಣ ಕರ್ಮಸಿದ್ಧಿಯನ್ನು ಪಡೆಯಬೇಕೆಂದಿರುವದರಿಂದ, ತದಾಶಯಸಿದ್ಧಿಗಾಗಿ ನಾವು ಅಹಂಕಾರವನ್ನು ನಿಶ್ಶೇಷವಾಗಿ ತೊಡೆದುಹಾಕಬೇಕು. ಈ ಸಂಪೂರ್ಣ ಸಮರ್ಪಣ ಭಾವವು ಅಸಂಪೂರ್ಣವಾಗಿಯೇ ಆಗಲಿ ನಮ್ಮಲ್ಲಿ ಪ್ರತಿಷ್ಠಿತವಾದರೆ, (ನಮ್ಮ ಪರವಾಗಿ) ಯೌಗಿಕ ಕ್ರಿಯೆಯ ಆವಶ್ಯಕತೆಯೆಲ್ಲವು ತೊಲಗಿಹೋಗುವದು. ಏಕೆಂದರೆ, ಆ ಸ್ಥಿತಿಯಲ್ಲಿ ನಮ್ಮಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನೇ ಸಾಧಕನೂ ಸಿದ್ಧನೂ ಆಗುವನು; ಆತನ ದಿವ್ಯಶಕ್ತಿ ನಮ್ಮಲ್ಲಿ, ನಮ್ಮ ಕೃತ್ರಿಮ ವಿಧಾನಗಳಿಂದಲ್ಲ, —ತನ್ನ ಪರಿಪೂರ್ಣ ಜ್ಞಾನಸಂಪನ್ನ, ಸರ್ವಶೋಧಕ, ಅಮೋಘಶಕ್ತಿಸಂಪನ್ನ ಪ್ರಕೃತಿಯ ವಿಧಾನವನ್ನನುಸರಿಸಿ, ಕೆಲಸ ಮಾಡುವದು. ಅತ್ಯಂತ ವೀರ್ಯವತ್ತಾದ ರಾಜಯೋಗದ ಸಂಯಮವು, ಅತ್ಯಂತ ಪರಿಣತವಾದ ಪ್ರಾಣಾಯಾಮದ ವಿಧಾನವು, ಅತಿ ತೀಕ್ಷ್ಣವಾದ ಧ್ಯಾನವು, ಅತ್ಯಂತ ಆನಂದಪರವಶತೆಯಿಂದೊಡಗೂಡಿದ ಭಕ್ತಿಯು, ಸ್ವಾರ್ಥದ ಲವಲೇಶವೂ ಇಲ್ಲದ ಕರ್ಮಮಾರ್ಗವು—ಅವು ಎಷ್ಟೇ ಸಮರ್ಥವೂ ಪ್ರಭಾವಿಯೂ ಆಗಿದ್ದರೂ—ಫಲಿತಾರ್ಥದ ದೃಷ್ಟಿಯಿಂದ, ಈ 'ಆತ್ಮಪ್ರಪತ್ತಿ' ಸಾಧನದ ಅಮೋಘ ಕಾರ್ಯವಿಧಾನದ ಮುಂದೆ ಒಟ್ಟಿನಲ್ಲಿ ದುರ್ಬಲವಾಗಿಯೇ ಕಾಣುವವು. ಏಕೆಂದರೆ ಆ ವಿಧಾನಗಳೆಲ್ಲ ಸ್ವಲ್ಪಮಟ್ಟಿಗಾದರೂ ಪರಿಮಿತವಾದ ನಮ್ಮ ಶಕ್ತಿಯಿಂದ

ಬದ್ಧವಾಗಿರುತ್ತವೆ; ಈ ಯೋಗಶಕ್ತಿಯಾದರೋ ಈಶ್ವರಶಕ್ತಿಯೇ ಆಗಿರುವದರಿಂದ ಅದಕ್ಕೆ ಅನಂತ ಸಾಮರ್ಥ್ಯವಿರುವದು. ಈ ಶಕ್ತಿಗೆ ಆತನ ಸಂಕಲ್ಪದ ಸೀಮೆಯೇ ಸೀಮೆ; ಲೋಕಕ್ಕೆ ಹಾಗೂ ಇಹ-ಪರಗಳಲ್ಲಿ ಪ್ರತಿ ಜೀವಾತ್ಮನಿಗೆ ಯಾವದು ಶ್ರೇಯಸ್ಕರವೆಂಬುದನ್ನು ಆ ಸಂಕಲ್ಪವೇ ಅರಿತಿರುವದು.

ಈ ಯೋಗದ ಪ್ರಾರಂಭವಿಧಾನವು, ಆತ್ಮಸಮರ್ಪಣೆಯನ್ನು ಮಾಡುವೆನೆಂದು ಸಂಕಲ್ಪಿಸುವದು; ಹೃತ್ಪೂರ್ವಕವಾಗಿ, ಸರ್ವಶಕ್ತಿಸಹಿತವಾಗಿ ತನ್ನನ್ನು ಭಗವಂತನ ಕರಕಮಲಗಳಲ್ಲಿ ಸಮರ್ಪಿಸಿಕೊಳ್ಳುವದು. ಯಾವ ವಿಧವಾದ ನಿರ್ಬಂಧಗಳನ್ನೂ ವಿಧಿಸಬೇಡ; ಯಾವದನ್ನೂ ಕೋರಬೇಡ; ಯೋಗಸಿದ್ಧಿಯನ್ನು ಕೂಡ ಬಯಸಬೇಡ; ನಿನ್ನಲ್ಲಿಯೂ, ನಿನ್ನ ಮೂಲಕವಾಗಿಯೂ ಆತನ ಸಂಕಲ್ಪವು ಪ್ರತ್ಯಕ್ಷವಾಗಿ ನೆರವೇರಲೆಂದು ಮಾತ್ರ ಬೇಡು. ಪರಮಾತ್ಮನು ಯಾರು ಏನನ್ನು ಬೇಡುವರೋ ಅವರಿಗೆ ಅದನ್ನು ಕೊಡುವನು; ಆದರೆ ಆತ್ಮಾರ್ಪಣೆಯನ್ನು ಮಾಡಿ ನಿಷ್ಕಾಮಿಗಳಾಗಿರುವವರಿಗೆ ಆತನು ಅವರು ಬೇಡಬಹುದಾಗಿದ್ದುದನ್ನೂ ಅವರಿಗೆ ಅವಶ್ಯವಾಗಿರಬಹುದಾದ ಸಕಲವನ್ನೂ ಕೊಡುವನಲ್ಲದೆ, ತನ್ನನ್ನೂ, ತನ್ನ ಪ್ರೇಮದ ವರಪ್ರಸಾದಗಳನ್ನೂ ತಾನಾಗಿಯೆ ನೀಡುವನು.

ಯೋಗದ ಎರಡನೆಯ ವಿಧಾನವು, ನೀನು ತಟಸ್ಥನಾಗಿದ್ದು, ಭಗವಚ್ಛಕ್ತಿಯು ನಿನ್ನಲ್ಲಿ ಹೇಗೆ ಕೆಲಸ ಮಾಡುತ್ತಿದೆ ಎನ್ನುವದನ್ನು ನಿರೀಕ್ಷಿಸುವದಾಗಿದೆ. ಈ ಕಾರ್ಯ ನಡೆದಾಗ 'ಆಧಾರ'ದಲ್ಲಿ ಹಲವು ಸಲ ಚಲವಿಚಲವೂ ಕ್ಷೋಭೆಯೂ ಉಂಟಾಗುವವು; ಆದುದರಿಂದ ಆ ಪರಾತ್ಪರಪುರುಷನಲ್ಲಿ ವಿಶ್ವಾಸವು ಅತ್ಯವಶ್ಯ. ಆದರೆ ಅನನ್ಯವಾದ ವಿಶ್ವಾಸವು ಒಮ್ಮೆಲೆ ಸಿದ್ಧಿಸುವದು ದುರ್ಲಭ. ಏಕೆಂದರೆ ನಿನ್ನಲ್ಲಿ ಯಾವ ವಿಧವಾದ ಮಾಲಿನ್ಯವಿದ್ದರೂ—ಅದು ಪ್ರಕಟವಾಗಿರಲಿ, ಅಪ್ರಕಟವಾಗಿರಲಿ—ಪೂರ್ತಿಯಾಗಿ ನಿರ್ಮೂಲನವಾಗುವ ವರೆಗೆ ಆಗಾಗ್ಗೆ ತಲೆಯೆತ್ತಿ, ತಿರುತಿರುಗಿ ಬರುವ ಸಂಭವವಿದೆ.

ಈ ಯುಗದಲ್ಲಿ 'ಸಂಶಯ'ವು ಲೋಕಸಾಮಾನ್ಯವಾದ ಮಾಲಿನ್ಯವು. ಅದು ನಿನ್ನನ್ನಾವರಿಸಿದಾಗಲೂ ತಟಸ್ಥಭಾವವನ್ನು ವಹಿಸಿ, ಅದು ತೊಲಗುವ ವರೆಗೆ ಸುಮ್ಮನಿರು; ಅಂಥ ಸಮಯಗಳಲ್ಲಿ, ಈ ಮಾರ್ಗದಲ್ಲಿ ಮುಂದುವರಿದಿರುವವರ ಸತ್ಸಂಗವು ಲಭಿಸಿದರೆ ಅದರ ಲಾಭವನ್ನು ಹೊಂದು; ಅದು ದುರ್ಲಭವಾದಾಗ ಈ ಯೋಗದ ಮೂಲಸೂತ್ರವಾದ ಆತ್ಮಾರ್ಪಣೆಯನ್ನು ದೃಢತರವಾಗಿ ಅವಲಂಬಿಸು. ಅಂತಃಕ್ಲೇಶಗಳು ಸಂಭವಿಸಿದಾಗಲೂ ಬಾಹ್ಯವಿಪತ್ತುಗಳು ಎರಿ ಬಂದಾಗಲೂ, ಕೆಳಗಿನ ಗೀತೋಕ್ತಿಗಳನ್ನು ನೆನೆ :—

**"ಮಚ್ಚಿತ್ತಸ್ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ॥"**

(ನನ್ನಲ್ಲಿ ನಿನ್ನ ಮನಸ್ಸನ್ನು ಸಮರ್ಪಿಸಿ, ನನ್ನ ಅನುಗ್ರಹದಿಂದ ಸಮಸ್ತ ಕಷ್ಟಗಳಿಂದಲೂ ಪಾರಾಗಬಲ್ಲೆ) ಹಾಗೂ

**"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥**

(ಸಮಸ್ತ ಧರ್ಮಗಳನ್ನು—ಪೂರ್ವಾಭ್ಯಾಸ ಬಲದಿಂದಾಗಲಿ, ನಂಬಿಕೆಯಿಂದಾಗಲಿ, ಬಾಹ್ಯನಿರ್ಬಂಧಗಳಿಂದಾಗಲಿ ಅನುಸರಿಸಲ್ಪಡುತ್ತಿರುವ ಶಾಸ್ತ್ರಗಳು, ವಿಧಿಗಳು, ನಿಬಂಧನೆಗಳು, ಸ್ಮೃತಿಗಳು ಮೊದಲಾದವುಗಳನ್ನು ಪರಿತ್ಯಜಿಸಿ ನನ್ನನ್ನೇ ಏಕೈಕಶರಣ್ಯನನ್ನಾಗಿ ಆಶ್ರಯಿಸು. ನಾನು ನಿನ್ನನ್ನು ಸರ್ವ ದುರಿತಗಳಿಂದ ಬಿಡುಗಡೆ ಮಾಡುವೆನು, ದುಃಖಿಸಬೇಡ.)

"ನಾನು ಬಿಡುಗಡೆ ಮಾಡುವೆನು." ಈ ವಿಷಯದಲ್ಲಿ ಬಾಧ್ಯತೆ ನಿನ್ನದೇ ಎಂದು ಭಾವಿಸಿ, ಅಥವಾ ಫಲವು ಸ್ವಪ್ರಯತ್ನವನ್ನೇ ಅವಲಂಬಿಸಿದೆಯೆಂದು ಭ್ರಮಿಸಿ, ಕ್ಲೇಶಕ್ಕೊಳಗಾಗಿ ಕಷ್ಟಪಡಬೇಕಾದ ಅವಶ್ಯಕತೆಯಿಲ್ಲ. ನಿನಗಿಂತಲೂ ಬಲವತ್ತರವಾದ ಶಕ್ತಿಯು ಇದರ ಭಾರವನ್ನು ಹೊತ್ತಿರುವದು. ರೋಗವಾಗಲಿ, ವಿಪತ್ತಾಗಲಿ, ನಿನ್ನಲ್ಲಿರುವ ಪಾಪ ಮಾಲಿನ್ಯಗಳು ತಲೆಯೆತ್ತುವದಾಗಲಿ ನಿನ್ನನ್ನು ಭಯಭೀತನನ್ನಾಗಿ ಮಾಡಕೂಡದು. ನೀನು ಆ ಪರಮಾತ್ಮನನ್ನೇ ದೃಢವಾಗಿ ನಂಬಿರು. "ನಿನ್ನನ್ನು ಸರ್ವ ಪಾಪಗಳಿಂದಲೂ ಕೆಡಕುಗಳಿಂದಲೂ ವಿಮುಕ್ತನನ್ನಾಗಿ ಮಾಡುವೆನು." ಈ ಬಿಡುಗಡೆಯು ಹಠಾತ್ತಾದ ಅದ್ಭುತ ಚಮತ್ಕಾರದಿಂದ ಸಂಭವಿಸದು. ಅದು ಕ್ರಮವಾದ ಶುದ್ಧಿವಿಧಾನದಿಂದ ಸಿದ್ಧಿಸುವದು. ಇಂಥ ದೋಷಗಳು ಹೊರಬೀಳುವದು ಆ ಶುದ್ಧಿವಿಧಾನದ ಭಾಗಗಳು. ಬಹುಕಾಲದಿಂದ ಕಸ ಗುಡಿಸದೆ ಇದ್ದ ಕೋಣೆಯನ್ನು ಉಡುಗುವದಕ್ಕೆ ಪ್ರಾರಂಭಿಸಿದೊಡನೆ ಮೇಘಾಕಾರವಾಗಿ ಏಳುವ ಧೂಳಿಯಂತೆ ಇವು ಮುಸುಕುವವು. ಇದರಿಂದ ನಿನಗೆ ಉಸುರುಕಟ್ಟಿದಂತಾದರೂ, ನಿನ್ನ ಪ್ರಯತ್ನವನ್ನು ದೃಢವಾಗಿ ಮುಂದುವರಿಸು. "ಮಾ ಶುಚಃ |"

ತಾಟಸ್ಥ್ಯವನ್ನು ವಹಿಸುವದಕ್ಕಾಗಿ, ನೀನು ಕೇವಲ ಸಾಕ್ಷಿಮಾತ್ರನಾಗಿದ್ದು (ದ್ರಷ್ಟಾ), ಭಗವಂತನ ಕಾರ್ಯಕ್ಕೆ ಅನುಮತಿಸಿ (ಅನುಮಂತಾ), 'ಆಧಾರ'ವನ್ನು ಎತ್ತಿಹಿಡಿದು (ಭರ್ತಾ), ಭಗವಂತನು ಅನುಗ್ರಹಿಸುವ ಫಲವನ್ನು ಅನುಭವಿಸುವ (ಭೋಕ್ತಾ) 'ಪುರುಷ'ಮಾತ್ರನನ್ನಾಗಿ ನಿನ್ನನ್ನು ತಿಳಿಯಬೇಕು. ಕರ್ಮವು ಭಗವಂತನಿಂದ ಶಕ್ತಿರೂಪದಲ್ಲಿ, ಅಂದರೆ ಕಾಲಿಯಿಂದ ಆಚರಿಸಲ್ಪಟ್ಟು, ಆಕೆಯಿಂದ ಶ್ರೀಕೃಷ್ಣನಿಗೆ ಯಜ್ಞರೂಪವಾಗಿ ಸಮರ್ಪಿತವಾಗುತ್ತಿರುವದು. ನೀನು ಯಜ್ಞವು ಸಾಂಗವಾಗುವದನ್ನು ನೋಡುವ ಯಜಮಾನನು; ಯಜ್ಞಾಂಗವಾದ ಪ್ರತಿಕ್ರಿಯೆಗೂ ನಿನ್ನ ಸಾನ್ನಿಧ್ಯವಾವಶ್ಯಕವು; ಯಜ್ಞಫಲಗಳನ್ನು ಅನುಭವಿಸುವವನೂ ನೀನೇ-'ಆಧಾರ'ವೇನೆಂಬುವನ್ನರಿತರೆ, ನಿನ್ನಿಂದ ನೀನು ಈ ರೀತಿ ಬೇರ್ಪಡುವದು, ಕರ್ತೃತ್ವಾಭಿಮಾನದ ತ್ಯಾಗವು ಸುಲಭತರವಾಗುವವು. ಮನಸ್ಸಿನ ಶ್ರೇಷ್ಠತಮ ಅವಸ್ಥೆಯಾದ ಬುದ್ಧಿಯ ಮೇಲ್ಗಡೆಗೆ ಇನ್ನೂ ಶ್ರೇಷ್ಠತರ ಬುದ್ಧಿಯು, ಎಂದರೆ ವಿಜ್ಞಾನವು ಇದೆ; ಇದು ಸತ್ಯಧರ್ಮದ ಎಂದರೆ ಜ್ಞಾನಸತ್ಯ-ಭಾವಸತ್ಯ-ಕ್ರಿಯಾಸತ್ಯಗಳ ಪೀಠವಾಗಿದೆ. ಈ ವಿಜ್ಞಾನಮಯ ಕೋಶದ ಮೇಲ್ಗಡೆ ಆನಂದಮಯ ಕೋಶವಿದೆ; ಇದು ನಿನ್ನಲ್ಲಿರುವ ಭಗವದಂಶದ ಸ್ಥಾನವು. ಈ ವಿಜ್ಞಾನಾನಂದಗಳ ವಿಷಯದಲ್ಲಿಯೇ ಭಗವಾನ್ ಯೇಸುವು "ನಿನ್ನಲ್ಲಿರುವ ಪರಮಾತ್ಮನ ರಾಜ್ಯ"ವೆಂದು ವರ್ಣಿಸಿರುವನು. ಪ್ರಕೃತದಲ್ಲಿ ನಾವು ನಮ್ಮೊಳಗಿನ ಕೆಳಗಿನ ಚಲನಗಳಲ್ಲಿ (ಎಂದರೆ ಅನ್ನಮಯ, ಪ್ರಾಣಮಯ, ಮನೋಮಯ ಕೋಶಗಳಲ್ಲಿ ಮಾತ್ರ) 'ಜಾಗ್ರತ'ರಾಗಿರುತ್ತೇವೆ; ವಿಜ್ಞಾನಾನಂದಮಯ ಕೋಶಗಳಲ್ಲಿ 'ಸುಷುಪ್ತ'ರಾಗಿರುತ್ತೇವೆ. ನಾವು ಈ ಮೇಲಣ ಚೈತನ್ಯಭೂಮಿಕೆಗಳನ್ನು ನಮ್ಮಲ್ಲಿ ಜಾಗೃತಗೊಳಿಸಬೇಕಾಗಿದೆ. ಅವು ಜಾಗೃತವಾಗಿ ಸಾಂಕರ್ಯವಿಲ್ಲದೆ ಕಾರ್ಯ ಮಾಡತೊಡಗುವದೇ ಯೋಗಸಿದ್ಧಿಯು. ಇದು ಪ್ರಾಪ್ತವಾದಾಗ ನಾವು "ಮಯಿ ನಿವಸಿಷ್ಯಸ್ಯೇವ" (ನನ್ನಲ್ಲಿ ಖಂಡಿತವಾಗಿ ವಾಸ ಮಾಡುವಿ) ಎಂದು ಗೀತೆಯಲ್ಲಿ ಶ್ರೀಕೃಷ್ಣನಿಂದ ಉಕ್ತವಾದ ಸ್ಥಿತಿಯನ್ನು ಐದುವೆವು. ಇದೊಮ್ಮೆ ಸಾಧ್ಯವಾಯಿತೆಂದರೆ, ನಾವು ಮುಕ್ತರು—ಕೃತಾರ್ಥರು; ಆಗ ನಾವು ಪ್ರಯತ್ನಿಸಿದುದೆಲ್ಲ ಸಫಲವಾಗುವದು.

(ಮುಂದುವರಿಯುವದು.)

—ಶ್ರೀ ಅರವಿಂದರು

ಅನುವಾದಕರು:

ಶ್ರೀ. ಎಂ. ಎಲ್. ನಾರಾಯಣಶಾಸ್ತ್ರಿ

ಶ್ರೀ. ರಾಮಚಂದ್ರ ವಿಸೀತ

# ಮಾತೃವಾಣಿ

(“Words of the Mother”—Second Series ಎಂಬ ಶ್ರೀ ತಾಯಿಯವರ ವಚನಸಂಗ್ರಹದೊಳಗಿನ “Love” (ಪ್ರೇಮ) ಎಂಬ ಮೊದಲನೆಯ ವಿಭಾಗದ ಸರಲಾನುವಾದವಿದು.)

## ಪ್ರೇಮ

ದೇವರನ್ನು ಪ್ರೀತಿಸುವವನು ನಿಜವಾಗಿಯೂ ಸುಖಿಯು. ಯಾಕಂದರೆ ಆತನೊಡನೆ ದೇವರು ಯಾವಾಗಲೂ ಇರುತ್ತಾನೆ. (೭—೩—೩೭)

* * * *

ದೈವೀ ಪ್ರೇಮವೊಂದರಲ್ಲಿಯೇ ಹೆಚ್ಚು ಒಲವಿರಲಿ. ದೈವೀ ಪ್ರೇಮವನ್ನು ಪಡೆದಾತನಿಗೆ ಮಾನವಪ್ರೆಮವು ಎಷ್ಟರದು ? (೨—೯—೩೯)

* * * *

ಮಾನವಪ್ರೇಮದ ಹಿಂದೆ ಯಾವಾಗಲೂ ಒಂದು ಕಹಿರುಚಿ ಇರುತ್ತದೆ. ದೈವೀ ಪ್ರೇಮವು ಮಾತ್ರ ಎಂದೂ ನಿರಾಶೆಗೆಡೆಗೊಡುವದಿಲ್ಲ. (೫—೫—೪೫)

* * * *

ನಿನ್ನ ನಿಷ್ಕಪಟ ಅಭೀಪ್ಸೆಗೆ ಆ ಪ್ರೇಮವು ತಾನಾಗಿ ‘ಓ’ಗೊಡುತ್ತದೆ. (೨೦–೧೦–೩೪)

* * * *

ಸ್ಥಿರಚಿತ್ತದ ಗಭೀರ ಶಾಂತಿಯಲ್ಲಿ, ಪ್ರೇಮವು ಶುದ್ಧ-ಅಚಲ ಐಕ್ಯಸ್ವರೂಪದಲ್ಲಿ ತನ್ನ ಪೂರ್ಣ ವಿಕಾಸವನ್ನು ಪಡೆಯುತ್ತದೆ. (೫–೧೦—೩೪)

* * * *

ಕಠಿಣ ತಪಸ್ಸಿಗಿಂತಲೂ ನಿಜವಾದ ಪ್ರೇಮ ಮತ್ತು ಅರ್ಪಣಗಳು ನಮ್ಮನ್ನು ದೇವರತ್ತ ಬಹು ಬೇಗನೆ ಕರೆದೊಯ್ಯುತ್ತವೆ. (೨೬–೪—೩೭)

* * * *

ನಿನ್ನೊಳಗಿನ ಚೈತ್ಯಾಂತರದ ಅರಿವಿನಲ್ಲಿ ಬಾಳನ್ನು ನಡೆಯಿಸು. ಆಗ ನಿನ್ನ ಸಂಕಲ್ಪವು ದೇವರ ಸಂಕಲ್ಪವನ್ನೇ ಪ್ರಕಟಪಡಿಸುತ್ತದೆ. ಈ ರೀತಿ ಮಾರ್ಪಾಟು ಹೊಂದಿದ ನಿನ್ನ ಜೀವಭಾವವು ದೈವೀ ಪ್ರೇಮವನ್ನು ಅಳವಡಿಸಿಕೊಳ್ಳಲೂ ಪ್ರಕಾಶಕ್ಕೆ ತರಲೂ ಶಕ್ತಿಯುಳ್ಳದ್ದಾಗುತ್ತದೆ. (೨೫–೯—೩೪)

* * * *

ಹೃದಯದ ದೇಗುಲದಲ್ಲಿ ಒಳಗೆ ದೂರ ಪ್ರವೇಶಿಸು; ಅಲ್ಲಿ ನೀನು ನನ್ನನ್ನು ಕಾಣುವೆ. (೧೧–೨—೩೮)

ಅನುವಾದಕರು:

**ಬಿ. ಎಸ್. ಕುಲಕರ್ಣಿ, ಧಾರವಾಡ**

# ಶ್ರೀ ಮಾತೆಯವರ ಧ್ಯಾನ-ಪ್ರಾರ್ಥನೆಗಳು

**ಜೂನ್ ೯, ೧೯೧೪**

ಹೇ ಪ್ರಭು, ದಿವ್ಯ ಮಿಲನದ ಪ್ರದೀಪ್ತಾಗ್ನಿಯಿಂದ ಪ್ರಕಾಶಿಸುವ ನಿವೇದನ-ವಸ್ತುವಾಗಿ ನಿನ್ನೆದುರಿನಲ್ಲಿದ್ದೇನೆ.

ಹೀಗೆ ನಿನ್ನ ಎದುರಿಗೆ ಇರುವ ಅದು ಈ ಮನೆಯ ಎಲ್ಲ ಕಲ್ಲುಗಳಾಗಿದೆ, ಹಾಗೂ ಒಳಗಿರುವ ಎಲ್ಲ ವಸ್ತುಗಳಾಗಿದೆ; ಈ ಮನೆಯ ಹೊಸತಿಲನ್ನು ದಾಟುವ ಎಲ್ಲ ಜನವೂ ಆಗಿದೆ; ಅದನ್ನು ನೋಡುವ, ಮತ್ತು ಒಂದಿಲ್ಲ ಒಂದು ರೀತಿಯಲ್ಲಿ ಅದಕ್ಕೆ ಸಂಬಂಧಪಟ್ಟ ಎಲ್ಲರೂ, ಅಂದರೆ ಹತ್ತಿರಹತ್ತಿರದಲ್ಲಿ ಅದು ಇಡಿ ವಿಶ್ವವೇ ಆಗಿದೆ.

ನಿನ್ನ ಜ್ಯೋತಿ–ಪ್ರೀತಿಗಳಿಂದ ಹೆಚ್ಚು ಹೆಚ್ಚು ಓತಪ್ರೋತವಾಗುತ್ತಿರುವ ಈ ಪ್ರದೀಪ್ತ ಕೇಂದ್ರದಿಂದ ನಿನ್ನ ಶಕ್ತಿಗಳು ಇಡಿ ಪೃಥ್ವಿಯ ಮೇಲೆ ಪ್ರತ್ಯಕ್ಷವಾಗಿ-ಅಪ್ರತ್ಯಕ್ಷವಾಗಿ ಪ್ರಸರಿಸಿ, ಜನರ ಹೃದಯ-ವಿಚಾರಗಳಲ್ಲಿ ಪ್ರವೇಶಿಸುವವು.

ನಿನಗಾಗಿರುವ ನನ್ನ ಅಭೀಪ್ಸೆಗೆ ಪ್ರತಿಯಾಗಿ ನೀನು ಇಂಥ ಭರವಸೆಯನ್ನು ನನಗೆ ದಯಪಾಲಿಸಿರುವಿ.

ಪ್ರೇಮದ ಒಂದು ಪ್ರಚಂಡ ತರಂಗವು ಎಲ್ಲೆಲ್ಲೂ ಇಳಿದು ಬರುತ್ತಿದೆ; ಎಲ್ಲವನ್ನೂ ವ್ಯಾಪಿಸುತ್ತಿದೆ.

ಶಾಂತಿ, ಪ್ರಪಂಚದಲ್ಲೆಲ್ಲ ಶಾಂತಿ, ವಿಜಯ, ಸಮೃದ್ಧಿ, ಅದ್ಭುತ !

ದುಃಖಿಗಳಾದ—ಅಜ್ಞಾನಿಗಳಾದ ಹೇ ಮುದ್ದು ಮಕ್ಕಳೆ, ಮತ್ತು ವಿರೋಧ-ಕಲಹಾಸಕ್ತ ಪ್ರಕೃತಿಯೇ, ನಿಮ್ಮ ಹೃದಯವನ್ನು ತೆರೆಯಿರಿ, ನಿಮ್ಮ ಶಕ್ತಿಯ ಆವೇಗವನ್ನು ಶಾಂತಗೊಳಿಸಿರಿ; ಸರ್ವಶಕ್ತಿಮಯವಾದ ದಿವ್ಯಪ್ರೇಮವೇ ನಿಮ್ಮ ಬಳಿಸಾರುತ್ತಿದೆ, ದಿವ್ಯಪ್ರಕಾಶದ ವಿಶುದ್ಧಕಾಂತಿಯೇ ನಿಮ್ಮನ್ನು ತೀವುತ್ತಿದೆ. ಮಾನವೀಯ-ಪಾರ್ಥಿವ ಜೀವನದಲ್ಲಿಯ ಈ ಮುಹೂರ್ತವು ಉಳಿದೆಲ್ಲ ಮುಹೂರ್ತಗಳಿಗಿಂತ ಮಾಂಗಲ್ಯಕರವಾದುದು; ಎಲ್ಲರೂ–ಪ್ರತಿಯೊಬ್ಬರೂ ಇದನ್ನು ತಿಳಿದು, ಒದಗಿಬಂದ ಈ ಸಮೃದ್ಧಿಯನ್ನು ಆಸ್ವಾದಿಸಲಿ.

ವಿಷಣ್ಣ ಹೃದಯುಗಳೆ ! ಚಿಂತೆಯಿಂದ ಸುಡುವ ಮಸ್ತಕಗಳೆ ! ಮೂಢ ಅಂಧಕಾರವೆ ! ಅಜ್ಞಾನಿಯಾದ ದುರಿಚ್ಛೆಯೇ ! ನಿಮ್ಮ ಕ್ಲೇಶವು ಶಾಂತವಾಗಲಿ ಹಾಗೂ ಅಳಿದುಹೋಗಲಿ.

ಇದೇ—ಇದೀಗ ಬರುತ್ತಿರುವ ಕಾಂತಿಯುತ ನವಮಂತ್ರ:

**" ನಾನು ಇಲ್ಲಿರುವೆ "**

* * * *

## ಸಮರ್ಪಣ

**ಜೂನ್ ೧೧, ೧೯೧೪**

ಹೇ ಪ್ರಭು, ದಿನಬೆಳಗು ನಿನ್ನೆಡೆಗೆ ಅನಂತಮುಖವಾದ ವಂದನೆ ಒಳಗಿನಿಂದೇಳುತ್ತಿದೆ; ಇದು ಜೀವಸತ್ತೆಯ ಎಲ್ಲ ಅವಸ್ಥೆಗಳು, ಆ ಅವಸ್ಥೆಗಳ ಸಕಲ ಅಂಶಗಳು ಸಲ್ಲಿಸುವ ವಂದನೆಯಾಗಿದೆ. ಇದು ಸರ್ವೇಶ್ವರನಿಗೆ ಸರ್ವಸ್ವದ ಪ್ರತಿದಿನದ ನಿವೇದನೆಯಾಗಿದೆ, ನಿನ್ನ ಜ್ಯೋತಿ–ಪ್ರೀತಿಗಳಿಗೆ ಅಜ್ಞಾನ-ಅಹಂಕಾರಗಳ ಅರಿಕೆಯಾಗಿದೆ. ಇದಕ್ಕೆ ನಿನ್ನಿಂದ ಅನವರತವಾದ ಪ್ರತ್ಯುತ್ತರ ಬರುತ್ತಿದೆ—ಸರ್ವರಿಗೆ ಸಮಗ್ರವಾಗಿ ಪ್ರತೀತವಾಗುವ ರೀತಿಯಲ್ಲಿ: ಎಲ್ಲವೂ ಪ್ರಕಾಶಮಯ–ಪ್ರೇಮಮಯವಾಗಿದೆ; ಅಜ್ಞಾನ–ಅಹಂಕಾರಗಳು ಕರಗಿ ಕಾಣದಾಗುವ ವೃಥಾಭಾಸಗಳಾಗಿವೆ.

ಎಲ್ಲವನ್ನೂ ನಿನ್ನ ಘನಶಾಂತಿಯು, ನಿರ್ಭರ ಸ್ಥೈರ್ಯವು ಆಚ್ಛಾದಿಸಿದೆ.

*    *    *    *

**ಜೂನ್ ೧೨, ೧೯೧೪**

ನನ್ನ ಪ್ರಿಯ ಸ್ವಾಮಿಯೆ, ಅಮರ ತೇಜವೆ, ಶಾಂತಿಯಲ್ಲಿ-ನೀರವತೆಯಲ್ಲಿ ನಿನ್ನಲ್ಲಿಯೇ ವಿಲೀನ ಹೊಂದಿ ಹೀಗೆ ಹೇಳಬಲ್ಲೆ: "ಇಡಿಯುದರಲ್ಲಿಯಂತೆ ಬಿಡಿವಿವರಗಳಲ್ಲಿಯೂ ನಿನ್ನ ಇಚ್ಛೆಯು ಕೈಗೂಡಲಿ." ನಿನ್ನ ಸಾಮ್ರಾಜ್ಯವನ್ನು ವಶಪಡಿಸಿಕೊಳ್ಳು, ನಿನ್ನನ್ನು ವಿರೋಧಿಸುವ ಎಲ್ಲವನ್ನೂ ನಿಯಂತ್ರಿಸು, ನಿನ್ನನ್ನರಿಯದ ಆತ್ಮಗಳಿಗೆ, ನಿನಗಧೀನವಾಗಿ ನಿನಗರ್ಪಿತವಾಗಲು ಒಲ್ಲದ ಬುದ್ಧಿಗಳಿಗೆ ಸಂತಸ ನೀಡು. ಸುಪ್ತ ಶಕ್ತಿಗಳನ್ನು ಎಚ್ಚರಿಸು, ಧೈರ್ಯವನ್ನು ಪ್ರಚೋದನಗೊಳಿಸು, ನಮ್ಮ ಅಂತರಂಗವನ್ನು ಬೆಳಗಿಸು; ಹೇ ಪ್ರಭು, ದಿವ್ಯಮಾರ್ಗವನ್ನು ತೋರಿಸು.

ನನ್ನ ಹೃದಯವು ಘನವಾದ ಶಾಂತಿಯಿಂದ ತುಂಬಿತುಳುಕುತ್ತಿದೆ; ನನ್ನ ಮನಸ್ಸು ನೀರವ–ನಿಶ್ಚಲ ಸ್ಥಿತಿಯನ್ನೈದಿದೆ. ಇರುವ–ಆಗಲಿರುವ–ಇರದಿರುವ ವಸ್ತುಜಾತದ ಹಿಂದೆ—ಆಳದಲ್ಲಿ—ನಿನ್ನ ದಿವ್ಯವೂ ಅವಿಕಾರಿಯೂ ಆದ ಮಂದಹಾಸವಿದೆ.

ಅನುವಾದಕರು:
**ಶ್ರೀ. ಹ. ಮ. ಬಬಲೇಶ್ವರ**

---

"ನಿಜವಾದ ಸಮರ್ಪಣವು ನಿನ್ನನ್ನು ವ್ಯಾಪಕಗೊಳಿಸುವುದು; ನಿನ್ನ ಸಾಮರ್ಥ್ಯವನ್ನು ಹೆಚ್ಚಿಸುವುದು; ನಿನ್ನ ಕೆಲಸಗಳಲ್ಲಿ ಗುಣ ಹಾಗೂ ಮೊತ್ತ, ಎರಡೂ ಹೆಚ್ಚಾಗುವಂತೆ ಮಾಡುವುದು;—ನೀನು ಸ್ವತಃ ಇವನ್ನು ಪಡೆಯಲು ಎಂದೂ ಸಾಧ್ಯವಿರಲಿಲ್ಲ."

**—ಶ್ರೀ ತಾಯಿಯವರು**

# ವರ್ಷಾರಂಭದ ಪ್ರಾರ್ಥನೆಗಳು

ಪಾಂಡಿಚೇರಿಯ ಶ್ರೀ ಅರವಿಂದಾಶ್ರಮದಲ್ಲಿ ತಾಯಿಯವರು ಪ್ರತಿವರುಷದ ಆರಂಭದಲ್ಲಿ ಹೊಸ ವರುಷಕ್ಕಾಗಿ ಪ್ರಾರ್ಥನೆಗಳನ್ನು ಪ್ರಕಟಿಸುತ್ತಾರೆ. ಜಾಗತಿಕ ಘಟನೆಗಳು, ಆಧ್ಯಾತ್ಮ ಸಾಧನೆಯ ಮುನ್ನಡೆ, ಸಾಧನೆಯಲ್ಲಿಯ ವಿಶೇಷ ಅನುಭವಗಳು-ಸನ್ನಿವೇಶಗಳು, ಇವುಗಳಿಗೆ ಅನುಗುಣವಾಗುವಂತೆ ಈ ಪ್ರಾರ್ಥನೆಗಳಿರುತ್ತವೆ. ಆಶ್ರಮದ ಸಾಧಕರಿಗೆ, ಅನುಯಾಯಿಗಳಿಗೆ ಈ ಪ್ರಾರ್ಥನೆಗಳು ವರುಷಾರಂಭದಲ್ಲಿ ಹೊಸ ಬೆಳಕನ್ನು, ಮಾರ್ಗದರ್ಶನವನ್ನು, ಸಮಾಧಾನವನ್ನು ತರುತ್ತಿವೆ. ಕಾಲಾನುಕ್ರಮದಲ್ಲಿ ಅವು ಒಂದು ಬಗೆಯ ಮನನೀಯ ಲಿಖಿತಗಳಾಗಿ ಉಳಿಯುವ ಸಂದೇಹವಿಲ್ಲ. ೧೯೪೫ನೆಯ ವರುಷ ಡಿಸೆಂಬರ ತಿಂಗಳು ೩೧ನೆಯ ದಿನಾಂಕದ ಮಧ್ಯರಾತ್ರಿ ಕಳೆಯುವ ಹೊತ್ತಿಗೆ, ಮೇಲುಪ್ಪರಿಗೆಯ ಅಂಗಣದಿಂದ, ಉಚ್ಚ ಕಂಠವಲ್ಲಿ ಹಾಗೂ ಭಾವಪೂರ್ಣ ಧ್ವನಿಯಲ್ಲಿ ತಾಯಿಯವರು ಹೊಸ ವರುಷದ ಪ್ರಾರ್ಥನೆಯನ್ನು ಓದುತ್ತಿರುವಾಗ ಅಲ್ಲಿ ಇರುವ ಭಾಗ್ಯ ನನಗೆ ದೊರೆತಿತ್ತು. ತಾಯಿಯವರ ಪ್ರಾರ್ಥನಾವಾಚನದಿಂದ ನನ್ನಲ್ಲಿ ವಿದ್ಯುತ್ಸಂಚಾರವಾದಂತೆ ಭಾಸವಾಯಿತು, ಆಶ್ರಮವನ್ನು ನಾನು ಸಂದರ್ಶಿಸಿದ್ದು ಅದು ಮೊದಲನೆಯ ಸಲ. ಆ ಮೊದಲ ಅನುಭವವು ನನ್ನ ಜೀವನದಲ್ಲಿ ಹೊಸ ಬೆಳಕನ್ನೇ ತಂದಿದೆ. ೧೯೪೫ರಲ್ಲಿ ಜಾಗತಿಕ ಯುದ್ಧ ಕೊನೆಗೊಂಡು, ಶಾಂತಿಯ ಒಡಂಬಡಿಕೆಗೆ ರಂಗ ಸಿದ್ಧವಾಯಿತು. ಹೊರಗಣ್ಣಿಗೆ ತೋರುವ ಶಾಂತಿಯ ಗರ್ಭದಲ್ಲಿ ಏನೇನು ಅಡಗಿತ್ತೆಂಬುದನ್ನು ನಾವೆಲ್ಲ ಈಗ ಅರಿತಿದ್ದೇವೆ; ಅನುಭವಿಸುತ್ತಿದ್ದೇವೆ. ಪಾಶವೀ ಶಕ್ತಿಗಳ ತಾಕಲಾಟದಲ್ಲಿ ಒಂದು ಘಟ್ಟವನ್ನು ಮಾತ್ರ ಆ ಒಡಂಬಡಿಕೆ ಸೂಚಿಸುತ್ತಿದೆಯೆಂಬುದು ಇಂದು ಎಲ್ಲರಿಗೂ ಸ್ಪಷ್ಟವಾಗಿದೆ. ತೋರಿಕೆಯ ಆ ಶಾಂತಿಯ ಒಡಂಬಡಿಕೆಯನ್ನು ಅನುಲಕ್ಷಿಸಿ ದೈವೀ ಶಕ್ತಿಯ ನಿಜವಾದ ಪ್ರತಿಷ್ಠಾಪನೆಯ ಆವಾಹನ ಮಾಡುವ ರೀತಿಯಲ್ಲಿ ೧೯೪೬ರ ಪ್ರಾರ್ಥನೆ ಒಡಮೂಡಿ ಬಂದಿದೆ. ಅದು ಇಂತಿದೆ:

**"ಪ್ರಭು, ನಿನ್ನ ಶಾಂತಿ ನಮಗಿರಲಿ; ಶಾಂತಿಯ ಆಭಾಸ ಬೇಡ. ನಿನ್ನ ಸ್ವಾತಂತ್ರ್ಯವಿರಲಿ; ಸ್ವಾತಂತ್ರ್ಯದ ಆಭಾಸ ಬೇಡ. ನಿನ್ನ ಏಕತೆ ಇರಲಿ; ಏಕತೆಯ ಆಭಾಸ ಬೇಡ. ಏಕೆಂದರೆ ನಿನ್ನ ಶಾಂತಿ, ಸ್ವಾತಂತ್ರ್ಯ, ಏಕತೆಗಳೇ ಪ್ರಪಂಚದಲ್ಲಿ ಇನ್ನೂ ತಾಂಡವವಾಡುತ್ತಿರುವ ಕುರುಡು ಹಿಂಸೆ, ಕಪಟ, ಅಸತ್ಯಗಳನ್ನು ಜಯಿಸಬಲ್ಲವು.**

**ನಿನ್ನ ಜಯಕ್ಕಾಗಿ ಶೌರ್ಯದಿಂದ ಹೋರಾಡಿ ಕಷ್ಟಬಟ್ಟವರು ಆ ಜಯದ ಯಥಾರ್ಥ ಹಾಗು ಶುದ್ಧ ಫಲಗಳು ಜೀವನದಲ್ಲಿ ಒಡಮೂಡುವದನ್ನು ಕಾಣಲಿ"**

**(೧೯೪೬).**

ಜಾಗತಿಕ ಯುದ್ಧರಂಗದಲ್ಲಿ ಒಂದು ಪರದೆ ಕೆಳಕ್ಕೆ ಬಿದ್ದಾಗ, ಶಾಂತಿ, ಸ್ವಾತಂತ್ರ್ಯ, ಐಕ್ಯಗಳು ತಲೆದೋರುವವೆಂದು ತಿಳಿದುಕೊಂಡವರು ಆಗ ಇದ್ದರು. ಆದರೆ ದೈವೀ ಶಕ್ತಿಯ ಆವಿರ್ಭಾವವಾಗದೆ ಇದು ಸಾಧ್ಯವಲ್ಲ. ಅಂತೆಯೇ ಈ ಪ್ರಾರ್ಥನೆಯಲ್ಲಿ ದೈವೀ ಶಾಂತಿ, ಸ್ವಾತಂತ್ರ್ಯ, ಐಕ್ಯಗಳನ್ನು ಪ್ರಾರ್ಥಿಸಲಾಗಿದೆ. ಅಂದು ಜಯ ದೊರೆತಂತಾಯಿತೇನೋ ನಿಜ. ಆದರೆ ಜಯಕ್ಕಾಗಿ ಹೋರಾಡಿದವರು ದೈವೀ ಜಯವು ಜೀವನದಲ್ಲಿ ಸಿದ್ಧಿ ಪಡೆದುದನ್ನು ಕಾಣಲಿ, ಎಂಬ ಹಾರೈಕೆಯೂ ಇಲ್ಲಿದೆ.

ಹೀಗೆ ವರುಷಾರಂಭದ ಪ್ರಾರ್ಥನೆಯಲ್ಲಿ ಒಂದು ಅಭೀಪ್ಸೆ, ಮನನೀಯ ವಿಚಾರ, ಹಾರೈಕೆ, ಮಾರ್ಗದರ್ಶನ ಇವುಗಳು ಅಡಕವಾಗಿರುತ್ತವೆ. ಒಂದೊಂದು ಪ್ರಾರ್ಥನೆಯೂ ಹೊಸ ವರುಷದ ಪಥ ಕ್ರಮದಲ್ಲಿ ಪಾಥೇಯವಾಗಿದೆ. ಅಂತೆಯೆ ಭಕ್ತವೃಂದವು ಚಾತಕ ಪಕ್ಷಿಯಂತೆ ಆ 'ಪ್ರಾರ್ಥನೆ'ಗಾಗಿ ಹಾತೊರೆಯುವುದುಂಟು. ೧೯೪೬ರಿಂದ ಪ್ರತಿವರುಷವೂ ಆ 'ಪ್ರಾರ್ಥನೆ'ಗಳನ್ನು ದೊರಕಿಸಿ ಸಂಗ್ರಹಿಸಿಕೊಳ್ಳುವ ಸದವಕಾಶ ನನಗೆ ದೊರಕಿದೆ. ಅಂತೆಯೇ ಅವುಗಳನ್ನೆಲ್ಲ ನಿರೂಪಿಸಬೇಕೆಂದಿದ್ದೇನೆ. ೧೯೩೩ರಿಂದ ೧೯೪೫ರ ವರೆಗಿನ ೧೨ ವರುಷಗಳ ಪ್ರಾರ್ಥನೆಗಳಲ್ಲಿ ಸಂಗ್ರಹಿಸಿದ ಒಂದು 'ಚಿಕ್ಕಹೊತ್ತಿಗೆಯು ಆಶ್ರಮದಿಂದ ಪ್ರಕಟವಾಗಿದೆ. ೧೯೪೬ರಿಂದ ೧೯೫೨ರ ವರೆಗಿನ ಪ್ರಾರ್ಥನೆಗಳ ಅನುವಾದಗಳನ್ನು ಇಲ್ಲಿ ಕೊಡಲಾಗಿದೆ.

೧೯೪೫ರ ಯುದ್ಧಮುಕ್ತಾಯದಿಂದ ನಿರೀಕ್ಷಿಸಿದ ಫಲಗಳು ದೊರೆಯುವ ಹಾದಿಯಲ್ಲಿ ೧೯೪೬ರಲ್ಲಿ ಜಾಗತಿಕ ಘಟನೆಗಳು ನಡೆಯಲಿಲ್ಲ. ದೈವೀಶಕ್ತಿಯ ಬೆಳಕು ನಮ್ಮಿಂದ ದೂರ ಸರಿಯುತ್ತಿರುವಂತೆ ಭಾಸವಾಗುವ ಚಿಹ್ನಗಳು ಸಾಧನರಂಗದಲ್ಲಿ ತಲೆದೋರಿರಬೇಕು. ಆದುದರಿಂದ ಮರುವರುಷದ ತಾಯಿಯವರ ಪ್ರಾರ್ಥನೆ ಹೀಗೆ ಹೊರಹೊಮ್ಮಿದೆ:

**"ಎಲ್ಲವೂ ಹೆಚ್ಚು ಹೆಚ್ಚು ಹದಗೆಡುತ್ತಿರುವ ಸಂದರ್ಭದಲ್ಲಿಯೇ ನಾವು ಪರಮಶ್ರದ್ಧೆಯ ಕೃತಿಗೆಯ್ಯಬೇಕಾಗುವುದು. ಹಾಗು ದೈವೀಕೃಪೆಯು ನಮ್ಮ ಕೈ ಬಿಡುವುದಿಲ್ಲನೆಂಬುದನ್ನು ಅರಿತುಕೊಳ್ಳಬೇಕಾಗುವುದು." (೧೯೪೭)**

ಪರಿಸ್ಥಿತಿ ಹದಗೆಡುತ್ತಿರುವಾಗ ಮನುಷ್ಯನು ಎದೆಗುಂದುವನು. ಶ್ರದ್ಧೆ ಅಳಿಯುವಂತೆ ತೋರುವ ಸಂದರ್ಭವನ್ನೇ ಪರಮಶ್ರದ್ಧೆಯ ಸಂದರ್ಭವನ್ನಾಗಿ ಮಾರ್ಪಡಿಸಿಕೊಳ್ಳಬೇಕು. ದೇವರ ಅವಕೃಪೆಯೆಂದು ತಿಳಿಯಲಾಗುವ ಸನ್ನಿವೇಶದಲ್ಲಿಯೇ ದೇವರು ಕೈಬಿಡುವುದಿಲ್ಲವೆಂಬುದನ್ನು ದೃಢವಾಗಿ ನಂಬಬೇಕು—ಇದೇ ಈ ಸಂದೇಶದ ತಿರುಳು. ವರುಷಾರಂಭದ ಪ್ರಾರ್ಥನೆಗಳು ಒಮ್ಮೊಮ್ಮೆ ಸಂದೇಶರೂಪದಲ್ಲಿಯೂ ಬರುತ್ತಿವೆ. ಇಂತಹ ಸಂದೇಶ ನಮ್ಮ ಮನಸ್ಸಿಗೆ ನೆಮ್ಮದಿಯನ್ನು ತರುತ್ತಿದೆ. ಇವರ ಮುಂದಿನ ಮೆಟ್ಟಿಲು ಆಶ್ವಾಸನ; ಅದು ೧೯೪೮ರ ಸಂದೇಶದಲ್ಲಿದೆ:

**ನಡೆ ಮುಂದೆ ನಡೆ ಮುಂದೆ; ಎಂದೆಂದಿಗೂ ನಡೆ.**
**ಗುಹೆಯಾಚೆಯ ಬೆಳಕನ್ನು ಪಡೆ.**
**ಹೋರಾಟದ ಕೊನೆಗಿದೆ ಜಯದ ದಡ. (೧೯೪೮)**

ಆಶಾದಾಯಕವಾದ ಸಂದೇಶವಿದು. ಗುಹೆ ದಾಟಿದ ಮೇಲೆಯೇ ಬೆಳಕು ಕಾಣುವುದು. ಹೋರಾಟದ ಕೊನೆಯಲ್ಲಿಯೇ ಜಯ ಪಡೆಯಬಹುದು. ೧೯೪೭ನೆಯ ಆಗಸ್ಟ್ ತಿಂಗಳು ಭಾರತ ದೇಶ ಸ್ವತಂತ್ರವಾಯಿತು; ಇಬ್ಭಾಗವೂ ಆಯಿತು. ಆ ಸಂದರ್ಭದಲ್ಲಿ ಜಾತೀಯ ಕಲಹ, ನಿರ್ವಾಸಿತರ ನಿರ್ಗಮನಗಳಲ್ಲಿ ರಕ್ತದ ಕಾಲುವೆ ಹರಿಯಿತು. ನಾವು ಪಡೆದ ಶುಭ ಸ್ವಾತಂತ್ರ್ಯ ಅಮಂಗಲವಾಗಿ ಪರಿಣಮಿಸುತ್ತಿರುವ ಸನ್ನಿವೇಶವನ್ನು ಗಮನಿಸಿದಂತಿದೆ ಈ ಸಂದೇಶ. ಇದು ದೇಶದ ಅಂದಿನ ಪರಿಸ್ಥಿತಿಯನ್ನು ಕುರಿತುದು. ಸಾಧನರಂಗದಲ್ಲಿದ್ದ ಸಾಧಕನು ಅನೇಕ ಸಲ ಅಂಧಕಾರದ ಅನುಭವ ಪಡೆಯುತ್ತಾನೆ. ಅಧ್ಯಾತ್ಮಸಾಧನೆಯಲ್ಲಿ ಅದು ಅನಿವಾರ್ಯವೂ ಎಂದು ತಿಳಿಯುತ್ತಿದೆ. ಸಾಧಕನು ಅಂತಹ ಅಂಧಕಾರವನ್ನು ಅನುಭವಿಸುತ್ತ ಜರ್ಜರಿತನಾದಾಗ ತಾಯಿಯವರು ದಯಪಾಲಿಸಿದ ಆಶಾಪೂರ್ಣ ಸಂದೇಶವಿದು. ಜೀವನದಲ್ಲಿ ಅಧ್ಯಾತ್ಮಸಾಧನೆಯಲ್ಲಿ ಹೋರಾಟ, ಘರ್ಷಣೆ

**ಅನಿವಾರ್ಯ. ಅದನ್ನು ಸಹಿಸುತ್ತಲೆ ಮುನ್ನಡೆಯಬೇಕು. ಗುಹೆ ದಾಟಬೇಕು. ಬೆಳಕು ಪಡೆಯಬೇಕು. ಹೋರಾಟದ ನಂತರ ಜಯ ಕಟ್ಟಿಟ್ಟದ್ದೇ. ಧೃತಿಗೆಟ್ಟರೆ ಪ್ರಯೋಜನವಿಲ್ಲ. ೧೯೪೭ರ ಹತ್ಯಾಕಾಂಡದ ಜ್ವಾಲೆ ತಗಲಿದವರಿಗೆ ಈ ಸಂದೇಶ ಅಮೃತಸಿಂಚನವಾಗಿ ಪರಿಣಮಿಸಿರಬೇಕು.**

ಮಾತು ಬೆಳ್ಳಿಯಾದರೆ ಮೌನ ಬಂಗಾರವಂತೆ. ಔಚಿತ್ಯವರಿತು ಮಾತನಾಡಬೇಕು. ವಿವೇಕದಿಂದ ಮೌನವನ್ನು ತಳೆಯಬೇಕು. ಮಾತನಾಡಬೇಕಾದ ಸಂದರ್ಭಗಳಿರುವಂತೆ ಮಾತನಾಡದಿರುವ ಸನ್ನಿವೇಶವೂ ಬರುವುದುಂಟು. ಶ್ರೀ ಅರವಿಂದರು ಅತಿಮಾನಸಿಕ ಬೆಳಕಿನ ಅವತರಣಕ್ಕಾಗಿ ವಿಶೇಷಶಕ್ತಿಗಳನ್ನು ಪ್ರಯೋಗಿಸ ತೊಡಗಿದ್ದ ಕಾಲವದು. ಜಗತ್ತಿನಲ್ಲಿ ಆಸುರೀ ಶಕ್ತಿಗಳ ತಾಂಡವ ನಡೆದಾಗ ಅವುಗಳ ಸದ್ದನ್ನಡಗಿಸಲೆಂದು ವಿಶೇಷ ಪ್ರಯತ್ನ ನಡೆಯಬೇಕಾಗಿತ್ತು. ಅತಿಮಾನಸಿಕ ಬೆಳಕು ಸಮೀಪವಾದಂತೆ ಆಸುರೀಶಕ್ತಿಗಳ ಅಟ್ಟಹಾಸವೂ ಹೆಚ್ಚುತ್ತಿದೆ. ಆಸುರೀಶಕ್ತಿಗಳೊಂದಿಗೆ ಘರ್ಷಣೆ ನಡೆದಾಗ ತಾತ್ಕಾಲಿಕ ಫಲವೇನೆಂಬುದನ್ನು ಅರಿತುಕೊಳ್ಳ ಹೊರಡುವುದಾಗಲಿ ಅರಿತುಕೊಂಡಿದ್ದರೂ ಪ್ರಕಟಿಸುವುದಾಗಲಿ ಸರಿಯಲ್ಲದೆ ಇರಬಹುದು. ಇಂತಹ ಸನ್ನಿವೇಶದ ಸೂಚನೆಯನ್ನು ೧೯೪೯ರ ಸಂದೇಶವಲ್ಲಿ ಊಹಿಸಬಹುದಾಗಿದೆ :

> **ಪ್ರಭು, ಹೊಸ ವರುಷದ ಸಂದೇಶ ಕೇಳಿದಾಗ ನೀವು ಪರಸ್ಪರ ವಿರುದ್ಧವಾದ ಎರಡು ಸಂಭವಗಳನ್ನು ನೋಡಹಚ್ಚಿದಿರಿ ಮತ್ತು 'ಸುಮ್ಮನೆ ಇರು' ಎಂದು ಆದೇಶವಿತ್ತಿರಿ. (೧೯೪೯)**

ಇಬ್ಬಗೆಯ ಸಂಭವವಿರುವಾಗ ಆವುದನ್ನು ಹೇಳಬೇಕು, ಆವುದನ್ನು ಬಿಡಬೇಕು ! ಸುಮ್ಮನಿರುವುದೇ ಉಚಿತ. ಬಾಲಿಶವಾದ ಉತ್ಸುಕತೆಯು ಮಾನವರನ್ನು ಬಾಧಿಸುತ್ತಿರುವ ಕಾಲದಲ್ಲಿ ಈ ಆದೇಶ ಹಿತಕಾರಿಯಾಗುತ್ತಿದೆ. ಯಾರಿಗೆ ಗೊತ್ತು ? ೧೯೫೦ರಂದು ನಡೆಯಲಿದ್ದ ಘಟನೆಯೂ ಆ ಎರಡು ಸಂಭವಗಳಲ್ಲಿ ಒಂದಾಗಿತ್ತೋ ಏನೋ, ಅಂತು ಗೂಢಾರ್ಥದ ಉಕ್ತಿಯಿದು. ಆದರೆ ಮೌನದ ಘನತೆಯನ್ನು ಬೋಧಿಸುತ್ತಿದೆ.

ಆದರೆ ಮಾಡುವವರು ಉತ್ತಮ ವರ್ಗಕ್ಕೆ ಸೇರುತ್ತಾರೆ. ಮಾಡುವುದೇ ಆಗಿದ್ದರೆ ಆಡಲೇಕೆ ? ಸಿದ್ಧಿಪಡೆದುಕೊಳ್ಳುವುದೇ ಆದರೆ ಘೋಷಣೆಯಿಂದೇನು ಪ್ರಯೋಜನ ? ಇಂತಹ ಆದೇಶ ೧೯೫೦ರ ಸಂದೇಶವಲ್ಲಿದೆ:

> **ಮಾತು ಬೇಡ; ಕೃತಿಗೆಯ್.**
> **ಘೋಷಿಸಬೇಡ; ಸಿದ್ಧಿ ಪಡೆ. (೧೯೫೦)**

ಚಿಕ್ಕ ಪರಿಣಾಮಕಾರಕ ಸಂದೇಶವಿದು. ಹಿಂದಿನ ವರುಷ ಸಂದಿಗ್ಧತೆಯ ಮಾತಿದ್ದರೆ ಇಲ್ಲಿ ಸ್ಪಷ್ಟೋಕ್ತಿಯಿದೆ. ಐಹಿಕ ಜೀವನದಲ್ಲಿಯೂ ಈ ಆದೇಶ ಅತಿ ಪ್ರಯೋಜನಕಾರಿಯಾದುದು. ಪಾರಮಾರ್ಥಿಕ ಜೀವನದಲ್ಲಿ ತೊಡಗಿದವರಿಗೆ ಇದು ಆಗ ಆವಶ್ಯಕವಾಗಿ ತೋರಿರಬೇಕು. ಸೂತ್ರರೂಪವಾದ ಈ ಆದೇಶ ಶ್ರೀ ಅರವಿಂದರು ಪಾರ್ಥಿವ ದೇಹದೊಂದಿಗೆ ಇರುವಾಗಿನ ಕೊನೆಯ ಸಂದೇಶವಾಗಿದೆ. ಜಡತ್ವದ ಅತಿ ಆಳವಾದ ಪದರುಗಳಲ್ಲಿ ಅತಿ ಮಾನಸಿಕ ಬೆಳಕನ್ನು ಕೆಡಹುವ ಪ್ರಯೋಗ ನಡೆದಾಗಿನ ಸಂದೇಶವದು. ಘೋಷಣೆಯ ಮಾತು ಹಿಂದೆ ಉಳಿದು ಸಿದ್ಧಿಯು ಕಡೆಗೆ ತಲಪುವ ಸಂದರ್ಭವನ್ನು ಅದು ಸೂಚಿಸುತ್ತಿರಬೇಕು. ಶ್ರೀ ಅರವಿಂದರ ಜೀವನದ ಅವಧಿಯ ಕೊನೆಯ ಸಂದೇಶದ ಮಹತ್ವವೂ ಇದಕ್ಕಿದೆ.

೧೯೫೦ನೆಯ ವರುಷದ ಡಿಸೆಂಬರ ತಿಂಗಳು ೫ನೆಯ ದಿನಾಂಕದಂದು ಶ್ರೀ ಅರವಿಂದರು ಪಾರ್ಥಿವ ದೇಹವನ್ನು ತೊರೆದರು. ಅದು ಇಂದಿನ ಜಾಗತಿಕ ಘಟನೆಗಳಲ್ಲಿ ಮಹತ್ವದ್ದಾಗಿದೆ. ಅಲ್ಲದೆ ಕೊನೆಯುಸಿರು

ಬಿಟ್ಟಮೇಲೆಯೂ ೪-೫ ದಿನಗಳ ವರೆಗೆ ಭೌತಿಕ ದೇಹದಲ್ಲಿ ಯಾವ ವಿಕಾರಗಳೂ ತೋರಲಿಲ್ಲ. ಜ್ಯೋತಿಯೊಂದು ದೇಹವನ್ನು ಆವರಿಸಿತು. ದೇಹತ್ಯಾಗದ ನಂತರವೂ ಅತಿಮಾನಸಿಕ ಶಕ್ತಿಯನ್ನು ಭೌತ ರಂಗಕ್ಕೆ ಇಳಿಸುವ ಕಾರ್ಯದಲ್ಲಿ ಆಶ್ರಮವಾಸಿಗಳ ಮಧ್ಯದಲ್ಲಿ ಉಳಿಯುವ ಆಶ್ವಾಸನೆಯೂ ದೊರೆತಂತಾಯಿತು. ಈ ಸನ್ನಿವೇಶದಲ್ಲಿ ಹೊಸವರುಷದ ಪ್ರಾರ್ಥನೆಯು ತಾಯಿಯವರ ವಾಣಿಯಲ್ಲಿ ರೂಪು ಪಡೆಯಿತು:

> " ಪ್ರಭುವೆ, ನಿಮ್ಮ ಮಹಾಪರಿವರ್ತನೆಯ ಕಾರ್ಯವನ್ನು ಸಾಧಿಸುವುದಕ್ಕೆಂದು ನಾವು ಈ ಭೂಮಿಯಲ್ಲಿ ಜೀವಿಸಿದ್ದೇವೆ. ಇದೊಂದರಲ್ಲಿಯೇ ನಾವು ಮಗ್ನರಾಗಿದ್ದೇವೆ. ಅದೊಂದೇ ನಮ್ಮ ಸತತೋದ್ಯೋಗವಾಗುವಂತೆ ದಯಪಾಲಿಸಿರಿ. ಇದೇ ಗುರಿಯತ್ತ ಸಾಗುವ ಹಾದಿಯಲ್ಲಿ ನಮ್ಮ ಕೃತಿಗಳೆಲ್ಲ ನೆರವಾಗುವಂತೆಯೂ ದಯಪಾಲಿಸಿರಿ. " (೧೯೫೧)

ಉಳಿದೆಲ್ಲ ಹವ್ಯಾಸಗಳನ್ನು ತೊರೆದು ದೈವೀಶಕ್ತಿಯ ಮಹಾಪರಿವರ್ತನೆಗಾಗಿ ಹೆಣಗುವ ಪ್ರತಿಜ್ಞೆಯನ್ನು ಪೂರ್ತಿಗೊಳಿಸಲು ಭಗವಾನರ ಕೃಪೆಯನ್ನು ಇಲ್ಲಿ ಕೋರಲಾಗಿದೆ. ಒಂದೆ ಮನದ ಗುರಿ, ಆ ಗುರಿಯನ್ನು ಪಡೆಯುವಲ್ಲಿ ದೈವೀಕೃಪೆಯ ಹಾರೈಕೆ, ಇವು ಈ ಪ್ರಾರ್ಥನೆಯಲ್ಲಿ ಅಡಕವಾಗಿವೆ. ಜೀವಿಸಿರುವುದರ ಒಂದೇ ಒಂದು ಗುರಿಯೆಂದರೆ ಭೌತಿಕ ಸ್ತರದಲ್ಲಿಯೂ ಅತಿಮಾನಸಿಕ ಬೆಳಕಿನ ಆವಿರ್ಭಾವಕ್ಕಾಗಿ ದುಡಿಯುವುದು. ಇಂತಹ ಹಿರಿಯ ಗುರಿಯತ್ತ ಇಂದು ಮಾನವತೆಯು ಸಾಗಬೇಕಾಗಿದೆ. ಉಳಿದೆಲ್ಲ ಘೋಷಣೆ, ಗುರಿಗಳು ಪ್ರಯೋಜನಕ್ಕೆ ಬಾರವು. ಶ್ರೀ ಅರವಿಂದರ, ತಾಯಿಯವರ ಈ ಕಾರ್ಯಸಾಧನೆಯಲ್ಲಿ ಆಶ್ರಮವಾಸಿಗಳೀಗ ಮುಂದುವರಿಯುತ್ತಿದ್ದಾರೆ. ಮೇಲುಪ್ಪರಿಗೆಯ ಕೋಣೆಯಲ್ಲಿ ಏಕಾಂತಜೀವನ ನಡೆಯಿಸುತ್ತಿದ್ದ ಶ್ರೀ ಅರವಿಂದರು, ಆಶ್ರಮದ ಪ್ರಾಂಗಣದಲ್ಲಿ ತಮ್ಮ ಮಧ್ಯದಲ್ಲಿ ಬಂದು ನೆಲಸಿದ್ದಾರೆಂದು ಅಲ್ಲಿಯ ಸಾಧಕರೆಲ್ಲ ಭಾವಿಸುತ್ತಾರೆ. ಶ್ರೀ ಅರವಿಂದರ ಭೌತಿಕದೇಹದ ಸಮಾಧಿಯು ಇಂದು ಈ ಸಾಧನೆಯ ಕೇಂದ್ರಬಿಂದುವಾಗಿದೆ. ತಾಯಿಯವರು ಕೇಂದ್ರಶಕ್ತಿಯಾಗಿದ್ದಾರೆ. ಒಂದು ವರುಷ ಉರುಳಿದ ಮೇಲೆ ಮತ್ತೊಂದು ಪ್ರಾರ್ಥನೆ ಮೂಡಿ ಬಂದಿದೆ:

> " ಪ್ರಭುವೆ, ನೀವು ನಮ್ಮ ಶ್ರದ್ಧೆಯ ಗುಣವನ್ನು ಪರೀಕ್ಷಿಸುವ, ನಮ್ಮ ನಿಷ್ಠೆಯನ್ನು ಒರೆಗೆ ಹಚ್ಚುವ ನಿರ್ಧಾರ ಮಾಡಿದ್ದೀರಿ. ಈ ದಿಬ್ಯದಿಂದ ನಾವು ಹೆಚ್ಚು ಶುದ್ಧರೂ ಘನವಂತರೂ ಆಗುವಂತೆ ದಯಪಾಲಿಸಿರಿ." (೧೯೫೨)

ಪರಮ ಗುರಿಯತ್ತ ಸಾಗಿದಾಗ್ಗೆ ನಮ್ಮ ಶ್ರದ್ಧೆ, ನಿಷ್ಠೆ ಇವುಗಳ ಮೌಲ್ಯಮಾಪನ ನಡೆಯುತ್ತಿದೆ. ಈ ಕಠಿಣತರವಾದ ಪರೀಕ್ಷೆಯಲ್ಲಿ ನಮ್ಮ ಪಾವಿತ್ರ್ಯ, ಹಿರಿಮೆಗಳು ಒರೆಗಲ್ಲಿಗೆ ಹತ್ತಿ ಶ್ರೇಷ್ಠವೆಂದು ಸಿದ್ಧವಾಗಬೇಕು. ಇದಕ್ಕಾಗಿ ಅಭೀಪ್ಸೆಯಿಂದ ಕೂಡಿದ ನಮ್ಮ ಸಾಧನೆ ಹಾಗು ದೈವೀ ಕೃಪೆ ಇವು ಮೇಳವಿಸಬೇಕು. ಇಂತಿದೆ ಈ ವರುಷದ ಪ್ರಾರ್ಥನೆ.

—ಸ. ಸ. ಮಾಳವಾಡ

# ಶ್ರೀ ಅರವಿಂದಾಶ್ರಮ

## ೧

ಈ ಆಶ್ರಮವು ಉದ್ದೇಶಪೂರ್ವಕವಾಗಿ ಸ್ಥಾಪಿತವಾದ ಸಂಸ್ಥೆಯಲ್ಲ. ಅದು ಸ್ವಾಭಾವಿಕವಾಗಿ ಬೆಳೆದು ಬಂದ ಸಜೀವ ಸೃಷ್ಟಿ. ಒಂದು ಯೋಜನೆಯಂತೆ ನಿರ್ಮಿಸಲ್ಪಡದೆ ಅದು ಶ್ರೀ ಅರವಿಂದರ ವ್ಯಕ್ತಿತ್ವದ ಸಹಜ ಹಾಗು ಸಚೇತನ ರೂಪವಾಗಿದೆ.

ನಾಲ್ವತ್ತು ವರುಷಗಳಿಗಿಂತ ಹೆಚ್ಚು ಪೂರ್ವದಲ್ಲಿ ಶ್ರೀ ಅರವಿಂದರು ಪಾಂಡಿಚೇರಿಗೆ ಬಂದಾಗ, ತಮ್ಮ ಭವಿತವ್ಯವನ್ನೇ ಅವರಿಗೆ ಒಪ್ಪಿಸಲು ನಿಶ್ಚಯಿಸಿದ ಕೆಲವರು ಅವರನ್ನು ಬಂದು ಕೂಡಿದರು. ಒಂದೇ ಮನೆಯವರಂತೆ ಅವರ ಜತೆಯಲ್ಲಿ ಇರಹತ್ತಿದರು. ವರುಷಗಳು ಕಳೆದಂತೆ ಹೆಚ್ಚು ಹೆಚ್ಚು ಜನರು ಬಂದರು. ೧೯೨೦ ರಲ್ಲಿ ಶ್ರೀ ಮಾತೆಯವರು ಬಂದ ಮೇಲಂತೂ ಆಶ್ರಮಕ್ಕೆ ಬರುವ ಜನರು ಬಹಳ ಹೆಚ್ಚಾಗಹತ್ತಲು, ರೂಪುಗೊಳ್ಳುತ್ತಿರುವ ಸಂಘಜೀವನದ ಆವಶ್ಯಕತೆಗಳನ್ನನುಸರಿಸಿ ವ್ಯವಸ್ಥೆ ಮಾಡುವದು ಅವಶ್ಯವೆನಿಸಹತ್ತಿತು. ಹೆಚ್ಚು ಮನೆಗಳನ್ನು ಬಾಡಿಗೆ ಹಿಡಿಯಬೇಕಾಯಿತು. ಸುವ್ಯವಸ್ಥೆಯನ್ನೂ ಆರೋಗ್ಯವನ್ನೂ ಕಾಯ್ದುಕೊಳ್ಳಲಿಕ್ಕೆ ಅನೇಕ ಸೇವಾಶಾಖೆಗಳನ್ನು ಏರ್ಪಡಿಸಬೇಕಾಯಿತು. ಇದೇ ಶ್ರೀ ಅರವಿಂದಾಶ್ರಮದ ಪ್ರಾರಂಭವೆಂದು ಹೇಳಬಹುದು. ಅದೇ ವರುಷ ಅಂದರೆ ೧೯೨೬ರಲ್ಲಿ ಆಶ್ರಮದ ಎಲ್ಲ ವ್ಯವಸ್ಥೆಯನ್ನು ಶ್ರೀ ಮಾತೆಯವರಿಗೆ ಒಪ್ಪಿಸಿ ಸಂಪೂರ್ಣ ಏಕಾಂತವಾಸವನ್ನು ಶ್ರೀ ಅರವಿಂದರು ಕೈಕೊಂಡರು.

'ಆಶ್ರಮ' ಶಬ್ದದ ವಿವರಣೆಗಾಗಿ ಒಂದು ಮಾತನ್ನು ಹೇಳುವದು ಅವಶ್ಯವೆಂದು ತೋರುವದು. ಏಕಂದರೆ ವ್ಯವಹಾರದಲ್ಲಿ ಅದಕ್ಕೆ ಒಂದು ವಿಶಿಷ್ಟ ಅರ್ಥ ಬಂದು ಸೇರಿದೆ. ಆಶ್ರಮವೆಂದರೆ ಒಂದು ಮಠ, ಒಂದು ಬಸದಿ, ಸನ್ಯಾಸಿಗಳು ತಪಸ್ಸು ಮಾಡಿ ದೇಹದಂಡನೆ ಮಾಡುವ ಒಂದು ಏಕಾಂತಸ್ಥಳ ಎಂದು ಜನ ಳಿಯಹತ್ತಿದ್ದಾರೆ. ಆದರೆ ವೇದ, ಉಪನಿಷತ್ತು ಹಾಗು ಪುರಾಣಗಳ ಕಾಲದಲ್ಲಿ ಈ ಅರ್ಥ ಅದಕ್ಕೆ ಇದ್ದಿದ್ದಿಲ್ಲ. ಆಗ ಆಶ್ರಮವೆಂದರೆ ಗುರುಗಳ ಮನೆಯಾಗಿದ್ದು ಅಲ್ಲಿಗೆ ಶಿಷ್ಯರು, ಗಂಡೇ ಇರಲಿ, ಹೆಣ್ಣೇ ಇರಲಿ, ವಿದ್ಯೆಯನ್ನು ಕಲಿಯಲು ಬಂದು ಸೇರುತ್ತಿದ್ದರು. ಅವರು ಬೇರೆ ಬೇರೆ ವಯಸ್ಸಿನವರಾಗಿದ್ದು ತಮತಮಗೆ ಬೇಕಾದ ವಿದ್ಯೆಯನ್ನು ಕಲಿಯುತ್ತಿದ್ದರು. ಗುರುವು ತಂದೆಯಂತೆ ಅವರ ಆರೈಕೆ ಮಾಡಿ, ತನ್ನಲ್ಲಿಯ ಉತ್ತಮ ಕಲಾವಿದ್ಯೆಗಳನ್ನು ಕೊಟ್ಟು ಅವರನ್ನು ಸಜ್ಜುಗೊಳಿಸುತ್ತಿದ್ದನು. ತಮಗೆ ಬೇಕಾದುದನ್ನೆಲ್ಲ ಕಲಿಯುವದಾದ ಮೇಲೆ ತಮ್ಮಿಷ್ಟ ಬಂದಂತೆ ಜೀವನದಲ್ಲಿ ಪುರೋಭಿವೃದ್ಧಿಯನ್ನು ಸಾಧಿಸಿಕೊಳ್ಳಲು ಗುರುವು ಶಿಷ್ಯರಿಗೆ ಅವಕಾಶ ಮಾಡಿಕೊಡುತ್ತಿದ್ದನು. ಯಾವುದಕ್ಕೂ ಬೇಡವೆನ್ನುತ್ತಿದ್ದಿಲ್ಲ. ಆಂದಿನ ಆಶ್ರಮಗಳು ಚೇತನಾಯುಕ್ತವಾಗಿದ್ದು, ಚಟುವಟಿಕೆಗಳಿಂದ ತುಂಬಿತುಳುಕುತ್ತಿದ್ದವೆಂದು ಇತಿಹಾಸವು ಉಲ್ಲೇಖಿಸುತ್ತದೆ. ಆಶ್ರಮವು ಉದಾರ ಹಾಗು ವಿಶಾಲ ಭಾವನೆಗಳ ತಳಹದಿಯುಳ್ಳ ಒಂದೇ ಮನೆತನವಾಗಿತ್ತು. ಶ್ರೀ ಅರವಿಂದಾಶ್ರಮದ ರೀತಿಯಾದರೂ ಹೀಗೆಯೇ ಇದೆ. ಎಂಟು ಜನರಿದ್ದಾಗಲೂ ಅಷ್ಟೇ. ಎಂಟು ನೂರು ಜನರಿದ್ದಾಗಲೂ ಅಷ್ಟೇ. ಪ್ರಾಚೀನಕಾಲದ ವಸಿಷ್ಠ ಅಥವಾ ಕಣ್ವಮುನಿಗಳ ಆಶ್ರಮವನ್ನು ಇದು ಹೋಲುತ್ತಿದ್ದು ಹೊಸ ಜೀವನಕ್ಕೆ ಹೊಂದಿಕೊಂಡಿದೆ. ಧಾರ್ಮಿಕ ಆಂದೋಲನಗಳಿಂದ ನಮಗೆ ಪರಿಚಿತವಾದ ಕ್ರೈಸ್ತ ಚರ್ಚನ್ನಾಗಲಿ, ಬೌದ್ಧ ವಿಹಾರವನ್ನಾಗಲಿ, ಇತ್ತೀಚಿನ ಹಿಂದೂ ಮಠವನ್ನಾಗಲಿ ಇದು ಅಷ್ಟು ಹೋಲುವದಿಲ್ಲ.

## ಸಮರ್ಪಣ

ತಮ್ಮ ಭಕ್ತರಲ್ಲಿ ಕೆಲವು ಸ್ತ್ರೀಯರನ್ನೂ, ಪುರುಷರನ್ನೂ ಶ್ರೀ ಅರವಿಂದರೂ ಶ್ರೀ ಮಾತೆಯವರೂ ಶಿಷ್ಯರೆಂದು ಸ್ವೀಕರಿಸಿ, ಆ ಶಿಷ್ಯರು ತಮ್ಮೊಡನೆ ಇದ್ದು ತಮ್ಮ ಮಾರ್ಗದರ್ಶನದಲ್ಲಿ ಸಾಧನೆಯನ್ನು ಮಾಡುವಂತೆ ಅನುವುಮಾಡಿಕೊಟ್ಟರು. ಮತ್ತು ಆ ಶಿಷ್ಯರು ತಮಗಾಗಿ ಕಲ್ಪಿಸಲಾದ ಮನೆಗಳಲ್ಲಿಯೇ ಇರಹತ್ತಿದರು. ಪ್ರತಿಯೊಬ್ಬನೂ ಗುರುವಿನ ಕಣ್ಣಾರಿಕೆಯಲ್ಲಿರುವನು. ಈ ಗುರುಶಿಷ್ಯ ಸಂಬಂಧದಲ್ಲಿ ಅಡ್ಡವಾಗಿ ಆಶ್ರಮದ ಯಾವ ಅಧಿಕಾರಿಯೂ ಬರಲಾರನು.

ಈ ರೀತಿಯ ವಿಶಿಷ್ಟವಾದ ಆಧ್ಯಾತ್ಮಿಕ ಜೀವನದ ಒಳದನಿಗೆ ಓಗೊಟ್ಟವರೆಂದು ಶ್ರೀ ಮಾತೆಯವರು ನಿರ್ಣಯಿಸಿದವರಿಗೆ ಮಾತ್ರ ಆಶ್ರಮದಲ್ಲಿ ಪ್ರವೇಶ ಸಿಗುವದು. ಉಳಿದೆಲ್ಲ ವಿಚಾರಗಳು ಗೌಣವಾದುವು. ಪ್ರವೇಶ ಪಡೆದ ಪ್ರತಿ ವ್ಯಕ್ತಿಯೂ ತನ್ನ ಆಸ್ತಿಪಾಸ್ತಿಗಳನ್ನು ಶ್ರೀ ಮಾತೆಯವರಿಗೆ ಸಮರ್ಪಿಸುವರೆಂದೂ ಅವರು ಆತನ (ಇಲ್ಲವೆ ಅವಳ) ದೈಹಿಕ ಹಾಗು ಆಧ್ಯಾತ್ಮಿಕ ಕ್ಷೇಮದ ಹೊಣೆಯನ್ನು ಹೊರುವರೆಂದೂ ಭಾವಿಸಲಾಗಿದೆ. ನೆಮ್ಮದಿಯಿಂದ ಇರುವದಕ್ಕೆ ಅವಶ್ಯವಾದ ಎಲ್ಲ ನ್ಯಾಯವಾದ ಸೌಕರ್ಯಗಳನ್ನು ಶ್ರೀ ಮಾತೆಯವರು ಪ್ರತಿಯೊಬ್ಬನಿಗೂ ಒದಗಿಸುವರು. ಅಲ್ಲದೆ ಆಶ್ರಮದಲ್ಲಿ ಯಾವಾಗಲೂ ಕೆಲವರು ದರ್ಶನಾರ್ಥಿಗಳು ಇದ್ದೇ ಇರುವರು. ಇವರು ಕೆಲವೇ ದಿನಗಳ ವರೆಗೆ ಇರುತ್ತಿದ್ದರೂ ಆಶ್ರಮ ಜೀವನದಲ್ಲಿ ಭಾಗ ತೆಗೆದುಕೊಳ್ಳಲು ಇವರಿಗೆ ಅವಕಾಶವಿದೆ. ಇವರು ತಮ್ಮ ವೆಚ್ಚವನ್ನು ತಾವೇ ವಹಿಸಿಕೊಳ್ಳುತ್ತಾರೆ. ಆಶ್ರಮಕ್ಕೆ ಅರ್ಪಿಸಲು ಆಸ್ತಿಪಾಸ್ತಿ ಇಲ್ಲದಿರುವ ಜನರನ್ನೂ, ಅಲ್ಪಸ್ವಲ್ಪ ಆಸ್ತಿ ಇದ್ದರೂ ಕೊಡಲು ಬಾರದಂತಹ ಪರಿಸ್ಥಿತಿಯಲ್ಲಿರುವ ಜನರನ್ನೂ ಆಶ್ರಮಕ್ಕೆ ಸೇರಿಸಿಕೊಂಡ ಉದಾಹರಣೆಗಳು ಇವೆ. ಇಂಥ ಪ್ರಸಂಗಗಳೇ ಬಹಳ. ಆಧ್ಯಾತ್ಮಿಕ ಜೀವನಕ್ಕೆ ಯೋಗ್ಯರಾದವರೆಂಬುದು ಶ್ರೀ ಮಾತೆಯವರಿಗೆ ಕಂಡು ಬಂದರೆ ಇಂದಿಗೂ ಆ ರೀತಿ ಸೇರಿಸಿಕೊಳ್ಳಲಾಗುತ್ತಿದೆ. ಭಕ್ತರಿಂದಲೂ, ಶಿಷ್ಯರಿಂದಲೂ ಈ ರೀತಿಯಾಗಿ ಬಂದ ಕಾಣಿಕೆಗಳು ಗುರುವಿಗೆ ಅರ್ಪಿತವಾಗುತ್ತಿವೆ; ಮತ್ತು ಅವುಗಳ ಮೇಲೆ ಇತರರಿಗೆ ಯಾವ ಹಕ್ಕುಗಳೂ ಇರುವದಿಲ್ಲ.

ಇಂದಿಗೆ ಆಶ್ರಮದಲ್ಲಿ ಸುಮಾರು ೭೫೦ ಅಂತೇವಾಸಿಗಳಿದ್ದಾರೆ. ಇವರಲ್ಲಿ ಬಾಲಕರಿಂದ ಹಿಡಿದು ಮುದುಕರ ವರೆಗೆ ಬೇರೆ ಬೇರೆ ವಯಸ್ಸಿನವರಿದ್ದಾರೆ; ಇವರಲ್ಲದೆ ಸುಮಾರು ೫೦ ದರ್ಶನಾರ್ಥಿಗಳೂ (temporary visitors) ಇರುವರು. ಇವರೆಲ್ಲರಲ್ಲಿ ಬಹಳ ಜನರು ಶ್ರೀ ಮಾತೆಯವರ ಒಡೆತನದ ಮನೆಗಳಲ್ಲಿ ಇರುತ್ತಾರೆ. ಉಳಿದವರು ಬಾಡಿಗೆ ಮನೆಗಳಲ್ಲಿ ವಾಸಿಸುವರು. ಇವೆಲ್ಲ ಮನೆಗಳು ಶ್ರೀ ಅರವಿಂದರು ಹಾಗು ಶ್ರೀ ಮಾತೆಯವರು ವಾಸಿಸುವ ಕೇಂದ್ರ (9, Rue de la Marine) ಸುತ್ತುಮುತ್ತು ಹಬ್ಬಿವೆ. ಈ ವಸಾಹತಿನ ವ್ಯವಸ್ಥೆಗಾಗಿ ೭೦೦ರಷ್ಟು ಜನ ಕೆಲಸಗಾರರನ್ನು ಸಂಬಳಕ್ಕೆ ಇಟ್ಟುಕೊಳ್ಳಲಾಗಿದೆ. ಆಶ್ರಮವನ್ನು ನಡೆಯಿಸುವ ವೆಚ್ಚವು ತಿಂಗಳಿಗೆ ೧ ಲಕ್ಷ ರೂಪಾಯಿಗಳಿಗಿಂತಲೂ ಹೆಚ್ಚಾಗಿ ಬರುತ್ತದೆ. ಜಗತ್ತಿನ ಮೂಲೆಮೂಲೆಗಳಿಂದ ಬರುವ ಕಾಣಿಕೆಗಳಿಂದ ಈ ವೆಚ್ಚವನ್ನು ಸಾಗಿಸಲಾಗಿದೆ. ಈ ಕಾಣಿಕೆಗಳು ಯಾವುದೇ ಶರ್ತಿಗೆ ಒಳಪಟ್ಟಿರುವುದಿಲ್ಲ. ಹೃತ್ಪೂರ್ವಕವಾಗಿ ಸಮರ್ಪಿಸಲ್ಪಟ್ಟಿರುತ್ತವೆ. ಅಂಥವುಗಳನ್ನೇ ಸ್ವೀಕರಿಸಲಾಗುತ್ತಿದೆ.

ಆಶ್ರಮವಾಸಿಗಳು ಶ್ರೀ ಅರವಿಂದರ ಆದರ್ಶಕ್ಕೆ ಸ್ವೇಚ್ಛೆಯಿಂದ ಸಮರ್ಪಿತರಾಗಿರುತ್ತಾರೆ. ಅವರ ಉಪದೇಶವೇ ಶಿಷ್ಯರಿಗೆ ಸಂಜ್ಞಾಜ್ಯೋತಿ; ಶ್ರೀ ಮಾತೆಯವರೇ ಮಾರ್ಗದರ್ಶಕರು. ಮನುಷ್ಯನು ಇಂದಿನ ತನ್ನ ನ್ಯೂನತೆಗಳನ್ನು ಕಳೆದುಕೊಂಡು ಪರಿಪೂರ್ಣ ವ್ಯಕ್ತಿಯಾಗಿ ಬೆಳೆಯಬಲ್ಲನೆಂಬುದೂ, ಪರಿಪೂರ್ಣನಾದ ಮಾನವನು ಪರಿಪೂರ್ಣವಾದ ಸಮಾಜರಚನಾಕಾರ್ಯದಲ್ಲಿ ಕೇಂದ್ರಶಕ್ತಿಯಾಗಬಲ್ಲನೆಂಬುದೂ, ಮಾನವ

ಜಾತಿಯ ನಿಜವಾದ ಐಕ್ಯವು ಆತ್ಮದ ಮಟ್ಟದಲ್ಲಿ ಅರಳಿ ಬರಬಲ್ಲದೆಂಬುದೂ ಶ್ರೀ ಅರವಿಂದರ ಉಪದೇಶದ ತಿರುಳು. ಮಾನವನ ಈ ಬಗೆಯ ಪರಿವರ್ತನೆಯ ಮೂಲವು ಆಧ್ಯಾತ್ಮಿಕವಾಗಿದೆ; ಹಾಗು ಇಂಥ ಪರಿವರ್ತನೆಗಾಗಿ ಆತನ ಸೂಕ್ಷ್ಮತರ ಸೂಕ್ಷ್ಮತಮ ಪ್ರಕೃತಿಯ ನಿಗೂಢ ಶಕ್ತಿಗಳನ್ನು ಜಾಗೃತಗೊಳಿಸಿ ವಿಕಾಸ ಗೊಳಿಸಬೇಕು. ಮನುಷ್ಯನು ಆಳವಿಲ್ಲದ ಬಾಳನ್ನು ತೊರೆಯಬೇಕು. ಅಂತಃಪ್ರೇರಣೆಯಿಂದ ಬಾಹ್ಯವನ್ನು ರೂಪಿಸಬೇಕು. ತನ್ನ ಆತ್ಮವನ್ನು ಕಂಡುಕೊಳ್ಳಬೇಕು. ಆಶ್ರಮದ ಜೀವನಕ್ಕೆಲ್ಲ ಈ ಸತ್ಯವೇ ಕೇಂದ್ರಬಿಂದು ವಾಗಿದೆ.

ಇಲ್ಲಿಯ ಜೀವನದ ತಳಹದಿಯು ಪೂರ್ಣವಾಗಿ ಆಧ್ಯಾತ್ಮಿಕವಾಗಿದೆ. ಬಾಳಿಗೊಂದು ಅಂತಃಸಾಧನೆಯ ಶಿಕ್ಷಣವನ್ನು ಕೊಡಲಾಗುತ್ತಿದೆ. ಆದರೆ ಅದು ವಿಶಾಲವಾದ ತಳಹದಿಯ ಮೇಲೆ ಇರುವದರಿಂದ ಪ್ರತಿಯೊಬ್ಬನಿಗೆ ತನ್ನ ತನ್ನ ಸ್ವಭಾವ-ಪ್ರವೃತ್ತಿಗಳಿಗೆ ಹೊಂದಿಕೆಯಾಗುವಂತೆ ಬದಲಾವಣೆ ಮಾಡಿಕೊಳ್ಳಲು ಸ್ವಾತಂತ್ರ್ಯ ವಿರುವದು. ಸ್ಥೂಲವಾಗಿ ಹೇಳಬೇಕೆಂದರೆ ತನ್ನ ಅಂತರ್-ಬಾಹ್ಯಗಳೆರಡನ್ನೂ ಗುರುವಿಗೆ, ದೈವೀಶಕ್ತಿಗೆ, ಕ್ರಮೇಣವಾಗಿ ಸಮರ್ಪಿಸುವದರಲ್ಲಿಯ ಪ್ರಗತಿಯನ್ನು ಅದು ಒಳಗೊಂಡಿದೆ. ಧ್ಯಾನ, ಚಿತ್ತದ ಏಕಾಗ್ರತೆ, ಕ್ರಿಯೆ, ಸೇವೆ ಇವೆಲ್ಲವೂ ನಮ್ಮೆಲ್ಲ ಚಲನವಲನಗಳನ್ನು ಸಂಗ್ರಹಿಸಿ ನಮ್ಮನ್ನು ಸಮರ್ಪಣಕ್ಕೆ ಅಣಿಗೊಳಿಸುವ ಸಾಧನಗಳು. ಪರಾಶಕ್ತಿಗೆ ಅಧೀನನಾಗಿ ಮಾರ್ಪಟ್ಟು, ಧ್ಯೇಯದ ಕಡೆಗೆ ತನ್ನನ್ನು ಆ ಶಕ್ತಿಯೇ ಮುನ್ನಡೆಸು ವಂತಾಗಬೇಕೆಂಬುದೇ ಮುಖ್ಯೋದ್ದೇಶ. ಶ್ರೀ ಮಾತೆಯವರು ದಾರಿ ತೋರುವರು, ಶಿಷ್ಯನ ಸ್ವಭಾವಕ್ಕೂ ಆವಶ್ಯಕತೆಗೂ ಅನುಸರಿಸಿ ಸಹಾಯ ಮಾಡುವರು. ಅಗತ್ಯವೆನಿಸಿದಾಗ ಶ್ರೀ ಮಾತೆಯವರೇ ತಾವಾಗಿ ತಮ್ಮ ಶಕ್ತಿಯನ್ನು ವಿನಿಯೋಗಿಸಿ ಅಧ್ಯಾತ್ಮಪಥದಲ್ಲಿಯ ಎಡರುತೊಡರುಗಳನ್ನು ಎದುರಿಸುವ ಸಾಮರ್ಥ್ಯವು ಸಾಧಕ ನಲ್ಲಿ ಉಂಟಾಗುವಂತೆ ಮಾಡುವರು. ದೈವೀಜೀವನದ ಅಭೀಪ್ಸೆಯಿದ್ದು ತಮ್ಮಿಂದ ನೆರವನ್ನು ಬಯಸುವ ಪ್ರತಿಯೊಂದು ಜೀವಿಗೂ ತಮ್ಮ ಪ್ರೇಮ-ಶಕ್ತಿ-ಜ್ಞಾನ-ಪ್ರಜ್ಞೆಗಳ ಸಾಕ್ಷಾತ್ ಸ್ವರೂಪದಿಂದ ಸಹಾಯ ಮಾಡಲು ಶ್ರೀ ಮಾತೆಯವರು ಸದಾ ಸಿದ್ಧರಾಗಿರುವರು.

ಈ ಯೋಗದಲ್ಲಿ ಆತ್ಮಸಂಪತ್ತನ್ನು ಪ್ರತ್ಯೇಕಿಸಿ ಜಗತ್ತಿನಿಂದ ಬೇರೆಯಾಗಿ ಇಡುವಂತಿಲ್ಲ. ಆತ್ಮಕ್ಕೆ ಮುಕ್ತಿ ಬೇಕು, ಹೌದು. ಆದರೆ ಜೀವಿಯ ಉಳಿದ ಭಾಗಕ್ಕೂ ಅಜ್ಞಾನ-ರೋಗ-ತಮಸ್ಸುಗಳ ಬಂಧನದಿಂದ ಬಿಡುಗಡೆಯಾಗಬೇಕು. ಪ್ರಜ್ಞೆಯಿಂದ ದೊರಕಿಸಿಕೊಂಡ ಶುದ್ಧತೆ ಹಾಗು ಔನ್ನತ್ಯ, ಮನಸ್ಸಿನಲ್ಲಿ ವಿಕಾಸಗೊಳ್ಳುವ ಇಚ್ಛಾಶಕ್ತಿ ಹಾಗು ಜ್ಞಾನ, ಮತ್ತು ಸತ್ತ್ವಶುದ್ಧ ಭಾವತರಂಗಗಳು—ಇವೆಲ್ಲವುಗಳಿಗೆ ಕ್ರಿಯಾರೂಪವನ್ನು ಕೊಡಬೇಕು, ಇವುಗಳನ್ನು ಜೀವನದಲ್ಲಿ ಪ್ರಕಟಗೊಳಿಸಬೇಕು. ಸಮಗ್ರ ವ್ಯಕ್ತಿತ್ವದ ಸಾಧನೆಗಾಗಿ ಅಂತರಾತ್ಮ ನಲ್ಲಿ ಅಂತರ್ಯಾಮಿಯಾದ ಭಗವಂತನ ಸಹಜ ಆವಿಷ್ಕಾರವಾಗುವಂತೆ ಮಾಡಬೇಕು. ಸಾಧನೆಯ ಬಹು ಮುಖ್ಯವಾದ ಈ ಅಂಶಕ್ಕೆ ಆಶ್ರಮದಲ್ಲಿ ಎಲ್ಲ ಸೌಲಭ್ಯಗಳನ್ನು ಒದಗಿಸಿಕೊಡಲಾಗುತ್ತಿದೆ. ಹೀಗೆ ಬಹು ಜನರನ್ನು ಒಳಗೊಂಡ ಸಮುದಾಯದಲ್ಲಿ ಜೀವನಕ್ಕೆ ಒಂದು ಜೀವಕಳೆ ಬರಬೇಕೆಂದು ಶ್ರೀ ಮಾತೆಯವರು ವಿಧಿಸಿದ ರೀತಿಗಳಿಗೂ ನಿಷ್ಕರ್ಷಿಸಿದ ಪ್ರಮಾಣಕ್ಕೂ ಅನುಸರಿಸಿ ಪ್ರತಿಯೊಬ್ಬರೂ ಅನೇಕ ಕಾರ್ಯಗಳನ್ನು ಮಾಡಬೇಕಾಗುತ್ತದೆ. ಆಶ್ರಮವಾಸಿಗಳು ಸ್ವಸಂತೋಷದಿಂದ ಆಯಾ ಕಾರ್ಯದಲ್ಲಿ ಭಾಗ ತೆಗೆದುಕೊಳ್ಳುತ್ತಾರೆ. ಕರ್ಮಕ್ಕೆ ಇಲ್ಲಿ ಸದಾ ಸ್ವಾಗತವಿದೆ. ಭಗವಂತನಿಗಾಗಿ ಮಾಡುವ ಕಾರ್ಯವೆಂದರೆ “ಪ್ರೇಮದಿಂದ ಮಾಡುವ ಪ್ರಾರ್ಥನೆ” ಎಂದು ಶ್ರೀ ಮಾತೆಯವರು ಹೇಳಿದ್ದಾರೆ. ತನ್ನ ಪಾಲಿಗೆ ಬಂದ ಕಾರ್ಯವನ್ನು ಪ್ರತಿಯೊಬ್ಬನೂ ಸ್ವಾಗತಿಸುತ್ತಾನೆ. ಸ್ವಾರ್ಥದ ಲವಲೇಶವಿಲ್ಲದೆ ಸೇವೆ ಮಾಡುವದನ್ನು ಕಲಿಯಲು ತನಗೆ ದೊರೆತ ಸುಸಂಧಿ ಯೆಂದು ತಿಳಿದುಕೊಳ್ಳುತ್ತಾನೆ. ದೇವರಲ್ಲಿ ತನಗಿದ್ದ ಭಕ್ತಿಯನ್ನು ಪ್ರಕಟಗೊಳಿಸುವ ಸಾಧನವೆಂದು ಬಗೆಯುತ್ತಾನೆ. ತನ್ನ ಆದರ್ಶವು ಕ್ರಮೇಣ ಪ್ರಗತಿಪರವಾಗಿ ಕೈಗೂಡುತ್ತಿರುವದನ್ನು ಶಿಸ್ತಿನಿಂದ ತೋರಿಸಲು

ಅನುಕೂಲವಾದ ಕ್ಷೇತ್ರವೆಂದು ಅದನ್ನು ಉಪಯೋಗಿಸುತ್ತಾನೆ. ಮೇಲು ಕೀಳು ಎಂಬ ಸಾಮಾನ್ಯರ ತಿಳುವಳಿಕೆಯಂತೆ ಇಲ್ಲಿ ತಾರತಮ್ಯವು ಕಂಡುಬರುವದಿಲ್ಲ. ನುರಿತ ಉದ್ದಿಮೆಗಾರನೊಬ್ಬನು ಆಶ್ರಮವನ್ನು ನೋಡಲು ಒಮ್ಮೆ ಬಂದಿದ್ದನು. ಆಶ್ರಮವಾಸಿಯೊಬ್ಬನು ಆತನಿಗೆ 'ವಿದ್ವತ್ತಾಪೂರ್ಣವಾದ ಬೋಧೆ'ಯನ್ನು ಮಾಡಿದನು. ಕೂದಲು ಕತ್ತರಿಸುವ ಉದ್ಯೋಗವನ್ನು ತನ್ನ ದಿನಚರಿಯ ಭಾಗವಾಗಿ ಅವನೇ ಮಾಡುವ ನೆಂಬುದು ತಿಳಿದುಬಂದಾಗ "ಇಲ್ಲಿ ಸಮತಾವಾದವೇ ಪ್ರಭಾವಿಯಾಗಿದೆ" ಎಂದು ಆತನು ಉದ್ಗಾರ ತೆಗೆದನು. ನಿಜವಾಗಿಯೂ ಹಾಗೆಯೇ ಇದೆ. ಆದರೆ ಅದು ಉನ್ನತವಾದ ಒಂದು ವಿಶೇಷ ಅರ್ಥದಲ್ಲಿ. ಮಾಡುವ ಕೆಲಸವು ಯಾವುದು ಎಂಬುದು ಆಶ್ರಮದಲ್ಲಿ ಮುಖ್ಯವಲ್ಲ. ಆದರೆ ಅದು ಹೇಗೆ ಮಾಡಲ್ಪಡುತ್ತಿದೆ ಎಂಬುದೇ ಮುಖ್ಯ. ಶ್ರೀ ಮಾತೆಯವರಿಗೆ ವ್ಯಕ್ತಿಯ ಸಾಮರ್ಥ್ಯವಾಗಲಿ ಕಾರ್ಯಕ್ಷಮತೆಯಾಗಲಿ ಅಷ್ಟು ಪ್ರಾಮುಖ್ಯವಾದುದಲ್ಲ. ಅವರು ನೋಡುವದು ಅವನು ಕೆಲಸ ಮಾಡುವಾಗಿನ ಅವನ ಚಿತ್ತವೃತ್ತಿಯನ್ನು. ಆತ್ಮಸಾಧನೆಯ ಅಂಶವಾಗಿರುವ ಆ ಕಾರ್ಯದ ಉಪಯುಕ್ತತೆಯ ಏರಿಳಿತಗಳು ಕೊನೆಯಲ್ಲಿ ಆ ವ್ಯಕ್ತಿಯ ಮನೋಭಾವವನ್ನೇ ಅವಲಂಬಿಸಿವೆ.

ಮನುಷ್ಯನು ಪ್ರಾಮುಖ್ಯವಾಗಿ ಮಾನಸಿಕ (mental) ಜೀವಿಯು. ಆತನ ಪೂರ್ಣ ವಿಕಾಸಕ್ಕಾಗಿರುವ ಯಾವುದೇ ಶಿಕ್ಷಣವು ಇಲ್ಲವೆ ಸಾಧನೆಯು ಆತನ ಮನಸ್ಸನ್ನು ಪಳಗಿಸಿ ಕ್ರಮಗೊಳಿಸುವದರ ಕಡೆಗೆ ಲಕ್ಷ್ಯವನ್ನು ಪೂರೈಸಬೇಕಾಗುವದು. ದೈವೀ ಜ್ಞಾನವನ್ನು ಸ್ವೀಕರಿಸಲಿಕ್ಕೂ ಅದನ್ನು ಸುತ್ತಲೂ ಪ್ರಸಾರ ಮಾಡಲಿಕ್ಕೂ ಮನಸ್ಸನ್ನು ಯೋಗ್ಯವಾದ ಸಾಧನವನ್ನಾಗಿ ಮಾಡುವದು ಎಲ್ಲ ಶಿಕ್ಷಣದ ಗುರಿಯಾಗಿರಬೇಕು. ಆ ಕಾರ್ಯಕ್ಕಾಗಿ ಮನಸ್ಸನ್ನು ಸಾಕಷ್ಟು ವಿಶುದ್ಧವಾಗಿ ಬೆಳೆಯಗೊಟ್ಟು, ಅದನ್ನು ಬಂಧನದಲ್ಲಿಡುವ ಇಚ್ಛೆಗಳಿಂದಲೂ ರಾಗಾದಿ ವಿಕಾರಗಳಿಂದಲೂ ಇಂದ್ರಿಯಪ್ರಭಾವದಿಂದಲೂ ಅದನ್ನು ಮುಕ್ತಮಾಡಬೇಕು. ತನ್ನದೇ ಆದ ಒಂದು ಜೀವನ ವನ್ನು ಮನಸ್ಸಿಗೆ ಸಾಧ್ಯಮಾಡಿಕೊಡಬೇಕು. ಈ ಆವಶ್ಯಕತೆಯು ಶ್ರೀ ಅರವಿಂದರಿಂದ ಸಹಜವಾಗಿಯೇ ಪೂರೈಸ ಲ್ಪಟ್ಟಿದೆ. ಅವರು ಬರೆದ ಲೇಖಗಳೂ ಸ್ಫಟಿಕಸದೃಶವಾದ ಬುದ್ಧಿಮತ್ತೆಯೂ ಸಾಹಿತ್ಯರಂಗದಲ್ಲಿ ಹೊಸ ಯುಗ ವನ್ನು ಆರಂಭಿಸಿ ಸಾಂಸ್ಕೃತಿಕ ಕ್ಷಿತಿಜದಲ್ಲಿ ಹೊಸ ದಾರಿಯನ್ನು ಹಾಕಿಕೊಟ್ಟಿವೆ. ಅವರಿಂದ ಸ್ಫೂರ್ತಿಯನ್ನೂ ಮಾರ್ಗದರ್ಶನವನ್ನೂ ಪಡೆದ ಅನೇಕಾನೇಕ ಲೇಖಕರೂ ಕವಿಗಳೂ ಕಲಾವಂತರೂ ಶ್ರೀ ಅರವಿಂದರ ಆದರ್ಶದ ಧ್ಯೇಯ ಧೋರಣೆಗಳನ್ನಿಟ್ಟುಕೊಂಡು ಇಂದು ಹೊರಟಿದ್ದಾರೆ. ಆಶ್ರಮದ ಪಾಠಶಾಲೆಯು ಬೆಳೆಯುತ್ತ ಪ್ರಬುದ್ಧಾ ವಸ್ಥೆಯನ್ನು ಮುಟ್ಟುತ್ತಿರುವದರಿಂದ ಈ ಕಾರ್ಯಭಾಗವು ಹೆಚ್ಚು ವಿಶಾಲವೂ ಆಳವೂ ಆದ ತಳಹದಿಯ ಮೇಲೆ ನಡೆಯುತ್ತಿದೆ. ಆಶ್ರಮದಲ್ಲಿ ಪ್ರಪಂಚದನಾನಾಭಾಗಗಳಿಗೆ ಸೇರಿದ ವಿವಿಧ ಜನರು ಒಟ್ಟುಗೂಡಿದ್ದರಿಂದ ಸಮನ್ವಯ ಸ್ವರೂಪದ ಸಂಸ್ಕೃತಿಯು ಅನಾಯಾಸವಾಗಿಯೇ ಅರಳಿ ನಿಂತಿದೆ.ಅವರ ಗರ್ಭದಲ್ಲಿ ನಾಳಿನ ಜಾಗತಿಕ ಸಂಸ್ಕೃತಿಯು ಬೆಳವಣಿಗೆಗೂ ತರಬೇತಿಗೂ ಅವಕಾಶವನ್ನು ಮಾಡಿಕೊಡಲಾಗಿದೆ. ಮಾನವನ ಪರಿಪೂರ್ಣ ವಿಕಾಸದಲ್ಲಿ ದೇಹದ ಹುದುಗಿದೆ. ಇದಲ್ಲದೆ ದೇಹದ ಕಾರ್ಯಭಾಗವೇನು ಅಲಕ್ಷಿಸುವಂತಹದಲ್ಲ. ಶ್ರೀ ತಾಯಿಯವರ ಸ್ವಂತ ನಿರ್ದೇಶ ದೊಂದಿಗೆ ಅವರ ಮೇಲ್ವಿಚಾರಣೆಯಲ್ಲಿಯೇ ಶಾರೀರಿಕ ಶಿಕ್ಷಣಕ್ರಮದ ಒಂದು ಯೋಜನೆಯನ್ನು ಕಾರ್ಯಕಾರಿಯಾಗಿ ಮಾಡಲಾಗುತ್ತಿದೆ. ಆ ಯೋಜನೆಯಲ್ಲಿ ಶಾರೀರಿಕ ಶಿಕ್ಷಣ, ಅಂಗಸಾಧನೆ (gymnastics), ಮಲ್ಲವಿದ್ಯೆ (Athletics), ಬೈಲಿನಲ್ಲಿಯ ಆಟಗಳು, ಈಸುವದು (acquatics) ಮುಂತಾದವುಗಳು ಸೇರಿಕೊಂಡು ಮಾನವ ದೇಹಕ್ಕೆ ಸವಿಸ್ತಾರವಾದಶಿಕ್ಷಣ ಕೊಡುವ ಉದ್ದೇಶವನ್ನಿಟ್ಟುಕೊಂಡಿವೆ. ದೇಹವನ್ನು ತನ್ನದೇ ಆದವ್ಯಕ್ತಿತ್ವವುಳ್ಳ ಸ್ವಯಂವೇದ್ಯ ಘಟಕವನ್ನಾಗಿಯೂ, ಅಂತರ್ಯಾಮಿಯಾದ ಆತ್ಮದ ಘನೀಭೂತ ಗೀತವನ್ನಾಗಿಯೂ ಮಾಡ ಬೇಕೆಂದಿದೆ. ಇಲ್ಲಿಯು ಈ ಶಿಕ್ಷಣಕ್ರಮಕ್ಕೆ ಚಾಲನೆ ಕೊಡುವ ಸೂತ್ರವು ಆಧ್ಯಾತ್ಮಿಕವಾಗಿದೆ. ಈ ಸೂತ್ರಕ್ಕನು ಸರಿಸಿ ನಡೆದ ಪ್ರಯತ್ನದ ಪ್ರಮಾಣಕ್ಕೆ ತಕ್ಕಂತೆ ಪ್ರತಿಯೊಬ್ಬನೂ ಫಲದಲ್ಲಿ ಭಾಗಿಯಾಗುತ್ತಾನೆ.

ಆಶ್ರಮಜೀವನದ ಈ ಎಲ್ಲ ಕಾರ್ಯರಂಗದಲ್ಲಿ ಸ್ತ್ರೀಪುರುಷರಿಗೆ ಸಮಾನವಾದ ಅವಕಾಶಗಳಿವೆ. ಗಂಡಸು-ಹೆಂಗಸರ ನಡುವೆ ವಾಡಿಕೆಯಾಗಿ ಮಾಡಲಾಗುವ ಭೇದಗಳಾಗಲಿ, ಹೆಂಗಸು ಅಬಲೆಯೆಂದು ಬಹು

ಕಾಲದಿಂದಲೂ ಕಡೆಗಣಿಸುತ್ತ ಬಂದ ಭಾವನೆಯಿಂದುಂಟಾಗುವ ಸಾಹಜಿಕ ಆಚಾರವಿಚಾರಗಳಾಗಲಿ, ಭಿನ್ನ ಭಿನ್ನ ಲಿಂಗಿಗಳನ್ನು ಪ್ರತ್ಯೇಕವಾಗಿ ಇಡುವದರಿಂದ ಉಂಟಾಗುವ ಪ್ರತ್ಯೇಕತಾ ಭಾವವಾಗಲಿ—ಇಲ್ಲಿ ರೂಪುಗೊಳ್ಳುತ್ತಿರುವ ಜೀವನದ ಮಾದರಿಯಲ್ಲಿ ಅಳಿಸಿಹೋಗುತ್ತಿವೆ.

೨

ನಮ್ಮ ಮಾತಿನಲ್ಲಿಯಾಗಲಿ, ಬರೆವಣಿಗೆಯಲ್ಲಿಯಾಗಲಿ ಅಸತ್ಯಕ್ಕೆ, ಅದು ಎಷ್ಟೇ ಸಣ್ಣದಿರಲಿ, ನಾವು ಎಡೆಕೊಟ್ಟರೆ, ಸತ್ಯದ ಪರಿಪೂರ್ಣ ದೂತರಾದೇವೆಂದು ಹೇಗೆ ಆಶಿಸಬಹುದು?

ಸತ್ಯದ ಪೂರ್ಣ ಸೇವಕನಾದವನು—ಅನಿಶ್ಚಿತ್ತ್ವಸ್ಪಷ್ಟತೆ, ಅತಿಶಯೋಕ್ತಿ ಇಲ್ಲವೆ ವಿದ್ರೂಪತೆ ಇವುಗಳಿಗೆ ಎಳ್ಳಷ್ಟೂ ಅವಕಾಶ ಕೊಡದಂತೆ ಅವುಗಳಿಂದ ದೂರವಿರಬೇಕು.

—ಶ್ರೀ ಮಾತೆಯವರು

ತಾನು ಉಪಯೋಗಿಸುವ ವಸ್ತುಗಳ ಬಗ್ಗೆ ಅಜಾಗರೂಕತೆ ತೋರುವದು ಅಜ್ಞಾನದ ಮತ್ತು ಅವಿವೇಕದ ಚಿಹ್ನವಾಗಿದೆ.

ಯಾವ ವಸ್ತುವಿನ ಬಗ್ಗೆ ನೀನು ಲಕ್ಷ್ಯ ಪೂರೈಸುವದಿಲ್ಲವೋ ಅಂಥ ವಸ್ತುವನ್ನು ಉಪಯೋಗಿಸಲು ನಿನಗೆ ಯಾವ ಹಕ್ಕೂ ಇಲ್ಲ.

ಯಾವೊಂದು ವಸ್ತುವು ನಿನಗೆ ಸಂಬಂಧಪಟ್ಟುದೆಂದು ಅದರ ಕಡೆಗೆ ನೋಡದೆ ಅದು ಕೂಡ ದೈವೀಪ್ರಜ್ಞೆಯ ಅಂಶವೊಂದನ್ನು ವ್ಯಕ್ತಪಡಿಸುವುದೆಂಬ ಭಾವನೆಯಿಂದ ನೀನು ಅದರೆಡೆಗೆ ಲಕ್ಷ್ಯಕೊಡಬೇಕು.

—ಶ್ರೀ ಮಾತೆಯವರು

ಆಶ್ರಮದಲ್ಲಿಯ ಜೀವನವನ್ನು ಸಾಮಾನ್ಯವಾಗಿ ಅರ್ಥ ಮಾಡಿಕೊಳ್ಳಲಿಕ್ಕೆ ಬೇಕಾಗುವ ಹಿನ್ನೆಲೆಯನ್ನು ಇಲ್ಲಿಯವರೆಗೆ ಕೊಟ್ಟಿದಾಯ್ತು. ಇನ್ನು ಮೇಲೆ, ದೈನಂದಿನ ಕಾರ್ಯಕ್ರಮಗಳು ಸರಾಗವಾಗಿ ಸಾಗುವಂತೆ ಕೈಕೊಳ್ಳಲಾದ ವ್ಯವಸ್ಥೆಗಳ ರೂಪರೇಷೆಗಳನ್ನು ವಿವರಿಸುವೆವು. ಮೇಲಧಿಕಾರಿಗಳು ಹಾಗು ಅವರ ಕೆಳಗಿನ ಅಧಿಕಾರಿಗಳು ಎಂಬೀ ಅಧಿಕಾರಿಗಣದ ತಾರತಮ್ಯವೇ ಇಲ್ಲಿ ಕಂಡುಬರಲಾರದೆಂಬುದನ್ನು ಮೊದಲೇ ತಿಳಿದುಕೊಳ್ಳಬೇಕು. ಒಬ್ಬೊಬ್ಬ ಆಶ್ರಮವಾಸಿಯು ಒಂದೊಂದು ಸೇವಾಶಾಖೆಯನ್ನು ನಿರ್ವಹಿಸುತ್ತಿದ್ದರೂ ಪ್ರತಿಯೊಬ್ಬನು ಶ್ರೀ ಮಾತೆಯವರು ಒಪ್ಪಿಸಿಕೊಟ್ಟ ಕಾರ್ಯಭಾಗವನ್ನು ನೋಡಿಕೊಳ್ಳುತ್ತ ಅವರಿಗೆ ಪ್ರತ್ಯಕ್ಷ ಹೊಣೆಗಾರನಾಗಿರುವನು. ಯಾರೂ ಯಾರ ಕೈಕೆಳಗೆ ದುಡಿಯಬೇಕಾಗಿಲ್ಲ. ಎಲ್ಲರೂ ಒಂದೇ ಕಾರ್ಯದಲ್ಲಿ ಜೊತೆಗೂಡಿದ್ದು ತನ್ನ ತನ್ನ ಪಾಲಿನ ಕೆಲಸವನ್ನು ಉತ್ತಮ ರೀತಿಯಿಂದ ಜರುಗಿಸಬೇಕೆಂಬುದೊಂದೇ ಸಾಮಾನ್ಯವಾದ ಉದ್ದೇಶವಾಗಿದೆ. ಸೇವಾಶಾಖೆಗಳ ಪ್ರಮುಖರು ಅವಶ್ಯವಿದ್ದಾಗೆಲ್ಲ ತಮ್ಮ ಕಾರ್ಯಗಳ ಬಗ್ಗೆ ಸೂಚನೆ ಸಲಹೆಗಳನ್ನು ಕಾಲಕಾಲಕ್ಕೆ ಶ್ರೀ ಮಾತೆಯವರಿಂದ ಪಡೆಯುತ್ತಾರೆ. ಯೋಗ್ಯ ಉಪಕ್ರಮಗಳಿಗೆ ಪ್ರೋತ್ಸಾಹವಿದೆ. ಪ್ರಯೋಗ ಮಾಡಲೂ ಹೆಚ್ಚಿಗೆ ತಿಳಿದುಕೊಳ್ಳಲೂ ಕೆಲವೊಂದು ಮಟ್ಟಿಗೆ ಸ್ವಾತಂತ್ರ್ಯವಿದೆ. ಕೆಲವೊಂದು ಕಡೆಗೆ ಮಿತವ್ಯಯದ ಅಭಾವವು ತೋರಿಬರಬಹುದು; ವೆಚ್ಚವನ್ನು ಹತೋಟಿಯಲ್ಲಿ ಇಡದೇ ಇದ್ದ ಹಾಗೆ ಕಂಡು ಬರುವ ಸಂಭವವಿದೆಯಾದರೂ, ವ್ಯಕ್ತಿಯಲ್ಲಿ ವಿಕಸಿಸುತ್ತಿರುವ ವ್ಯಕ್ತಿತ್ವದ ಬೆಳವಣಿಗೆಗಾಗಿಯೂ ಕರ್ಮಕ್ಷೇತ್ರವನ್ನು ಆಟದ ಬೈಲಿನಂತೆ ಉತ್ಸಾಹದಾಯಕವಾಗಿ ಮಾಡಿಕೊಡುವ ಉದ್ದೇಶದಿಂದಲೂ ಹಾಗೆ ಮಾಡಲಾಗುತ್ತಿದೆ. ಕರ್ತವ್ಯಕರ್ಮಗಳನ್ನು ಕೇವಲ ಕರ್ತವ್ಯಕರ್ಮಗಳೆಂದೇ ಮಾಡುತ್ತ ಹೋಗುವುದು ಮುಖ್ಯವಲ್ಲ.

ಆಶ್ರಮವಾಸಿಗಳು ಇರುವದಕ್ಕಾಗಿ ನೂರಕ್ಕೆ ಮೇಲ್ಪಟ್ಟು ಮನೆಗಳಿವೆ. ಅವುಗಳನ್ನು ಸುಸ್ಥಿತಿಯಲ್ಲಿ ಕಾಯ್ದುಕೊಂಡು ಹೋಗಲಿಕ್ಕೂ ಹೊಸದಾಗಿ ಕಟ್ಟಿಸಲಿಕ್ಕೂ ಶಿಲ್ಪಶಾಖೆಯಿದೆ (Building Service). ಆಶ್ರಮವಾಸಿಗಳ ಸಂಖ್ಯೆ ಬೆಳೆದಂತೆ ಹೊಸ ಮನೆಗಳನ್ನು ಕಟ್ಟುವದೂ, ಹಳೆಯವುಗಳನ್ನು ಸರಿಪಡಿಸುವದೂ ಅದರ ಕೆಲಸವಾಗಿದೆ. ಇದರಲ್ಲಿ ೧೫೦ ಕಾರ್ಮಿಕರೂ ಸುಮಾರು ೨೫ ಆಶ್ರಮವಾಸಿಗಳೂ ಕಾರ್ಯನಿರತರಾಗಿದ್ದಾರೆ. ಈ ಶಾಖೆಗೆ ತನ್ನದೇ ಆದ ಇಟ್ಟಂಗಿ ಹಾಗು ಕಾಂಕ್ರೀಟ ಫ್ಯಾಕ್ಟರಿಗಳೂ ಜೊತೆಯಲ್ಲಿಯೇ ಕುಂಭಕಲಾವಿಭಾಗವೂ ಇವೆ.

ಈ ಮನೆಗಳ ಸಂರಕ್ಷಣೆಗಾಗಿ ಸಹಾಯಕವಾದ ಕೆಲವು ಸೇವಾಶಾಖೆಗಳಿವೆ. ಉದಾ: ನೈರ್ಮಲ್ಯ, ನೀರಿನ ಪೂರೈಕೆ ಹಾಗು ವಿದ್ಯುತ್ತು ಇವುಗಳಿಗೆ ಸಂಬಂಧಿಸಿದ ಶಾಖೆಗಳು. ಅನೇಕ ಆಶ್ರಮವಾಸಿಗಳು ಬಟ್ಟೆ ಒಗೆಯುವದನ್ನು, ಪಾತ್ರೆ ಬೆಳಗುವದನ್ನು ತಾವೇ ನೋಡಿಕೊಳ್ಳುತ್ತಿದ್ದರೂ, ಗೃಹಕೃತ್ಯಶಾಖೆಯವರಿಂದ ದಿನಾಲು ನಿಯಮಿತ ಕಾಲಕ್ಕೆ ಸೇವೆ ತೆಗೆದುಕೊಳ್ಳುವವರಿಗೂ ಕೊರತೆಯಿಲ್ಲ.

ಎಲ್ಲ ಕೋಣೆಗಳಲ್ಲಿಯೂ ಕಡಿಮೆಯೆಂದರೆ ಒಂದು ಮಂಚ, ಒಂದು ಮೇಜು, ಕುರ್ಚಿ, ಅರಿವೆಯಿಡಲು ಅಡ್ಡಣಿಕೆ (Stand) ಹಾಗೂ ಕಪಾಟು ಇವಿಷ್ಟು ಇದ್ದೇ ಇರುವವು. ಆ ಕೋಣೆಯಲ್ಲಿರುವವರ ಆವಶ್ಯಕತೆಗನುಸಾರವಾಗಿ ಇನ್ನು ಕೆಲವು ಉಪಕರಣಗಳೂ ಇರುವದುಂಟು. ಉಪಕರಣಶಾಖೆಯು ಬಡಿಗತನದ ಎರಡು ಕಾರಖಾನೆಗಳನ್ನು ನಡಿಸುತ್ತಿದ್ದು, ಆಶ್ರಮವಾಸಿಗಳ ಹಾಗು ಇತರ ಅಭ್ಯಾಗತರ ಆವಶ್ಯಕತೆಗಳನ್ನು ಪೂರೈಸುವದು.

ಹೊಲಿಗೆಯ ವಿಭಾಗವು ಸ್ತ್ರೀ-ಪುರುಷರ ಬಟ್ಟೆಬರೆಗಳನ್ನು ಪೂರೈಸುವದು. ಧೋಬಿ ವಿಭಾಗವು ಬಟ್ಟೆಗಳನ್ನು ಒಗೆದು ಇಸ್ತ್ರೀ ಮಾಡುವದು. ಪ್ರತಿಯೊಬ್ಬರಿಗೆ ಕೊಡಲಾಗುವ ತಮ್ಮ ಪಾಲಿನ ಸಬಕಾರವನ್ನಲ್ಲದೇ ಪ್ರತಿ ವಾರ ೫ ಅರಿವೆಗಳನ್ನು ಈ ಧೋಬಿ ವಿಭಾಗಕ್ಕೆ ಕೊಡಬಹುದೆಂಬ ಸವಲತ್ತು ಇದೆ. ಪಾದರಕ್ಷಾ ಶಾಖೆಯವರು ಪ್ರತಿ ವರ್ಷ ಹೊಸ ಜೋಡುಗಳನ್ನು ಆಶ್ರಮವಾಸಿಗಳಿಗೆ ಕೊಡುವರು. ಅಗತ್ಯವಿದ್ದಾಗ ಅವುಗಳನ್ನು ಸರಿಗೊಳಿಸುವರು.

ಎಲ್ಲರಿಗೂ ಸಾಮಾನ್ಯವಾದ ಒಂದೇ ಅಡಿಗೆಯ ಮನೆಯೂ, ಊಟದ ಮನೆಯೂ ಇದೆ. ಅಲ್ಲಿ ಒಂದೇ ಕಾಲಕ್ಕೆ ಸಾವಿರ ಜನರಿಗೆ ಬಡಿಸುವ ಏರ್ಪಾಡು ಇದೆ. ಇಲ್ಲಿ ಕೊಡಲಾಗುವ ಊಟವು ಶಾಕಾಹಾರವಾಗಿದ್ದು ಅದು ಸಾತ್ತ್ವಿಕವಿರುತ್ತದೆ. ಅದರಲ್ಲಿ ಮಸಾಲೆ ಹಾಕಿರುವದಿಲ್ಲವೆಂದರೂ ನಡೆಯುವದು. ದಿನದ ಊಟವೆಂದರೆ—

**ಫಲಾಹಾರ :**

೧ ಕಪ್ಪು ಹಾಲು (ಇಷ್ಟಪಟ್ಟರೆ ಕೋಕೋ)
೧ ಬನ್ನು ಇಲ್ಲವೆ ಬ್ರೆಡ್ಡಿನ ೩ ತುಣುಕುಗಳು
೧ ಬಾಳೆಯ ಹಣ್ಣು
ಸಕ್ಕರೆ (ಪರಿಮಾಣವು ರೇಶನ್ನಿನ ಮೇರೆಗೆ)

**ಮಧ್ಯಾಹ್ನದ ಊಟ :**

೧ ಬಟ್ಟಲು ಅನ್ನ
೧ ಬಟ್ಟಲು ಪಲ್ಲೆ, ಸಾರು

೧ ಕಪ್ಪು ಮೊಸರು
೨ ಬಾಳೆಯ ಹಣ್ಣುಗಳು
ನಿಂಬೆಯ ಹಣ್ಣು

**ರಾತ್ರಿಯ ಊಟ :**

೧ ಕಪ್ಪು ಹಾಲು
೪ ತುಣುಕು ಬ್ರೆಡ್ಡು
೧ ಬಟ್ಟಲು ಪಲ್ಲೆ

ವ್ಯಕ್ತಿಯ ಆವಶ್ಯಕತೆಯನ್ನನುಸರಿಸಿ, ಕೊಡುವ ಪ್ರಮಾಣದಲ್ಲಿ ವ್ಯತ್ಯಾಸ ಮಾಡಲಾಗುವದೆಂಬುದನ್ನು ಹೇಳುವದು ಅವಶ್ಯವಿಲ್ಲ. ಅಡಿಗೆ ಮಾಡುವದೂ, ಬಡಿಸುವದೂ ಆಶ್ರಮವಾಸಿಗಳಿಂದಲೇ ನಡೆಯುತ್ತದೆ. ಬಹಳ ಜನರು ಊಟದ ಮನೆಯಲ್ಲಿಯೇ ಊಟ ಮಾಡುತ್ತಾರೆ. ಆದರೆ ಇನ್ನೂ ಕೆಲವರಿಗೆ ಊಟದ ಡಬ್ಬಿಗಳಲ್ಲಿ ಅವರ ಊಟವನ್ನು ಅವರು ಇದ್ದಲ್ಲಿಗೆ ಮುಟ್ಟಿಸಲಾಗುತ್ತಿದೆ. ಈ ಕೆಲಸವನ್ನು ಬಂಡಿಶಾಖೆಯವರು ನೋಡಿಕೊಳ್ಳುತ್ತಾರೆ. ಪಾತ್ರೆ ತೊಳೆಯುವದನ್ನು ಊಟದ ಮನೆಗೆ ಜೋಡಿಸಲಾದ 'ಪಾತ್ರೆ ತೊಳೆಯುವ ವಿಭಾಗ'ವು ನೋಡಿಕೊಳ್ಳುತ್ತದೆ. ಪ್ರತಿಯೊಂದು ಪಾತ್ರೆಯನ್ನು ಔಷಧಿಮಿಶ್ರಿತ ನೀರಿನಲ್ಲಿ ಅನೇಕ ಸಲ ತೊಳೆಯಲಾಗುತ್ತದೆ.

ಆಶ್ರಮವಾಸಿಗಳಿಗೆ ಸೋಸಿದ ನೀರನ್ನು ಪೂರೈಸಲು ವ್ಯವಸ್ಥೆ ಮಾಡಲಾಗಿದೆ. ದೇಹಕ್ಕೆ ರೋಗ ಬಾರದ ಹಾಗೆ ನೋಡಿಕೊಳ್ಳಲು ನಿಸರ್ಗ ಹಾಗು ಯೋಗಶಕ್ತಿಯ ಮೇಲೆ ಹೆಚ್ಚಿಗೆ ಭಾರವನ್ನಿಟ್ಟಿದ್ದರೂ ಅಲೋಪಥಿ ಹಾಗು ಆಯುರ್ವೇದ ಪದ್ಧತಿಗನುಸಾರವಾಗಿ ಔಷಧಿ ಕೊಡಲು ಔಷಧಾಲಯವಿದೆ. ಇದರ ಜೊತೆಯಲ್ಲಿಯೇ ಹೋಮಿಯೋಪಥಿಯ ಪ್ರಕಾರ ಸಲಹೆ ಕೊಡಲು ಡಾಕ್ಟರರೂ ಇದ್ದಾರೆ. ಇಲ್ಲಿ ಒಂದು ದಂತ ಚಿಕಿತ್ಸಾಲಯವೂ ಇದೆ. ಅಂಗಮರ್ದನ ಚಿಕಿತ್ಸಾ ವಿಭಾಗವೂ ಇದೆ; ಅದರಲ್ಲಿ ವಿದ್ಯುದುಪಕರಣಗಳನ್ನು ಇಡಲಾಗಿದೆ. ರೋಗನಿದಾನ ಪ್ರಯೋಗಶಾಲೆಯೂ ಇದೆ.

ಆಶ್ರಮದಲ್ಲಿ ಉಪಯೋಗಿಸುವ ಎಲ್ಲ ಬ್ರೆಡ್ಡುಗಳನ್ನು ಬೇಯಿಸಲು ಪ್ರತ್ಯೇಕವಾದ ಬೇಕರಿಯುಂಟು. ಅಡಿಗೆಮನೆ ಹಾಗೂ ಇತರ ಆವಶ್ಯಕತೆಗಳನ್ನು ಪೂರೈಸಲು ಒಂದು ಹಿಟ್ಟಿನ ಗಿರಣಿ ಹಾಗು ಎಣ್ಣೆಯ ಗಾಣ (ಯಂತ್ರ)ವಿದೆ. ಉರುವಲ ಶಾಖೆಯು ಅಡುಗೆಮನೆಗೂ ತಮ್ಮ ಬೇರೆ ಕಾರ್ಯಕ್ಕಾಗಿ ಬೇಡುವ ಆಶ್ರಮವಾಸಿಗಳಿಗೂ, ಇದ್ದಲಿ ಕಟ್ಟಿಗೆಗಳನ್ನು ಪೂರೈಸುವದು.

ಹಲವು ಹೊಲಗಳೂ, ತೆಂಗಿನ ಬನಗಳೂ, ತೋಟಗಳೂ ಆಶ್ರಮದ ಆಸ್ತಿಗಳಾಗಿದ್ದು ಅವುಗಳನ್ನು ನೋಡಿಕೊಳ್ಳಲು ಪ್ರತ್ಯೇಕ ಕೆಲಸಗಾರರಿದ್ದಾರೆ. ನೆಲ್ಲುಗದ್ದೆಯಿಂದ ಬರುವ ಅಕ್ಕಿಯು ಆಶ್ರಮಕ್ಕೆ ಸಾಕಾಗುವಷ್ಟು ಆಗದಿದ್ದರೂ, ಬರುವ ಬೆಳೆಯೇನು ಸಣ್ಣದಿಲ್ಲ; ಹಾಗು ಕೊಯ್ಯುವ ಕೆಲಸವನ್ನು ಆಶ್ರಮವಾಸಿಗಳೇ ಮಾಡುವರು. ಹೊಲಗಳಿಂದ ಮೇವು ಹಾಗು ಕಬ್ಬಿನ ಪೂರೈಕೆಯಾಗುತ್ತದೆ. ಘಟ್ಟದ ಮೇಲಿನ ಉತ್ತಮ ಆಕಳುಗಳನ್ನು ಸಾಕಿದಂಥ ಒಂದು ದುಗ್ಧಾಲಯವಿದೆ. ಕೋಳಿ ವಿಭಾಗವೂ ಕೆಲಸ ಮಾಡುತ್ತಿದೆ.

ಆಶ್ರಮಕ್ಕೆ ಬೇಕಾಗುವ ಕಾಯಿಪಲ್ಲೆ-ಹಣ್ಣುಗಳ ಕೆಲವಂಶವನ್ನು ತೋಟಗಳಿಂದ ಪೂರೈಸಲಾಗುತ್ತಿದೆ. ಪುಷ್ಪಸೇವಾ ಶಾಖೆಯವರು ದಿನಾಲು ತೋಟದಲ್ಲಿ ಅರಳಿದ ಹೂವುಗಳನ್ನು ಮುಂಜಾವಿನಲ್ಲಿ ಕೊಯ್ದು

ಶ್ರೀ ತಾಯಿಯವರಿಗೆ ತಂದು ಕೊಡುವರು. ಶ್ರೀ ತಾಯಿಯವರು ಅವುಗಳನ್ನು ಪ್ರಸಾದಕ್ಕೆಂದು ಉಪಯೋಗಿಸುವರು. ಆಶ್ರಮವಾಸಿಗಳೂ ಆ ಹೂವುಗಳನ್ನು 'ಸಮಾಧಿ'ಗೆ ಇಲ್ಲವೆ ಶ್ರೀ ತಾಯಿಯವರಿಗೆ ಅರ್ಪಿಸುವರು. ಸಸ್ಯರಾಜ್ಯಕ್ಕಾದರೂ ತನ್ನದೇ ಆದ ಚೈತ್ಯಶಕ್ತಿ ಇದೆ. ಶ್ರೀ ತಾಯಿಯವರು ಪ್ರತಿ ಹೂವಿನ ನಿಜವಾದ ಆಂತರಿಕ ಮಹತ್ವವನ್ನು ಕಂಡುಹಿಡಿದು ಮಾನವನ ಭಾಷೆಯಲ್ಲಿ ಅದನ್ನು ವಿವರಿಸಿದ್ದಾರೆ. ಆಶ್ರಮದ ಸಂಘಜೀವನದಲ್ಲಿ ಭಾಗ ತೆಗೆದುಕೊಳ್ಳಲು ಅವುಗಳಿಗೂ ಆಸ್ಪದ ಮಾಡಿಕೊಟ್ಟದ್ದಾರೆ.

ತಾಂತ್ರಿಕವಾದ ಕೆಲಸಗಳನ್ನು ಆಶ್ರಮವಾಸಿಗಳೇ ಸ್ವತಃ ಆಶ್ರಮದ ಎರಡು ತಂತ್ರಾಲಯ (Work-shop) ಗಳಲ್ಲಿ ಮಾಡುತ್ತಿದ್ದಾರೆ. ನಾನಾ ಪ್ರಕಾರದ ಕೆಲಸಗಳನ್ನು ಇಲ್ಲಿ ಮಾಡಲಾಗುತ್ತಿದೆ. ಆಟೋಮೊಬಾಯಿಲ ಹಾಗು ಯಂತ್ರಗಳನ್ನು ಸರಿಪಡಿಸುವದು, ತಗಡಿನ ಕೆಲಸ, ಬೆಸೆಯುವದು, ಸ್ಪ್ರೂ ಹಾಗು ಸ್ಪ್ರೇ ಪೇಂಟಂಗ, ಶೀಟ ವರ್ಕ ಮೊದಲಾದವುಗಳನ್ನು ಕೈಕೊಳ್ಳಲಾಗುತ್ತದೆ. ಫೌಂಡರಿ, ಒಂದು ಸ್ಮಿಥಿ (ಕಮ್ಮಾರಶಾಲೆ), ಫಿಟರ ವಿಭಾಗ ಮೊದಲಾದವುಗಳಿಂದಾಗಿ ವಿವಿಧ ಉದ್ಯೋಗಗಳ ಕೇಂದ್ರವೇ ಇಲ್ಲಿ ಉದಯಿಸಿದಂತಿದ್ದು, ಸ್ಥಳಿಕ ಸರಕಾರವೂ ಸಾರ್ವಜನಿಕರೂ ಆಗಾಗ ಅದರ ಲಾಭವನ್ನು ಪಡೆಯುವರು.

ಕಾಗದ ಶಾಖೆಯವರು ರದ್ದೀ ಕಾಗದಗಳನ್ನೂ, ಹರಕು ಅರಿವೆಗಳನ್ನೂ ಉಪಯೋಗಿಸಿ ಅನೇಕ ವಿಧದ ದಪ್ಪ ಕಾಗದಗಳನ್ನೂ, ರಟ್ಟು (ಕಾರ್ಡ ಬೋರ್ಡು) ಗಳನ್ನೂ ಮಾಡುತ್ತಾರೆ. ಉಪಯೋಗಿಸಲು ಬರುವ ಯಾವ ಸಾಮಾನನ್ನೂ ಹೊರಗೆ ಚೆಲ್ಲಗೊಡುವದಿಲ್ಲ. ಒಮ್ಮೆ ಉಪಯೋಗಿಸಲಾದ ಪೋಸ್ಟ ಪಾಕೀಟುಗಳನ್ನೂ ಆರಿಸಿಕೊಂಡು ಚೀಟಿ ಪುಸ್ತಕ (chit-pads) ಮಾಡಲಾಗುತ್ತಿದೆ. ಉಪಯೋಗಿಸಿದ ಚಹದ ಎಲೆಗಳನ್ನು ತೋಟದ ಗೊಬ್ಬರಕ್ಕಾಗಿಯೂ, ಕಾರ್ಡಬೋರ್ಡ ರಟ್ಟು(Carton)ಗಳನ್ನು ಕೈಕೆಲಸಕ್ಕಾಗಿಯೂ ಉಪಯೋಗಿಸುತ್ತಿದ್ದು ನಿರುಪಯೋಗಿಗಳೆಂದು ಕಂಡುಬರುವ ಎಲ್ಲ ವಸ್ತುಗಳನ್ನು ತಕ್ಕ ರೀತಿಯಲ್ಲಿ ಉಪಯೋಗಿಸಲಾಗುತ್ತಿದೆ.

ನೆಯ್ಗೆ ಶಾಖೆಯನ್ನು ಸ್ತ್ರೀಯರೇ ಕೆಲವು ಕೂಲಿಕಾರರ ಸಹಾಯದಿಂದ ನಡಿಸುತ್ತಾರೆ. ಬಾಗಿಲಿಗೆ ಬಿಡುವ ಚಾಪೆಗಳಿಂದ ಮೊದಲು ಮಾಡಿ ಮಂಚಕ್ಕೆ ಕಟ್ಟುವ ಅರಿವೆಪಟ್ಟಿ(Tape-cots)ಗಳ ವರೆಗಿನ ಕೆಲಸಗಳು ಹಳ್ಳಿಯ ಕೈಗಾರಿಕೆ ಶಾಖೆ(Cottage Industries)ಯವರಿಂದ ಮಾಡಲ್ಪಡುತ್ತವೆ.

ಒಂದು ಮುದ್ರಣಾಲಯವೂ ಇದೆ. ಅದರಲ್ಲಿ ಎರಡು ಮೊನೋಟಾಯಿಪ ಮಶೀನುಗಳಿದ್ದು, ಮಡಚಲಿಕ್ಕೂ ಕತ್ತರಿಸಲಿಕ್ಕೂ ಹೊಲಿಯಲಿಕ್ಕೂ ಬೇಕಾದ ಯಂತ್ರಗಳಿವೆ. ಆಶ್ರಮವಾಸಿಗಳಿಂದಲೇ ಬಹುಶಃ ಎಲ್ಲ ಕೆಲಸಗಳು ಮಾಡಲ್ಪಡುತ್ತವೆ. ಆಶ್ರಮದ ಮುದ್ರಣದ ಕೆಲಸವೇ ಬೇಕಾದಷ್ಟಿದ್ದರೂ, ಹೊರಗಿನ ಕೆಲಸವನ್ನು ಕೂಡ ಆಗಾಗ ಮಾಡಲಾಗುತ್ತದೆ. ಇಂಗ್ಲಿಷ್, ಫ್ರೆಂಚ್, ಹಿಂದಿ, ಸಂಸ್ಕೃತ, ಮರಾಠಿ, ಬಂಗಾಲಿ, ಗುಜರಾತಿ, ತಮಿಳ ಹಾಗು ತೆಲಗು ಭಾಷೆಗಳಲ್ಲಿಯ ಮುದ್ರಣಕಾರ್ಯ ನಡೆಯುತ್ತದೆ. ಚೀನೀ ವಿಭಾಗವನ್ನು ಪ್ರಾರಂಭಿಸುವ ಬಗ್ಗೆ ಏರ್ಪಾಡು ನಡೆದಿದೆ. ಫ್ಲೆಕ್ಸೊ ಮತ್ತು ಬ್ಲಾಕ್ ಮುದ್ರಣದ ವ್ಯವಸ್ಥೆಯನ್ನು ಮಾಡಲಾಗಿದೆ.

ಆಶ್ರಮಕ್ಕೆ ಬೇಕಾಗುವದನ್ನೆಲ್ಲ ತರುವ ಕೆಲಸವು ಖರೀದಿ ಶಾಖೆಯವರಿಂದ ಮಾಡಲ್ಪಡುತ್ತದೆ. ಆಶ್ರಮದ ಉಗ್ರಾಣದಲ್ಲಿ ಅವುಗಳನ್ನು ಇಡಲಾಗುತ್ತದೆ. ಅದಕ್ಕೆ 'ಸಂಪತ್ತು' ( Prosperity ) ಎಂಬ ಅಭಿದಾನ ಬಂದಿದೆ. ತಮಗೆ ಬೇಕಾಗುವ ಸಾಮಾನುಗಳನ್ನೆಲ್ಲ ಮೊದಲೇ ತಮಗೆ ಪೂರೈಸಲಾದ ಫಾರ್ಮುಗಳಲ್ಲಿ ಬರೆದು ಆಶ್ರಮವಾಸಿಗಳು ಕೊಡಬೇಕಾಗುವದು. ಪ್ರತಿತಿಂಗಳು ಮೊದಲನೆಯ ದಿನ ಎಲ್ಲರೂ ಶ್ರೀ ತಾಯಿಯವರ ಆಶೀರ್ವಾದ ಪಡೆಯಲು ಹೋದಾಗ ಈ ಸಾಮಾನುಗಳು ಪೂರೈಸಲ್ಪಡುವವು.

ಶಾಲೆಯ ಚಟುವಟಿಕೆಗಳನ್ನು 'ಶ್ರೀ ಅರವಿಂದ ವಿದ್ಯಾಪೀಠ: ಆದರ ಧ್ಯೇಯ ಧೋರಣೆಗಳು' ಎಂಬ ಇನ್ನೊಂದು ಲೇಖದಲ್ಲಿ ವಿವರಿಸಲಾಗಿದೆ. ವರ್ಗದ ಕೋಣೆಗಳಲ್ಲಿ ಕಲಿಸಲಾಗುತ್ತಿರುವ ಪಾಠಗಳ ಜೊತೆಗೆ ಆಟದ ಬಯಲಿನ ಬಯಲುಹವೆಯಲ್ಲಿ ಚಾಕ್ಷುಷ ಶಿಕ್ಷಣವನ್ನೂ ಸಾಂಸ್ಕೃತಿಕ ಮಹತ್ವವುಳ್ಳ ಇತರ ಚಟುವಟಿಕೆಗಳನ್ನೂ ಯೋಜಿಸಲಾಗಿದೆ. ಅವುಗಳ ಕೆಲವು ವಿವರಗಳನ್ನು ಇಲ್ಲಿ ಕೊಡಲಾಗಿದೆ.

ಒಂದು ಪುಸ್ತಕಾಲಯವಿದ್ದು ಆದರಲ್ಲಿ ಸದ್ಯಕ್ಕೆ ೧೫ ಭಾಷೆಯೊಳಗಿನ ೨೦,೦೦೦ ಪುಸ್ತಕಗಳು ಇವೆ. ಪುಸ್ತಕಗಳ ಸಂಖ್ಯೆ ಬೆಳೆಯುತ್ತಿದೆ. ಇದರ ಹತ್ತಿರವೇ ಜೋಡಿಸಲಾದ ವಾಚನಾಲಯದಲ್ಲಿ ಇಟ್ಟಿರುವ ದೈನಿಕ ಹಾಗು ನಿಯತಕಾಲಿಕ ಪತ್ರಗಳನ್ನೋದುವ ಕಡೆಗೆ ಚಿಕ್ಕವರ ಒಲವು ಬಹಳವಿದ್ದುದು ಕಂಡುಬರುತ್ತದೆ.

ಆತ್ಮಸಂತೋಷಕ್ಕೊಂದು ಛಾಯಾಚಿತ್ರಗ್ರಹಣ ಮಾಡುತ್ತಿರುವ ವಿಲಾಸಿಗಳು ಅನೇಕರಿದ್ದಾರೆ. ಸ್ಥಳೀಯ ಪ್ರದರ್ಶನಗಳಲ್ಲಿ ಅವರ ಚಾತುರ್ಯ ಅನೇಕಸಲ ಅತಿಶಯವಾದ ಹೊಗಳಿಕೆಗೆ ಪಾತ್ರವಾಗಿದೆ. ಶ್ರೀ ಅರವಿಂದರು, ಶ್ರೀ ತಾಯಿಯವರು, ಆಶ್ರಮದ ದೃಶ್ಯಗಳು, ಭಾವಚಿತ್ರಗಳು, ಇತರ ಸಾಮಾನ್ಯ ದೃಶ್ಯಗಳು ಇವುಗಳ ಫೋಟೋ ಅವರು ತೆಗೆಯುತ್ತಾರೆ. ಸ್ಥಳಿಕ ಜನರ ಹಾಗು ಅಭ್ಯಾಗತರ ಭಾವಚಿತ್ರಗ್ರಹಣ ಕಾರ್ಯಗಳನ್ನು ಮಾಡಿಕೊಡಲು ಶ್ರೀ ತಾಯಿಯವರು ಅವರಿಗೆ ಅನುಮತಿ ಕೊಟ್ಟಿದ್ದಾರೆ. ಅದಕ್ಕೆ ಬೇಡಿಕೆಯೂ ಮೇಲಿಂದ ಮೇಲೆ ಇದ್ದೇ ಇರುತ್ತದೆ.

ತಮ್ಮದೇ ಆದ ದಾರಿಯಿಂದ ಮುಂದುವರಿದ ವರ್ಣಚಿತ್ರಕಾರರೂ ಉಂಟು. ಪ್ರಸಿದ್ಧ ಚಿತ್ರವಾದ 'ಹಿರಣ್ಮಯ ಪುರುಷ'ದಂತಹ ಕೆಲವು ಚಿತ್ರಗಳು ಹಿಂದುಸ್ಥಾನ ಹಾಗು ಇತರ ದೇಶಗಳಲ್ಲಿಯ ಚಿತ್ರಕಲಾ ವಿಮರ್ಶಕರ ಪ್ರಶಂಸೆಗೆ ಪಾತ್ರವಾಗಿವೆ. ಹಿರಿಯರಿಂದ ಸಹಾಯವನ್ನೂ ಶಿಕ್ಷಣವನ್ನೂ ಪಡೆದು ತಮ್ಮ ಕಲೆಯನ್ನು ವಿಕಸಿಸಿಕೊಳ್ಳುತ್ತಿರುವಂಥ ಚಿಕ್ಕ ಕಲಾವಿದರ ಸಂಖ್ಯೆಯೂ ಕಡಿಮೆಯಾಗಿಲ್ಲ. ಸಂಗೀತ (ಸ್ವರ ಹಾಗು ವಾದ್ಯ) ನೃತ್ಯ ಹಾಗು ನಾಟ್ಯಕಲೆ ಇವುಗಳನ್ನು ತನ್ನದೇ ಆದ ರೀತಿಯಲ್ಲಿ ವಿವರಿಸುವ ತಜ್ಞರು ಆಶ್ರಮದಲ್ಲಿ ಇದ್ದಾರೆ. ಈ ಕಲೆಗಳ ಅಭ್ಯಾಸ ಮಾಡಬೇಕೆನ್ನುವವರಿಗೆ ಅನುಕೂಲ ಮಾಡಿಕೊಡಲಾಗಿದೆ.

ಮುಖ್ಯವಾದ ಇನ್ನೊಂದು ವಿಭಾಗವೆಂದರೆ ಪ್ರಕಟಣೆಯದು. ಶ್ರೀ ಅರವಿಂದರ ಹಾಗು ಶ್ರೀ ತಾಯಿಯವರ ಗ್ರಂಥಗಳು, ಅವರ ಭಾಷಣ ಮಾತುಕಥೆಗಳು, ಇವುಗಳನ್ನೆಲ್ಲ ಸಂಗ್ರಹಿಸಿ ಸಂಪಾದಿಸಿ ವಿವಿಧ ಭಾಷೆಗಳಲ್ಲಿ ಭಾಷಾಂತರಿಸಿ ಪ್ರಸಿದ್ಧಿಸುವ ಕಾರ್ಯವನ್ನು ಮಾಡಲಾಗುತ್ತಿದೆ. ಗುರುವಿನ ತತ್ತ್ವ ಹಾಗು ಉಪದೇಶಗಳನ್ನು ವಿವರಿಸುವದಕ್ಕಾಗಿಯೇ ಮೀಸಲಾಗಿರುವ ಅನೇಕ ನಿಯತಕಾಲಿಕ ಪ್ರತಿಕೆಗಳನ್ನು ಇಂಗ್ಲೀಷು ಬಂಗಾಲಿ, ಹಿಂದಿ, ಗುಜರಾಥಿ, ಕನ್ನಡ ಹಾಗು ತೆಲಗು ಭಾಷೆಗಳಲ್ಲಿ ಹೊರಡಿಸಲಾಗುತ್ತಿದೆ. ಶಾಲೆಯ ಮಕ್ಕಳು ೫ ಭಾಷೆಗಳಲ್ಲಿ ತಮ್ಮನೇ ಹಸ್ತಪತ್ರಿಕೆಗಳನ್ನು ಹೊರಡಿಸುತ್ತಿದ್ದಾರೆ. ನಿಯತಕಾಲಿಕಗಳ ಈ ಮಾಲಿಕೆಗೆ ತೀರ ಹೊಸದಾಗಿ ಬಂದು ಸೇರಿದ ಪತ್ರಿಕೆಯೆಂದರೆ 'ಶಾರೀರಿಕ ಶಿಕ್ಷಣ ವಿಭಾಗದ ಪತ್ರಿಕೆ' (Physical Education Bulletin). ಶ್ರೀ ಅರವಿಂದರ ಹಾಗು ಶ್ರೀ ತಾಯಿಯವರ ಲೇಖನಿಯಿಂದ ಬಂದ ಲೇಖಗಳು ತುಂಬ ಇರುವುದರಿಂದ ಈ ಪತ್ರಿಕೆಗೆ ವಿಶಿಷ್ಟವಾದ ಮಹತ್ವವು ಬಂದಿದೆ.

ಇವೆಲ್ಲ ಪತ್ರಿಕೆಗಳ ಮಾರಾಟದ ಭಾರವನ್ನು ಗ್ರಂಥವಿಕ್ರಯ ಶಾಖೆಯವರು ನೋಡಿಕೊಳ್ಳುತ್ತಾರೆ. ಇವರು ಪುಸ್ತಕಗಳನ್ನು ನಗದಿಯಾಗಿ ಮಾರುವದಲ್ಲದೇ ಅಂಚೆಯ ಮೂಲಕವೂ ಕಳುಹಿಸಿ ಕೊಡುತ್ತಾರೆ. ಭಾವಚಿತ್ರಗಳನ್ನು ಹಂಚುವದಕ್ಕಾಗಿಯೂ ಇದೇ ರೀತಿಯ ವ್ಯವಸ್ಥೆಯನ್ನು ಮಾಡಲಾಗಿದೆ,

ಆಶ್ರಮಕ್ಕೆ ಅಭ್ಯಾಗತರು ಬಂದು ಹೋಗುವದು ವರ್ಷದಾದ್ಯಂತ ಒಂದೇಸವನೆ ಇರುವದರಿಂದ ಅವರ ವಸತಿಯ ವ್ಯವಸ್ಥೆಯನ್ನು ಕೂಡ ಮಾಡಬೇಕಾಗುವದು. ಆಶ್ರಮಕ್ಕೆ ಸ್ವಂತದ ಎರಡು ಅತಿಥಿ ಶಾಲೆಗಳಿವೆ. ಒಂದು ಸಮುದ್ರದ ದಂಡೆಯ ಮೇಲಿದೆ; ಅನೇಕ ಕೋಣೆಗಳು ಇದರಲ್ಲಿ ಇರುವದಲ್ಲದೆ ಜನ ಸಮೂಹಕ್ಕೆ ಸಾಲಬಲ್ಲ ಒಂದು ಮಂದಿರ(Hall)ವಿದೆ. ಇನ್ನೊಂದು ಆಶ್ರಮಕ್ಕೆ ಹತ್ತಿರದಲ್ಲಿಯೇ ಇದೆ; ಅದು 'ಗೋಲ್‌ಕೊಂಡ'ವು. ಈ ಲೇಖನದ ಕೊನೆಗೆ ನಾವು ಈ ಕಟ್ಟಡದ ಬಗ್ಗೆ ಕೆಲವೊಂದು ಮಾತು ಗಳನ್ನು ಹೇಳುತ್ತೇವೆ. ವಾಹನ ಸೇವಾ ಶಾಖೆಯಲ್ಲಿ ಜೀಪುಗಳೂ, ಕಾರುಗಳೂ, ಸಾಮಾನು ತರುವ ಚಕ್ಕಡಿಗಳೂ ಇದ್ದು ಅವು ಅಭ್ಯಾಗತರನ್ನು ಸ್ಟೇಶನ್ನಿನಿಂದ ಆಶ್ರಮಕ್ಕೆ ಕರೆದುಕೊಂಡು ಬರುವ ಹಾಗು ಇತರ ಕೆಲಸಗಳನ್ನು ಮಾಡುತ್ತವೆ. ಅಭ್ಯಾಗತರ ವಸತಿಯ ವ್ಯವಸ್ಥೆಯನ್ನು Bureau Central ಮಾಡು ತ್ತದೆ. ಮುಂಚಿತವಾಗಿ ಸಮ್ಮತಿ ಪಡೆದುಕೊಂಡು ಬಂದ ಅಭ್ಯಾಗತರಿಗೆ ಅವರು ಬಂದ ಮೇಲೆ ಭೋಜನ ವಸತಿಗಳಿಗಾಗಿ ಅಪ್ಪಣೆಪತ್ರವನ್ನು ಕೊಡಲಾಗುತ್ತದೆ. ಅವರಿಗೆ ಬೇಕಾದುದನ್ನು ಪೂರೈಸಲಾಗುತ್ತದೆ. ಅಭ್ಯಾ ಗತರು ಹೊರಡುವಾಗ ಅವರಿಂದ ಬರತಕ್ಕ ಹಣವನ್ನು ಕೇಂದ್ರ ಕಚೇರಿಯು ವಸೂಲ ಮಾಡುತ್ತದೆ. ಅಭ್ಯಾ ಗತರಿಗಾಗಿ ಆಶ್ರಮವು ಮಾಡುವ ವ್ಯವಸ್ಥೆಯ ವೆಚ್ಚವನ್ನು ಅವರೇ ನೋಡಿಕೊಳ್ಳಬೇಕಾಗುವದು. ಸ್ವಾಗತ ಶಾಖೆಯು ಹೊಸತಾಗಿ ಬಂದವರಿಗೆ ಆಶ್ರಮವನ್ನು ತೋರಿಸುವದಲ್ಲದೆ ಅವರಿಗೆ ಆಶ್ರಮದ ಕಾರ್ಯಪದ್ಧತಿಯ ಪರಿಚಯ ಮಾಡಿಕೊಡುವ ಕಾರ್ಯವನ್ನೂ ಮಾಡುತ್ತದೆ. ಆಶ್ರಮದ ದೈನಂದಿನ ಕಾರ್ಯಕ್ರಮಕ್ಕೆ ವ್ಯತ್ಯಯ ಬಾರದಂತೆ ಸಾಧ್ಯವಾದಷ್ಟು ಮಟ್ಟಿಗೆ ಆಶ್ರಮದ ಜೀವನದಲ್ಲಿ ಭಾಗ ತೆಗೆದುಕೊಳ್ಳಲು ಅಭ್ಯಾಗತರಿಗೆ ಅನುಜ್ಞೆ ಇದೆ.

ಕಾರ್ಯದರ್ಶಿಯ ಕಚೇರಿ, ಹಣಕಾಸು ಹಾಗು ಅಂಚೆ ಖಾತೆಗಳು ಇದ್ದು, ಅವು ಆಶ್ರಮದ ವ್ಯವಸ್ಥೆ ಯನ್ನು ಪರಿಪೂರ್ಣಗೊಳಿಸುತ್ತವೆ.

ಗೋಳಕೊಂಡದ ಬಗ್ಗೆ ಒಂದು ಮಾತು. ಏಶಿಯದಲ್ಲಿಯೆ ಈ ಮಾದರಿಯ ಇನ್ನೊಂದು ಕಟ್ಟಡ ಸಿಗುತ್ತಿಲ್ಲವೆಂದು ಹೇಳಲಾಗುತ್ತಿರುವ ಈ ಕಟ್ಟಡ ಅಮೇರಿಕೆಯ ಸಂಯುಕ್ತ ಸಂಸ್ಥಾನದ ಪ್ರಸಿದ್ಧ ಶಿಲ್ಪಜ್ಞನಾದ ಎಸ್. ಆ್ಯಂಟೋನಿನ್ ರೇಮುಂಡನ ಸಲಹೆ ಸೂಚನೆಗಳ ಮೇರೆಗೆ ಕಟ್ಟಲ್ಪಟ್ಟಿದೆ. ಶ್ರೀ ಅರವಿಂದರ ಒಂದು ಪತ್ರದಲ್ಲಿ ಉಲ್ಲೇಖಿಸಲ್ಪಟ್ಟ ಕೆಳಗಿನ ಕೆಲ ಅಂಶಗಳು ಈ ಯೋಜನೆಯ ಮೂಲ ಕಲ್ಪನೆಯ ಮೇಲೆ ಬೆಳಕನ್ನು ಚೆಲ್ಲುತ್ತವೆ:

"ಗೋಳಕೊಂಡದಲ್ಲಿ ಶ್ರೀ ತಾಯಿಯವರು ತಮ್ಮ ವಿಚಾರಗಳನ್ನೆ ರೇಮಂಡ, ಸ್ಯಾಮರ ಮೊದ ಲಾದವರ ಮುಖಾಂತರ ಕಾರ್ಯಗತ ಮಾಡಿದ್ದಾರೆ. ಮೊದಲನೆಯದಾಗಿ ಶ್ರೀ ತಾಯಿಯವರು ಸೌಂದರ್ಯ ವನ್ನು ಆಧ್ಯಾತ್ಮಿಕ ಹಾಗು ದೈವೀ ಜೀವನಗಳ ಅಂಶವೆಂದು ಭಾವಿಸುತ್ತಾರೆ. ಎರಡನೆಯದಾಗಿ ಭೌತಿಕ ವಸ್ತುಗಳೂ ಜೀವಂತ ವಸ್ತುಗಳಂತೆ ಮೂಲಭೂತವಾಗಿ ದೈವಿಕ ಪ್ರಜ್ಞೆಯನ್ನು ಪಡೆದಿರುವುದಾಗಿ ಅವರು ತಿಳಿದಿರುತ್ತಾರೆ. ಮೂರನೆಯದಾಗಿ ಅವುಗಳಿಗೆ ತಮ್ಮದೇ ಆದ ವ್ಯಕ್ತಿತ್ವವಿದೆಯೆಂದೂ, ಯೋಗ್ಯವಾಗಿ ಅವುಗಳನ್ನು ಉಪಯೋಗಿಸಬೇಕೆಂದೂ, ಅಲಕ್ಷ್ಯದಿಂದಾಗಲಿ, ನೋವಾಗುವಂತೆಯಾಗಲಿ, ತಪ್ಪಾಗಿಯಾಗಲಿ ಉಪಯೋಗಿಸದೆ ಅವುಗಳೊಡನೆ ಸರಿಯಾಗಿ ವ್ಯವಹರಿಸಬೇಕೆಂದೂ ಅವರು ನಂಬಿದ್ದಾರೆ. ವಸ್ತುಗಳು ತಮ್ಮ ಸೌಂದರ್ಯವನ್ನು, ಬೆಲೆಯನ್ನು ತೀವ್ರವಾಗಿ ಕಳೆದುಕೊಂಡು ತೀವ್ರವೇ ನಾಶವಾಗಿ ಹೋಗಬಾರದು. ಅವುಗಳಲ್ಲಿಯ ಚೇತನಾಶಕ್ತಿಯು ಅವರಿಗೆ ಅನುಭವವೇದ್ಯವಾಗಿದೆ. ಅವುಗಳ ಬಗ್ಗೆ ಅವರಲ್ಲಿ ತುಂಬಾ ಸಹಾನುಭೂತಿಯಿದೆ. ಆದ್ದರಿಂದ ಉಳಿದವರ ಹತ್ತಿರ ಸ್ವಲ್ಪೇ ವೇಳೆಯಲ್ಲಿ ಹಾಳಾಗಿ ಹೋಗುವ ವಸ್ತುಗಳು ಅವರ ಹತ್ತಿರ ೧೦ ವರ್ಷಗಟ್ಟಲೆ ತಾಳುತ್ತವೆ. ಈ ತಳಹದಿಯ ಮೇಲೆಯೇ ಶ್ರೀ ತಾಯಿಯವರು ಗೋಳ

ಕೊಂಡವನ್ನು ಕಟ್ಟಿದರು. ಮೊದಲನೆಯದಾಗಿ ಅವರಿಗೆ ಉಚ್ಚದರ್ಜೆಯ ಶಿಲ್ಪಸೌಂದರ್ಯ ಬೇಕಾಗಿತ್ತು. ಇದರಲ್ಲಿ ಅವರಿಗೆ ಯಶಸ್ಸು ಸಿಕ್ಕಿದೆ. ಶಿಲ್ಪಜ್ಞರೂ, ಶಿಲ್ಪಶಾಸ್ತ್ರದ ಪರಿಚಯವಿದ್ದರೂ ಈ ಕಟ್ಟಡವು ಗಣನೀಯವಾದ ಸಿದ್ಧಿಯೆಂದು ಉತ್ಸಾಹದಿಂದ ಹೊಗಳಿದ್ದಾರೆ. ಯುರೋಪಿನಲ್ಲಾಗಲಿ, ಅಮೇರಿಕೆಯಲ್ಲಾಗಲಿ ಈ ಮಾದರಿಯ ಇನ್ನೊಂದು ಕಟ್ಟಡವನ್ನು ತಾನು ನೋಡಿಲ್ಲವೆಂಬುದಾಗಿಯೂ, ಈ ಕಟ್ಟಡಗಳಲ್ಲಿ ಇದು ಅತ್ಯುತ್ತಮವಾದುದೆಂದೂ ಒಬ್ಬ ಶಿಲ್ಪಿಯು ಹೇಳಿದ್ದಾನೆ. ಮಹಾಗುರುವಿನ ಶಿಷ್ಯನಾದ ಫ್ರೆಂಚ ಶಿಲ್ಪಶಾಸ್ತ್ರಜ್ಞನೊಬ್ಬನು ಈ ರೀತಿ ಹೇಳಿದ್ದಾನೆ: 'ನನ್ನ ಗುರುವು ಅರಸುತ್ತಿದ್ದ ಆದರ್ಶವನ್ನು ಅಸದೃಶವಾಗಿ ಇದರಲ್ಲಿ ಕಾರ್ಯಕಾರಿಯಾಗಿ ಮಾಡಲಾಗಿದೆ. ಆದರೆ ಈ ಆದರ್ಶ ನನ್ನ ಗುರುವಿಗೆ ಸಾಧ್ಯವಾಗಿದ್ದಿಲ್ಲ. ಶ್ರೀ ತಾಯಿಯವರಿಗೆ ಸಾಧ್ಯವಾಗಿದೆ.' ಸಮಷ್ಟಿ ಜೀವನದಲ್ಲಿ ಹೊಂದಿಕೆಯಾಗುವಂತೆ ಆ ಕಟ್ಟಡದಲ್ಲಿಯ ಕೋಣೆಗಳನ್ನೂ, ಪೀಠಾದಿ ಉಪಕರಣಗಳನ್ನೂ ಕಲಾತ್ಮಕ ರೀತಿಯಲ್ಲಿ ರಚಿಸಿ ಒದಗಿಸಲಾಗಿದೆ. ಇದನ್ನು ವಿಶೇಷ ಲಕ್ಷ್ಯ ಪೂರೈಸಿ ಮಾಡಲಾಯಿತು. ಪ್ರತಿಯೊಂದು ವಸ್ತುವಿನಿಂದ ತನ್ನದೇ ಆದ ಒಂದು ಸೇವೆ ಸಲ್ಲುವ ಹಾಗೆ ಉಪಯೋಗಿಸಿಕೊಳ್ಳಲಾಗುತ್ತಿದೆ. ಕಲಕು ಮೆಲಕಾಗಲಿ, ಗೊಂದಲವಾಗಲಿ, ತಪ್ಪು ಉಪಯೋಗವಾಗಲಿ ಆಗದಂತೆ ಪ್ರತಿಯೊಂದಕ್ಕೂ ಸ್ಥಳವಿದೆ.''

ಸದ್ಯಕ್ಕೆ ಈ ಕಟ್ಟಡದ ಒಂದು ಭಾಗವು ಆಶ್ರಮವಾಸಿಗಳಿಂದ ಉಪಯೋಗಿಸಲ್ಪಡುತ್ತಿದೆ. ಉಳಿದ ಭಾಗದಲ್ಲಿ ಅಭ್ಯಾಗತರು ಇರುತ್ತಾರೆ.

* * * *

ಮೊದಲೇ ತಿಳಿಸಿದಂತೆ, ಆಶ್ರಮದಲ್ಲಿ ೭೦೦ಕ್ಕೆ ಮೇಲ್ಪಟ್ಟು ಕೆಲಸಗಾರರು ವೇತನ ತೆಗೆದುಕೊಂಡು ದುಡಿಯುತ್ತಿದ್ದಾರೆ. ದುಡಿತದ ಪದ್ಧತಿಯು ಫ್ರೆಂಚ ಹಿಂದುಸ್ತಾನದ ಕೂಲಿ ಕಾಯ್ದೆಗನುಸರಿಸಿ ಇದೆ. ಅವರಿಗೆ ಕೊಡಲಾಗುವ ವೇತನವು ಕೂಡ ಅದೇ ಕೆಲಸಕ್ಕಾಗಿ ಉಳಿದ ಕಡೆಗೆ ಅವರಿಗೆ ಸಿಗುವ ಕೂಲಿಯಂತೆಯೇ ಇದೆ. ಅವರಿಗೂ ಅವರ ಕುಟುಂಬಕ್ಕೂ ಪುಕ್ಕಟೆಯಾಗಿ ಔಷಧಿಯನ್ನು ಕೊಡಲಾಗುತ್ತದೆ. ಶ್ರೀ ತಾಯಿಯವರು ಆಗಾಗ ಅರಿವೆಗಳನ್ನು, ಹೆಚ್ಚು ಹಣವನ್ನು (Bonus) ಕೊಡಮಾಡುತ್ತಾರೆ ಅವರ ಮಕ್ಕಳಿಗಾಗಿ ಒಂದು ಶಾಲೆಯನ್ನು ನಡೆಯಿಸಲು ಯೋಗ್ಯ ಸವಲತ್ತುಗಳನ್ನು ಉಂಟುಮಾಡಿಕೊಡಲಾಗಿದೆ. ಸದುದ್ದೇಶದಿಂದ ಸ್ಥಾಪಿತವಾದ ಅವರ ಸಂಘದ ಸಭೆಯನ್ನು ಕೂಡಿಸಲು ಕಟ್ಟಡವನ್ನು ಕೊಡಲಾಗಿದೆ. ಹಣಕಾಸಿನ ಶಾಖೆಯಿಂದಲೂ ಉಳಿದ ಕಚೇರಿಗಳಿಂದಲೂ ಪಕ್ಷಕ್ಕೊಮ್ಮೆ ಅವರಿಗೆ ಸಂಬಳ ದೊರೆಯುವದು. ಅವಶ್ಯವೆನಿಸಿದಾಗ ಸಾಲವಾಗಿಯೂ ಮುಂಗಡವಾಗಿಯೂ ಅವರಿಗೆ ಹಣ ಸಿಕ್ಕುವದು. ಕೇವಲ ಆಶ್ರಮವಾಸಿಗಳಿಗಷ್ಟೇ ಇರುವ ಕೆಲವು ಸವಲತ್ತುಗಳು (ಉದಾ: ಎಲ್ಲರೊಂದಿಗೆ ಪುಕ್ಕಟೆಯಾಗಿ ಊಟದ ಮನೆಯಲ್ಲಿ ಊಟ ಮಾಡುವದು) ಕೆಲವು ಕೆಲಸಗಾರರಿಗೆ ಶ್ರೀ ತಾಯಿಯವರಿಂದ ದೊರೆತ ಉದಾಹರಣೆಗಳೂ ಇವೆ. ಶಿಲ್ಪವಿಭಾಗದ ಕೇಂದ್ರ ಕಚೇರಿಯ ಗೋಡೆಯ ಮೇಲೆ ಕೆಳಗೆ ಬರೆದ ನಿರ್ದೇಶಕ ವಾಕ್ಯವು ತೂಗಾಡುತ್ತಿದೆ:

"ಯಾವ ಕೆಲಸಗಾರನಿಗೂ ಆತನ ಶಕ್ತಿಯನ್ನು ಮೀರಿ ಕೆಲಸವನ್ನು ಕೊಡಬಾರದು. ಹಾಗೆ ಮಾಡುವದು ಅಯೋಗ್ಯವು, ಅಮಾನುಷವು."

೩

ಆಶ್ರಮದ ಸಂಘಜೀವನದ ರೀತಿಯನ್ನು, ಸ್ಥೂಲವಾದ ರೂಪರೇಷೆಗಳನ್ನು ನಾವು ಕೊಟ್ಟಿದ್ದೇವೆ. ಇವೆಲ್ಲ ಕ್ರಿಯಾತ್ಮಕ ಪ್ರಯತ್ನಗಳ ತಳಹದಿಯು ಯಾವುದೆಂಬುದನ್ನು ನಾವು ತೋರಿಸಿಕೊಟ್ಟಿದ್ದೇವೆ. ಶ್ರೀ ಅರವಿಂದರು

ತೋರಿಸಿ ಕೊಟ್ಟ ಆದರ್ಶದಂತೆ ಸಾಧಕನ ಆಂತರಿಕ ಜೀವನವನ್ನು ರೂಪಿಸಿ ಸಿದ್ಧಪಡಿಸುವದೇ ಮುಖ್ಯವಾದ ಕಾರ್ಯ. ಹಿಂದೆಂದೂ ನಡೆಯದ ಈ ರೀತಿಯ ಪ್ರಯತ್ನದಲ್ಲಿ ಸಹಕರಿಸಲು ಬರುವವರು, ಮೊದಲಿಗೆ ಬಾಹ್ಯ ಜಗತ್ತಿನೊಡನೆ ತಮ್ಮ ಸಂಬಂಧಗಳನ್ನು ಕಡಿದೊಗೆದು, ಆಶ್ರಮವನ್ನು ಸೇರಿ ಸಂಪೂರ್ಣವಾಗಿ ಆ ಆದರ್ಶಕ್ಕೆ ಸಮರ್ಪಿತರಾಗಬೇಕಾಗಿತ್ತು. ಆಶ್ರಮಕ್ಕೆ ಬಂದು ಸೇರಿಕೊಳ್ಳದೇ ಹೆಚ್ಚು ಹೆಚ್ಚು ಜನರು ಅಲ್ಲಿಯ ಜೀವನದಲ್ಲಿ ಭಾಗಿಯಾಗುವಂತೆ ಕಾರ್ಯಕ್ಷೇತ್ರವನ್ನು ವಿಶಾಲಗೊಳಿಸುವದು ಈಗ ಆವಶ್ಯಕವೂ ಸಾಧ್ಯವೂ ಎಂದು ಅನಿಸಹತ್ತಿದೆ. ಆಶ್ರಮಜೀವನಕ್ಕೆ ಹೊಸದಾದ ಈ ದಾರಿಯು, ರೂಪಗೊಳ್ಳುತ್ತಿರುವ ವಿದ್ಯಾಪೀಠದ ರೀತಿಯನ್ನು ಆಧರಿಸಿದೆ. ಅಲ್ಲಿ ಸಿಕ್ಕುವ ವಿದ್ಯಾಭ್ಯಾಸವು, ಆಶ್ರಮಜೀವನದ ತಳಹದಿಯ ಮೇಲೆಯೇ ಕೊಡಲ್ಪಡುವದು. ಅದರಲ್ಲಿ ನಾಲ್ಕು ಬಗೆಯ ಶಿಕ್ಷಣವಿರುವದು. ದೇಹದ, ಪ್ರಾಣದ, ಬುದ್ಧಿಯ, ಆಂತರಿಕ ಹಾಗು ಆಧ್ಯಾತ್ಮಿಕ ಶಿಕ್ಷಣ ದೊರೆತು ವ್ಯಕ್ತಿಯ ಸಮಗ್ರ ಪರಿಪೂರ್ಣತೆಯಾಗುವದು. ಈ ಆದರ್ಶದತ್ತ ಆಕರ್ಷಿತರಾದ ಗಂಡಸರು ಹೆಂಗಸರು ಒಂದು ಕಡೆ ಸೇರಿ, ಈ ಆದರ್ಶದ ಸತ್ಯವನ್ನು ತಮಗೆ ಹೊಂದಿಕೆಯಾಗುವ ರೀತಿಯಲ್ಲಿ ತಮ್ಮಲ್ಲಿ ಕಾರ್ಯಕಾರಿಯಾಗಿ ಮಾಡುವ ಶಿಕ್ಷಣವನ್ನು ಪಡೆದು, ಶ್ರೀ ಅರವಿಂದರ ತತ್ತ್ವೋಪದೇಶಗಳಿಗನುಸಾರವಾಗಿ ಶ್ರೀ ತಾಯಿಯವರಿಂದ ರೂಪಿಸಲ್ಪಟ್ಟ ಜೀವನಮಾರ್ಗದಲ್ಲಿಯ ಮುಂದಳವಾಗಿ, ಮಾನವನು ಪೂರ್ಣ ವಿಕಾಸವನ್ನು ಪಡೆಯಲು ನೆರವಾಗಿ, ದೇವತೆಗಳ ತಲೆಯ ಮೇಲಿನ ಕಿರೀಟವನ್ನು ತಾವು ಧರಿಸಬಹುದು.

—ಎಂ. ಪಿ. ಪಂಡಿತ

ಅನುವಾದಕರು :
ಲ ಕೃ. ಲಕ್ಷ್ಮೇಶ್ವರ

---

"ಧನವು ವಿಶ್ವಶಕ್ತಿಯೊಂದರ ದೃಶ್ಯ ಸಂಕೇತವಾಗಿದೆ; ಈ ಶಕ್ತಿಯು ಪೃಥ್ವಿಯಲ್ಲಿ ಪ್ರಕಟಗೊಳ್ಳುವಾಗ ಪ್ರಾಣಮಯ-ಅನ್ನಮಯ ಸ್ತರಗಳಲ್ಲಿ ಕಾರ್ಯ ಮಾಡುವುದು; ಇದು ಬಾಹ್ಯಜೀವನದ ಪರಿಪೂರ್ಣತೆಗೆ ಅನಿವಾರ್ಯವಾಗಿ ಬೇಕು. ಉಗಮದಲ್ಲಿ ಹಾಗೂ ತನ್ನ ಸತ್ಯಕ್ರಿಯೆಯಲ್ಲಿ ಅದು ಭಗವಂತನಿಗೇ ಸೇರಿದುದು; ಆದರೆ ಭಗವಂತನ ಇತರ ಶಕ್ತಿಗಳಂತೆ ಅದನ್ನು ಇಲ್ಲಿಗೆ ಒಪ್ಪಿಸಲಾಗಿದೆ, ಹಾಗೂ ಅಪರಾ ಪ್ರಕೃತಿಯ ಅವಿದ್ಯೆಯ ಫಲವಾಗಿ, ಅಹಂಕಾರದ ಸಲುವಾಗಿ ಅದರ ದುಷ್ಪ್ರಯೋಜನವಾಗಬಹುದಾಗಿದೆ, ಇಲ್ಲವೆ ಆಸುರೀ ಪ್ರಭಾವಗಳಿಗೆ ತುತ್ತಾಗಿ, ಅವುಗಳ ವಿಕೃತ ಉದ್ದೇಶಗಳ ಸಾಧನೆಗಾಗಿ ಬಳಸಲ್ಪಡಬಹುದಾಗಿದೆ."

—ಶ್ರೀ ಅರವಿಂದರು

# ಜ್ಞಾನ-ಭಕ್ತಿ-ಕರ್ಮ ಸಮುಚ್ಚಯ

ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮನು ಹೇಳಿದ್ದೇನೆಂದರೆ—"(ಬ್ರಹ್ಮರ್ಷಿಗಳ) ಜ್ಞಾನಯೋಗ ಹಾಗೂ (ರಾಜರ್ಷಿಗಳ) ಕರ್ಮಯೋಗ ಎಂಬ ಎರಡೂ ತತ್ವಗಳು ಪುರಾತನ ಕಾಲದಲ್ಲಿ ನನ್ನಿಂದಲೇ (ಪರಮಾತ್ಮನಿಂದಲೇ) ಹೇಳಲ್ಪಟ್ಟಿವೆ. (ಅ–೩, ಶ್ಲೋ–೩). ಜ್ಞಾನಯೋಗ ಕರ್ಮಯೋಗಗಳೆರಡೂ ಆತ್ಮ ಸಾರ್ಥಕತೆಯನ್ನುಂಟುಮಾಡುತ್ತವೆ. ಆದರೂ (ಆತ್ಮಕಲ್ಯಾಣ ಲೋಕಕಲ್ಯಾಣಗಳೆರಡನ್ನೂ ಸಾಧಿಸಿ ಕೊಡುವುದರ ಮೂಲಕ) ಕರ್ಮಯೋಗವು ಹೆಚ್ಚಿನದಾಗಿದೆ. (ಅ–೫, ಶ್ಲೋ–೨). ಜ್ಞಾನಯೋಗ ಕರ್ಮ ಯೋಗಗಳು ಭಿನ್ನಭಿನ್ನವಾದವುಗಳೆಂದು ಅವಿದ್ವಾಂಸರು ತಿಳಿದುಕೊಳ್ಳುತ್ತಾರೆ. ಆದರೆ ವಿದ್ವಾಂಸರು ಹಾಗೆ ತಿಳಿದುಕೊಳ್ಳುವುದಿಲ್ಲ. ಯಾವುದೊಂದನ್ನು ಹಿಡಿದರೂ ಎರಡರ ಫಲವೂ ಲಭಿಸುತ್ತದೆ. ಜ್ಞಾನಯೋಗಿ ಗಳು ಪಡೆಯುವ ಸ್ಥಾನವನ್ನೇ ಕರ್ಮಯೋಗಿಗಳೂ ಪಡೆಯುತ್ತಾರೆ. ಜ್ಞಾನಯೋಗ ಕರ್ಮಯೋಗ ಗಳೆರಡನ್ನೂ ಒಂದೇ ಎಂದು ಯಾರು ಕಾಣುವರೋ ಅವರೇ ದಿವ್ಯದೃಷ್ಟಿಯುಳ್ಳ ನಿಜವಾದ ಜ್ಞಾನಿಗಳು." (ಅ–೫, ಶ್ಲೋ–೪, ೫).

"ನನ್ನನ್ನೇ (ಪರಮಾತ್ಮನನ್ನು) ಯಾರು ಅವಿಚಲವಾದ ಭಕ್ತಿಯೋಗದಿಂದ ಸೇವಿಸುವರೋ ಅವರು ಮಾನವೀಯ ತ್ರಿಗುಣಗಳನ್ನು ದಾಟಿ ಬ್ರಾಹ್ಮೀಸ್ಥಿತಿಗೆ ತಲುಪುತ್ತಾರೆ. (ಅ–೧೪, ಶ್ಲೋ–೨೬). ಅನನ್ಯ ಭಾವನೆಯಿಂದ ಸತತವಾಗಿ ಯಾರು ನನ್ನನ್ನು ನಿತ್ಯವೂ ಸ್ಮರಿಸುವರೋ ಅಂಥ ಸದಾ ಈಶಸಂಯುಕ್ತ ಚಿತ್ತರಾದ ಯೋಗಿಗಳಿಗೆ ನಾನು ಅತ್ಯಂತ ಸುಲಭನಾಗಿದ್ದೇನೆ." (ಅ–೮, ಶ್ಲೋ–೧೪).

ಇವೇ ಮೊದಲಾದ ದಿವ್ಯ ವಾಕ್ಯಗಳನ್ನು ನೋಡಿದರೆ ಭಕ್ತಿಯೋಗವೇ ಬೇರೆ, ಜ್ಞಾನಯೋಗವೇ ಬೇರೆ, ಕರ್ಮಯೋಗವೇ ಬೇರೆ ಎಂದೆನ್ನುವಂತಹ ಖಂಡವಿಚಾರಗಳೇ ಅಡಗಿ ಹೋಗುತ್ತವೆ. ಇವೆಲ್ಲವು ಗಳನ್ನು ಒಳಗೊಂಡಂಥ ಒಂದು ಅಖಂಡಯೋಗವೇ ನಿಜವಾಗಿ ಅನಾದಿಕಾಲದಿಂದ ಹೇಳಲ್ಪಡುತ್ತ ಬಂದಿದೆ ಯೆಂದು ಇದರ ಮೇಲಿಂದ ಸಿದ್ಧವಾಗುತ್ತದೆ. ಈ ಅಖಂಡತೆಯನ್ನು ಜಗತ್ತು ಮರೆತಾಗಲೇ ಯುಗ ಯುಗಗಳಲ್ಲಿ ಪರಮಾತ್ಮನು ಅದನ್ನು ಪುನಃ ಸ್ಥಾಪಿಸುವುದಕ್ಕೆ ಮತ್ತೆ ಮತ್ತೆ ಅವತಾರ ತೊಟ್ಟು ಭೂಮಿಗೆ ಬರುತ್ತಾನೆಂದು ಭಗವದ್ಗೀತೆಯಿಂದ ತಿಳಿದು ಬರುತ್ತದೆ. ಈ ವಿಷಯದಲ್ಲಿ ಆ ಗ್ರಂಥದಲ್ಲಿ ಹೀಗೆ ಹೇಳಲಾಗಿದೆ:—

"ಈ ಮಹಾಜ್ಞಾನವನ್ನು ನಾನು ಮೊದಲು ಸೂರ್ಯನಿಗೆ ಹೇಳಿದೆನು. ಆತನು ತನ್ನ ಮಗ ನಾದ ವೈವಸ್ವತ ಮನುವಿಗೆ ಹೇಳಿದನು. ಮನುವು ತನ್ನ ಮಗನಾದ ಇಕ್ಷ್ವಾಕುರಾಜನಿಗೆ ಹೇಳಿದನು. ಹೀಗೆ ಪರಂಪರಾಪ್ರಾಪ್ತವಾಗಿ ಬಂದ ಈ ಜ್ಞಾನವನ್ನು ಮುಂದೆ (ಜನಕರಾಜನೇ ಮೊದಲಾದ) ರಾಜರ್ಷಿ ಗಳು ಅರಿತವರಾಗಿದ್ದರು. ಆದರೆ ಈ ಮಹತ್ತರವಾದ ಯೋಗವು ಕಾಲಾಂತರದಲ್ಲಿ ನಷ್ಟವಾಗಿ ಹೋಯಿತು. ಆ ಪುರಾತನ ಯೋಗವನ್ನೇ ಇದೀಗ ನಾನು (ಶ್ರೀಕೃಷ್ಣಪರಮಾತ್ಮನು) ನಿನಗೆ (ಅರ್ಜುನನಿಗೆ) ಪುನಃ ಹೇಳುತ್ತಿದ್ದೇನೆ. (ಅ-೪, ಶ್ಲೋ–೧, ೨, ೩). (ಹೇ ಅರ್ಜುನಾ) ನಾನೂ ನೀನೂ ಹಿಂದೆ ಅನೇಕ ಸಲ

ಅವತರಿಸಿ ಬಂದಿದ್ದೇವೆ. ಆ ದಿವ್ಯಾವತಾರಗಳೆಲ್ಲಾ ನನಗೆ ಗೊತ್ತಿವೆ, ನಿನಗೆ ಗೊತ್ತಿಲ್ಲ, ಇಷ್ಟೇ. (ಅ–೪, ಶ್ಲೋ–೫). ಧರ್ಮವು ಇಂಥ ಯಾವಯಾವ ಕಾಲಕ್ಕೆ ಹೀನಸ್ಥಿತಿಗೆ ಬರುವುದೋ ಆಯಾ ಕಾಲಕ್ಕೆ, ಅದರ ಮೇಲೆ ಆವರಿಸಿದ ಅಧರ್ಮವನ್ನು ನಿವಾರಿಸುವ ಸಲುವಾಗಿ, ನಾನು ಅವತಾರ ತೊಟ್ಟು ಬರುತ್ತಿರುತ್ತೇನೆ......... ಹೀಗೆ ಧರ್ಮ (ತತ್ವ) ಸಂಸ್ಥಾಪನಾರ್ಥವಾಗಿ ಯುಗಯುಗಗಳಲ್ಲಿ ನಾನು ಅವತಾರ ತೊಟ್ಟು ಬರುವೆನು." (ಅ–೪, ಶ್ಲೋ–೭, ೮).

"ನನ್ನ ಮೇಲೆಯೇ ಮನಸ್ಸನ್ನಿಡು, ನನ್ನ ಮೇಲೆಯೇ ಬುದ್ಧಿಯನ್ನಿಡು, ನನ್ನ ಭಕ್ತನಾಗಿಯೇ ಇರು, ನನ್ನ ಯಜನವನ್ನೇ (ಸೇವೆಯನ್ನೇ, ಕರ್ಮವನ್ನೇ) ಮಾಡು. ಸತ್ಯಸತ್ಯವಾಗಿಯೂ ನೀನು ನನ್ನನ್ನೇ ಕೂಡಿ ಕೊಳ್ಳುವಿ ಎಂದು ನಿನಗೆ ನಾನು ಪ್ರತಿಜ್ಞೆಮಾಡಿ ಹೇಳುತ್ತೇನೆ. ಏಕೆಂದರೆ ನೀನು ನನಗೆ ಅತ್ಯಂತ ಪ್ರೀತಿಯವನಾಗಿರುವಿ." (ಅ–೯, ಶ್ಲೋ–೩೪; ಅ–೧೨, ಶ್ಲೋ–೮; ಅ–೧೮, ಶ್ಲೋ–೬೫).

ಇವುಗಳಲ್ಲಿ ಕೊನೆಯ ಶ್ಲೋಕವು ಸಂಗ್ರಹವಾಗಿ ಜ್ಞಾನ-ಭಕ್ತಿ-ಕರ್ಮಸಮುಚ್ಚಯವನ್ನು ಒಂದೆಡೆಗೇ ಒಟ್ಟಾಗಿ ಹೇಳುತ್ತಿದೆಯೆಂದು ಸೂಕ್ಷ್ಮವಾಗಿ ಪರಿಶೀಲಿಸಿದರೆ ಹೊಳೆಯುತ್ತದೆ. ಹೇಗೆಂದರೆ—ಪರಮಾತ್ಮನ ಮೇಲೆಯೇ ಬುದ್ಧಿಯನ್ನಿಡುವುದೆಂದರೆ ಜ್ಞಾನ; ಆತನ ಮೇಲೆಯೇ ಭಕ್ತಿಯನ್ನಿಡುವುದಂತೂ ಭಕ್ತಿಯೋಗವೆಂದು ಬೇರೆ ಹೇಳಲಿಕ್ಕೇ ಬೇಡ; ಆತನ ಸೇವೆ ಮಾಡುವುದು ಅಥವಾ ಯಜನ ಮಾಡುವುದೆಂದರೇನೇ ಕರ್ಮಯೋಗ. ಆದ್ದರಿಂದ ಈ ಶ್ಲೋಕದಲ್ಲಿ ಮೂರೂ ಯೋಗಗಳ ಸಮನ್ವಯವನ್ನು ಒಂದೇ ಕಡೆಗೆ ಸೂಚಿಸಿದಂತಾಗಿದೆಯೆಂಬುದು ಸುಸ್ಪಷ್ಟವಾಗಿದೆ. ಹಾಗೂ ಈ ಶ್ಲೋಕವು ಭಗವದ್ಗೀತೆಯಲ್ಲಿ ಒಂದಕ್ಕಿಂತ ಹೆಚ್ಚು ಸ್ಥಳಗಳಲ್ಲಿ ಇಡಿಗೆ ಇಡಿಯಾಗಿಯೂ, ಅರ್ಧಮರ್ಧವಾಗಿಯೂ ಬಂದಿರುವುದೊಂದು ಮಹತ್ವದ ವಿಷಯವೇ ಆಗಿದೆ.

ಶ್ರೀ ಅರವಿಂದರು ೧೯೨೦ರಲ್ಲಿ (ಎಪ್ರಿಲ್ ೭) ತಮ್ಮ ತಮ್ಮಂದಿರಾದ ಶ್ರೀ ವಾರೀಂದ್ರಕುಮಾರ ಘೋಷರಿಗೆ ಬರೆದ ಪತ್ರದಲ್ಲಿ ಬರೆದಿರುವುದೇನೆಂದರೆ:—

"ಈ ಯೋಗಮಾರ್ಗವೆಂದರೇನೆಂಬುದನ್ನು ಹಿಂದಿನಿಂದ ಬರೆಯುವೆನು. ನೀನು ಇಲ್ಲಿಗೆ ಬಂದಾಗ ಈ ವಿಷಯದಲ್ಲಿ ಮಾತುಕತೆ ನಡೆದೀತು. .... .... .... ಈಗ ನಾನು ಇಷ್ಟೇ ಹೇಳಬಲ್ಲೆನು. ಅದೇನೆಂದರೆ—ಪೂರ್ಣ ಜ್ಞಾನ, ಪೂರ್ಣ ಕರ್ಮ ಹಾಗೂ ಪೂರ್ಣ ಭಕ್ತಿ ಇವುಗಳ ಸಾಮಂಜಸ್ಯ ಹಾಗೂ ಐಕ್ಯವನ್ನು ಮಾನಸಿಕ ಕ್ಷೇತ್ರದಿಂದ ಮೇಲಕ್ಕೆತ್ತಿ, ಮನದ ಆಚೆಗಿರುವ ವಿಜ್ಞಾನಕ್ಷೇತ್ರದಲ್ಲಿ ಸಿದ್ಧಗೊಳಿಸುವುದು, ಇದೇ ಅದರ ತತ್ವವಾಗಿದೆ. ಹಿಂದಿನ ಯೋಗಗಳ ದೋಷವೇನೆಂದರೆ ಅವು ಮನ-ಬುದ್ಧಿಯನ್ನು ಬಲ್ಲವು; ಹಾಗೂ ಆತ್ಮವನ್ನೂ ಬಲ್ಲವು. ಅವು ಮನದ ಒಳಗೆ ಆಧ್ಯಾತ್ಮಿಕ ಅನುಭೂತಿಯನ್ನು ಪಡೆದು ಸಂತುಷ್ಟವಾಗಿದ್ದವು. ಆದರೆ ಮನವು ಖಂಡವನ್ನೇ ಆಕಲನಗೊಳಿಸಿಕೊಳ್ಳಬಲ್ಲದು. ಅನಂತ, ಅಖಂಡವನ್ನು ಅದು ಗ್ರಹಿಸಲಾರದು. .... .... .... ಹಿಂದಿನ ಯೋಗಪದ್ಧತಿಗಳು ಅಧ್ಯಾತ್ಮ ಹಾಗೂ ಜೀವನ ಇವುಗಳ ನಡುವೆ ಸಾಮಂಜಸ್ಯವನ್ನಾಗಲಿ ಐಕ್ಯವನ್ನಾಗಲಿ ಸ್ಥಾಪಿಸಲಿಕ್ಕೆ ಶಕ್ಯವಾಗಿಲ್ಲ. ಜಗತ್ತನ್ನು ಮಾಯೆ ಅಥವಾ ಅನಿತ್ಯಲೀಲೆಯೆಂದು ಅವರು ಓಡಿಸಿಬಿಟ್ಟರು. ಇದರಿಂದ ಜೀವನಶಕ್ತಿಯ ಹ್ರಾಸವೂ ಭಾರತದ ಅವನತಿಯೂ ಫಲಿಸಿದವು. ............ ಅದೆಂಥ ಅಧ್ಯಾತ್ಮಸಿದ್ಧಿ? ಮೊದಲು ಮಾನಸಿಕ ಸ್ತರದ ಮೇಲೆ ಸರ್ವ ಖಂಡಾನುಭವಗಳನ್ನು ಪಡೆದು ಮನವನ್ನು ಆಧ್ಯಾತ್ಮರಸದಿಂದ ಪ್ಲಾವಿತಗೊಳಿಸುವುದಿರುತ್ತದೆ. ಅದಾದ ಬಳಿಕ ಮೇಲೆ ಏರಿಬಿಡುವುದಿರುತ್ತದೆ. ಮೇಲೆ ಅಂದರೆ ವಿಜ್ಞಾನ ಕ್ಷೇತ್ರದಲ್ಲಿ ಏರದಿದ್ದರೆ ಜಗತ್ತಿನ ಅಂತಿಮ ರಹಸ್ಯವು ತಿಳಿಯುವುದು ಅಸಂಭವವಿರುತ್ತದೆ. ಜಗತ್ತಿನ ಸಮಸ್ಯೆಯು ಬಿಡುವುದಿಲ್ಲ. ಅಲ್ಲಿಯೇ ಆತ್ಮಾ ಹಾಗೂ ಜಗತ್ತು, ಅಧ್ಯಾತ್ಮ ಹಾಗೂ ಜೀವನ, ಈ ದ್ವಂದ್ವಗಳ ಅವಿದ್ಯೆಯ

ಅಂತವಾಗುತ್ತದೆ. .... .... .... ಆದೇ ಸಮಯಕ್ಕೆ ಪರಮಾತ್ಮನನ್ನು ಸಂಪೂರ್ಣವಾಗಿ ತಿಳಿಯುವುದಕ್ಕೂ ಕಾಣುವುದಕ್ಕೂ ಶಕ್ಯವಾಗುತ್ತದೆ. ಗೀತೆಯಲ್ಲಿ ಅದಕ್ಕೆ 'ಸಮಗ್ರಂ ಮಾಂ ಜ್ಞಾತುಂ' ಎಂದೆನ್ನಲಾಗಿದೆ."*

ಶ್ರೀ ಅರವಿಂದರು ತಮ್ಮ ಇದೇ ಪತ್ರದಲ್ಲಿ ಹೇಳಿದ ಇನ್ನೊಂದು ಅತಿ ಮಹತ್ವದ ಮಾತನ್ನು ಇಲ್ಲಿ ಉಲ್ಲೇಖಿಸದಿರಲಿಕ್ಕೆ ನನ್ನಿಂದ ಆಗಲೊಲ್ಲದು. ಅದಾವುದೆಂದರೆ:—

"ಹೀಗಾಗುವುದು ಸುಲಭವಲ್ಲ. ಈ ಹದಿನೈದು ವರುಷಗಳ ತರುವಾಯ ನಾನು ಇನ್ನೂ ವರೆಗೆ ವಿಜ್ಞಾನದ ಮೂರು ಸ್ತರಗಳಲ್ಲಿಯ ನಿಮ್ನತರವಾದ (ಕೆಳಗಿನ) ಸ್ತರವನ್ನು ತಲುಪಿ, ಕೆಳಗಿನ ಸರ್ವವೃತ್ತಿಗಳನ್ನು ಅದರೊಳಗೆ ಎಳೆದೊಯ್ಯುವ ಉದ್ಯೋಗ ನಡಿಸಿದ್ದೇನೆ. ಆದರೆ ಯಾವಾಗ ಈ ಸಿದ್ಧಿಯು ಪೂರ್ಣವಾಗುವುದೋ ಆವಾಗ ನನ್ನಿಂದ ಇನ್ನೊಬ್ಬರಿಗೆ ಸ್ವಲ್ಪ ಪರಿಶ್ರಮದಿಂದಲೇ ವಿಜ್ಞಾನಸಿದ್ಧಿಯುಂಟಾಗುವುದು. ಇದರಲ್ಲಿ ಏನೂ ಸಂಶಯವಿಲ್ಲ. ಆ ಸಮಯಕ್ಕೆ ನನ್ನ ನಿಜವಾದ ಕಾರ್ಯವು ಆರಂಭವಾಗುವುದು."

ಮುಂದೆ ಆರುವರುಷಗಳ ನಂತರ, ಅಂದರೆ ೧೯೨೬ರಲ್ಲಿ (ನವೆಂಬರ್ ೨೪) ಶ್ರೀ ಅರವಿಂದರ ಯೋಗದ ಪೂರ್ಣ ಸಿದ್ಧಿಯಾಯಿತೆಂಬುದೂ, ಆ ಬಳಿಕವೇ ವರ್ಷಕ್ಕೆ ಮೂರು ಸಲದಂತೆ (ಸಾಧಕರಿಗೆ ಒಂದು ಸಲ ಹೆಚ್ಚು) ಜಗತ್ತಿನ ಜನರಿಗೆ ಶ್ರೀ ಅರವಿಂದರ ದರ್ಶನವು ಸಿಗಲಿಕ್ಕೆ ಆರಂಭವಾಯಿತೆಂಬುದೂ, ಇತ್ತೀಚಿನ ೨೪ ವರುಷಗಳಲ್ಲಿ ಅನೇಕ ಸಹಸ್ರ ಜನ ಭಕ್ತರೂ ಅವರಿಂದ ಉದ್ಧಾರರಾದರೆಂಬುದೂ ಜಗತ್ತಿನ ಸರ್ವ ಜನರಿಗೆ ತಿಳಿದ ಮಾತೇ ಆಗಿದೆ. ಅದೇ ಕಾರ್ಯವು ಈಗ ಶ್ರೀ ಮಹಾತಾಯಿಯವರಿಂದ ಮುಂದುವರಿಸಲ್ಪಟ್ಟಿದೆಯೆಂಬುದೂ, ಮೊದಲಿನಂತೆಯೇ ಈಗಲೂ ಪ್ರತಿಯೊಂದು ದರ್ಶನಕ್ಕೆ ಅನೇಕಾನೇಕ ಭಕ್ತಜನರು ಹೋಗಿ ಶ್ರೀ ಮಹಾತಾಯಿಯವರ ದರ್ಶನದಿಂದ ಹಾಗೂ ಶ್ರೀ ಅರವಿಂದರ ಸೂಕ್ಷ್ಮ ಸಾನ್ನಿಧ್ಯದ ದರ್ಶನದಿಂದ ಉದ್ಧಾರರಾಗುತ್ತಿರುವರೆಂಬುದೂ ಸಹ ಜಗತ್ತಿನ ಸರ್ವ ಜನರಿಗೆ ತಿಳಿದ ವಿಷಯವೇ ಆಗಿದೆ.

"ನನ್ನನ್ನೇ ನಂಬು, ನಾನು ನಿನ್ನನ್ನು ಉದ್ಧರಿಸುತ್ತೇನೆ. ದುಃಖಿಸಬೇಡ. ನಾನು ನಿನ್ನನ್ನು ಉದ್ಧರಿಸುತ್ತೇನೆ." (ಅ-೧೮, ಶ್ಲೋ-೬೬).

"ನನ್ನಲ್ಲಿಯೇ ಚಿತ್ತವನ್ನಿಟ್ಟವರನ್ನು ನಾನು ಕೂಡಲೆ ಮೃತ್ಯುಸಂಸಾರ ಸಾಗರದಿಂದ ಉದ್ಧರಿಸುತ್ತೇನೆ." (ಅ-೧೨, ಶ್ಲೋ-೭).

ಎಂಬೀ ವಚನಗಳ ನೆರವೇರುವಿಕೆಯೇ ಹೀಗೆ ಪುನಃ ಆಧುನಿಕ ಜಗತ್ತಿನಲ್ಲಿ ಇಂದು ಶ್ರೀ ಅರವಿಂದರಿಂದಲೂ ಶ್ರೀ ಮಹಾತಾಯಿಯವರಿಂದಲೂ ಆರಂಭವಾಗಿದೆಯೆಂದು ಅಲ್ಲಿಗೆ ಹೋಗಿ ಆ ಸುಖವನ್ನು ಉಂಡವರಿಗೆಲ್ಲ, ಈಗಲೂ ಸಹ ಉಣ್ಣುತ್ತಿರುವವರಿಗೆಲ್ಲ ಅನಿಸುವುದಿಲ್ಲವೇ ?

ಇದರಂತೆಯೇ ಕನ್ನಡನಾಡಿನ ಶಿವಶರಣರ ಷಟ್‌ಸ್ಥಲ ತತ್ವದಲ್ಲಿಯೂ ಕೂಡ ೧ ಭಕ್ತಿ (ಭಕ್ತ, ಮಾಹೇಶ, ಪ್ರಸಾದಿ), ೨ ಯೋಗ (ಪ್ರಾಣಲಿಂಗಿ), ೩ ಜ್ಞಾನ (ಶರಣ, ಐಕ್ಯ) ಹಾಗೂ ೪ ಕಾಯಕ ಎಂಬ ಸರ್ವ ಮಹಾತತ್ವಗಳ ಏಕೀಕರಣವನ್ನು ನೋಡಿದರೆ ವೈವಸ್ವತ ಮನುವಿನಿಂದ ಮೊದಲುಮಾಡಿ ಇಲ್ಲಿಯ ವರೆಗೆ ಕಾಲ ಕಾಲಕ್ಕೆ ತೈದೋರುತ್ತ ಬಂದಿರುವ ಅಖಂಡ ಸಮನ್ವಯ ತತ್ವವೇ ಶಿವಶರಣರ ತತ್ವದಲ್ಲಿಯೂ ಕಂಡುಬರುವುದು. ಶ್ರೀ ಅರವಿಂದರ "ಈ ಜಗತ್ತಿನ ಸಮಸ್ಯೆ" "ರಿಡ್‌ಲ್ ಆಫ್ ದಿಸ್ ವರ್ಲ್ಡ್") ಎಂಬ ಗ್ರಂಥದೊಳಗಿರುವ ಒಂದು ಪತ್ರದಲ್ಲಿ—"ಅಂಥದೊಂದು ಗುಂಪು ಕೆಲವು ಶತಮಾನಗಳ

* "ಶ್ರೀ ಅರವಿಂದರ ಪತ್ರಗಳು"—ಪುಟ ೧೯, ೨೦. (ಶ್ರೀ. ಸಿಂಪಿ ಲಿಂಗಣ್ಣನವರು ಕನ್ನಡಿಸಿದ್ದು.)

ಹಿಂದೆ ಬಂದು ಹೋಯಿತು" ಎಂಬ ವಾಕ್ಯದ ಕಡೆಗೆ ನನ್ನೊಬ್ಬ ಮಾನ್ಯ ಆಧ್ಯಾತ್ಮಿಕ ಮಿತ್ರರು ನನ್ನ ಲಕ್ಷ್ಯವನ್ನು ಹೊರಳಿಸಿದಾಗ ನನಗೆ ಬಹಳ ಆಶ್ಚರ್ಯವೆನಿಸಿತು. ಶ್ರೀ ಅರವಿಂದರ ಆ ವಾಕ್ಯದಲ್ಲಿ ಉಲ್ಲೇಖಿಸಲ್ಪಟ್ಟ "ಗುಂಪು" ಶಿವಶರಣರ ಶಿವಾನುಭವ ಮಂಟಪವೇ ಆಗಿರಬಹುದೇ? ಎಂಬ ಊಹೆಗೆ ಬಹಳ ಬೆಳಕು ಸಿಕ್ಕಂತೆ ಅನಿಸಿತು. ಇದರಂತೆಯೇ ಶ್ರೀ ಮಹಾತಾಯಿಯವರ "ಮಾತೃವಾಣಿ" ಎಂಬ ಗ್ರಂಥದ ಮೊದಲನೆಯ ಖಂಡದಲ್ಲಿ ಆರಂಭದ ಅಧ್ಯಾಯದ ಕೊಟ್ಟಕೊನೆಗೆ ಒಬ್ಬ ಶಿಷ್ಯರೋ ಅಥವಾ ಭಕ್ತರೋ ಒಂದು ಅಗಾಧ ಪ್ರಶ್ನವನ್ನು ಕೇಳುತ್ತಾರೆ. ಅದಾವುದೆಂದರೆ "ನಾವು ಇಷ್ಟು ಜನರೆಲ್ಲ ಇಲ್ಲಿ (ಆಶ್ರಮದಲ್ಲಿ) ಹೇಗೆ ಒಂದೆಡೆಗೆ ಸೇರಿದ್ದೇವೆ?" ಈ ಪ್ರಶ್ನೆಗೆ ಶ್ರೀ ಮಹಾತಾಯಿಯವರು ದಯಪಾಲಿಸಿದ ಉತ್ತರವು ಇನ್ನೂ ಹೆಚ್ಚಾಗಿ ಅಗಾಧವಾಗಿದೆ. ಅದು ಹೇಗೆಂದರೆ:—

"ಪರಮಾತ್ಮನ ವಿಜಯವನ್ನು ಪೃಥ್ವಿಯ ಮೇಲೆ ಸ್ಥಾಪಿಸುವ ಸಲುವಾಗಿ ಯುಗಯುಗಗಳಲ್ಲಿ ನಾವೆಲ್ಲರೂ ಹೀಗೆಯೇ ಹಿಂದೆ ಕೂಡಿಕೊಂಡೇ ಬಂದಿದ್ದೆವು. ಆದ್ದರಿಂದಲೇ ಈಗಲೂ ಸಹ ಅದೇ ಕಾರ್ಯಕ್ಕಾಗಿ ಎಲ್ಲರೂ ಕೂಡಿಕೊಂಡೇ ಬಂದಿರುವೆವು. ಹಿಂದಿನ ಜನ್ಮಗಳಲ್ಲಿ ಕೂಡಿರದಿದ್ದರೆ ಇಂದು ಕೂಡುವುದು ಸಾಧ್ಯವಿರಲಿಲ್ಲ."

ಇದರ ಮೇಲಿಂದ ಭಗವದ್ಗೀತೆಯ ಶ್ರೀಕೃಷ್ಣಾರ್ಜುನರ (ಹಿಂದೆ ಹೇಳಿದ) ಸಂವಾದವೇ ನೆನಪಿಗೆ ಬರುವುದಿಲ್ಲವೇ? ಅಥವಾ ಶ್ರೀ ಬಸವೇಶ್ವರರ ವಚನಗ್ರಂಥದಲ್ಲಿ "ಹಿಂದೆ ಭವಭವಂಗಳಲ್ಲೆಲ್ಲ (ಹೇ ದೇವಾ) ನೀನೆನಗೆ ಒಡೆಯನಾಗಿದ್ದಿ, ನಾನು ನಿನಗೆ ವಾಹನನಾಗಿದ್ದೆನಯ್ಯಾ, ಇಂದು ನೀನು ಕೂಡಲಸಂಗಮದೇವನೆಂಬ ಒಡೆಯನಾದಿ, ನಾನು ಬಸವಣ್ಣನೆಂಬ ವಾಹನನಾದೆನಯ್ಯಾ" ಎಂದು ಹೇಳಿದ ಮಾತೂ, ಮೇಲೆ ಹೇಳಿದ ಭಗವದ್ಗೀತೆಯಲ್ಲಿ ಹೇಳಿದ ವಾಕ್ಯವೂ, ಇಂದು ಶ್ರೀ ಮಹಾತಾಯಿಯವರು ಮಾತೃವಾಣಿಯಲ್ಲಿ ಹೇಳಿದ ಮೇಲ್ಕಾಣಿಸಿದ ವಿಷಯವೂ ಎಲ್ಲಾ ಒಂದೇ ಆಗಿವೆಯೆಂದು ಅನಿಸುವುದಿಲ್ಲವೇ? ಕಲ್ಯಾಣಪಟ್ಟಣದಲ್ಲಿ ಆಗಿನ ಕಾಲದಲ್ಲಿದ್ದ ೭೭೦ ಜನ ಶಿವಶರಣರ ಸಂಖ್ಯೆಗೂ, ಇಂದು ಪಾಂಡೀಚೇರಿಯ ಆಶ್ರಮದಲ್ಲಿರುವ ಎಂಟು ನೂರಕ್ಕೆ ಸ್ವಲ್ಪ ಕಡಿಮೆ ಇರುವ ಸಾಧಕರ ಸಂಖ್ಯೆಗೂ, ಅಂದು ದೇಶದಲ್ಲೆಲ್ಲ ಹಬ್ಬಿ ಕಾರ್ಯ ಮಾಡುತ್ತಿದ್ದ ಒಂದು ಲಕ್ಷ ತೊಂಬತ್ತಾರು ಸಾವಿರ ಗಣಗಳ ಸಂಖ್ಯೆಗೂ, ಇಂದು ಶ್ರೀ ಅರವಿಂದರ ಹಾಗೂ ಶ್ರೀ ಮಹಾತಾಯಿಯವರ ದರ್ಶನಲಾಭ ಪಡೆದು ಜಗತ್ತಿನಲ್ಲಿ ಇರುವ ಅನೇಕ ಸಹಸ್ರ ಭಕ್ತರ ಸಂಖ್ಯೆಗೂ ಹೊಂದಿಕೆ ಬರುವುದನ್ನು ನೋಡಿದರೆ "ಕೆಲವು ಶತಮಾನಗಳ ಹಿಂದೆ ಇಂಥದೊಂದು ಗುಂಪು ಬಂದು ಹೋಯಿತು" ಎಂದು ಶ್ರೀ ಅರವಿಂದರು ತಮ್ಮ ಗ್ರಂಥದಲ್ಲಿ ಹೇಳಿದ ವಾಕ್ಯಕ್ಕೂ, ಹಾಗೂ ಶ್ರೀ ಮಹಾತಾಯಿಯವರು "ಪರಮಾತ್ಮನ ವಿಜಯಕ್ಕಾಗಿ ಹೀಗೆಯೇ ಯುಗಯುಗಗಳಲ್ಲಿ ಎಲ್ಲರೂ ಕೂಡಿಯೇ ಬಂದಿದ್ದೆವು" ಎಂದು ಸ್ಪಷ್ಟಪಡಿಸಿದ ಮಾತಿಗೂ, ೧೨ನೆಯ ಶತಮಾನದ ಶಿವಶರಣರ ಚಳವಳಿಗೂ ಬಹಳ ಹೊಂದಿಕೆ ಬಂದಂತಾಗುವುದಿಲ್ಲವೇ? ಇತ್ತೀಚೆಗೆ, ತೀರ ಇತ್ತೀಚೆಗೆ (೧೯೬೨, ಮಾರ್ಚ್ ೧೪) ಶ್ರೀ ಮಹಾತಾಯಿಯವರು ಬರೆದ ಒಂದು ಪತ್ರವು "ಮದರ್ ಇಂಡಿಯಾ" ಮಾಸಿಕದಲ್ಲಿ ಮೊನ್ನೆ ಮೊನ್ನೆ ಪ್ರಕಟವಾಗಿದ್ದು ಅದರಲ್ಲಿ:—

"ಪೃಥ್ವಿಯ ಆರಂಭದಿಂದಲೂ ಯಾವಾಗ ಯಾವಾಗ ಎಲ್ಲೆಲ್ಲಿ ಜ್ಞಾನದ ಕಿರಣವು ಇಳಿಯಲಿಕ್ಕೆ ಶಕ್ಯವಾಯಿತೋ ಆವಾಗ ಆವಾಗ ಅಲ್ಲಲ್ಲೆಲ್ಲ ನಾವು ಬಂದಿದ್ದೆವು" ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಇದರ ಮೇಲಿಂದ ಏನು ತಿಳಕೊಳ್ಳುವುದು? ಎಲ್ಲಾ ಕಡೆಗೆ ಬಂದವರೂ ಅವರೇ, ಯಾವಾಗಲೂ ಬಂದವರೂ ಅವರೇ !!! "ಹಿಂದೆಯೇ ಶರಣರು ಇದ್ದರೇನಯ್ಯಾ? ಇಂದು ಶರಣರು ಇಲ್ಲವೇನಯ್ಯಾ? ಮುಂದೆಯೂ ಶರಣರು ಇರಲಾರರೇನಯ್ಯಾ? ಶರಣರು ಹಿಂದೆಯೂ ಉಂಟು, ಶರಣರು ಇಂದೂ ಉಂಟು, ಶರಣರು ಮುಂದೆಯೂ ಉಂಟು ಕೂಡಲಸಂಗಮದೇವಾ" ಎಂದು ಶ್ರೀ ಬಸವೇಶ್ವರರು ಸಾರಿದ ವಚನದ ತಾತ್ಪರ್ಯವೂ ಇದೇ

ಆಗಿಲ್ಲವೇ ? ಋಗ್ವೇದದ ಮೊಟ್ಟಮೊದಲನೆಯ ಸೂಕ್ತದಲ್ಲಿಯೇ "ಪೂರ್ವದ ಋಷಿಗಳಿಂದಲೂ ಸ್ತುತಿಸಲ್ಪಟ್ಟಿರುವ ಹಾಗೂ ನೂತನ ಋಷಿಗಳಿಂದಲೂ ಸಹ ಸ್ತುತಿಸಲ್ಪಡುತ್ತಿರುವ ಅಗ್ನಿಯು ದೇವತೆಗಳನ್ನು ಇಲ್ಲಿಗೆ ಕರೆದುಕೊಂಡು ಬರುತ್ತಾನೆ." ("ಅಗ್ನಿಃ ಪೂರ್ವೇಭಿಃ ಋಷಿಭಿರೀಡ್ಯೋ, ನೂತನೈಃ ಉತ । ಸ ದೇವಾನ್ ಏಹ ವಕ್ಷತಿ ॥") ಎಂದು ಪುರಾತನ-ನೂತನರೆಂಬ ಭೇದವಿಲ್ಲದೆ ಸರ್ವ ಕಾಲದ ಋಷಿಗಳಿಗೆ ಸಮಾನ ಮಹತ್ವವನ್ನು ಕೊಟ್ಟಿದ್ದರ ಅರ್ಥವಾದರೂ ಇದೇ ಆಗಿಲ್ಲವೇ ?

ಇಷ್ಟೇ ಏಕೆ ? ಹೋದ ವರ್ಷದ (೧೯೫೧) ನವೆಂಬರ್ ತಿಂಗಳ "ಅ್ಯಡ್ವೆಂಟ್" ಎಂಬ ತ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾದ ಶ್ರೀ ಅರವಿಂದರ ಒಂದು ಅತಿ ಮಹತ್ವದ ಪತ್ರಮಾಲಿಕೆಯಲ್ಲಿ ಆರಂಭದ ಒಂದೆರಡು ಆಶ್ಚರ್ಯಕರವಾದ ಪತ್ರಗಳು ಹೀಗೆ ಇವೆ :—

**ಪ್ರಶ್ನೆ** :—"ಸೃಷ್ಟಿಯ ಆರಂಭಕಾಲದಿಂದಲೂ ತಾವೂ ಶ್ರೀ ಮಹಾತಾಯಿಯವರೂ ಕೂಡಿಯೇ ಯಾರಿಗೂ ಗೊತ್ತಾಗದಂತೆ ಅನೇಕ ಸಲ ಬಂದಿರುವಿರಂತೆ; ಅಷ್ಟು ಸಲವೆಲ್ಲಾ ಬಂದು ತಾವು ಏನು ಮಾಡಿದಿರಿ ?"

**ಉತ್ತರ** :—"ಜಗತ್ತಿನ ವಿಕಾಸವನ್ನು."

**ಪ್ರಶ್ನೆ** :—"ಈ ವಿಷಯವನ್ನು ಸ್ವಲ್ಪ ವಿವರ ಮಾಡಿ ತಾವು ಹೇಳುವಿರಾ ?"

**ಉತ್ತರ** :—"ಹಾಗೆ ಹೇಳಬೇಕಾದರೆ ಜಗತ್ತಿನ ಸರ್ವ ಜನಾಂಗಗಳ ಇತಿಹಾಸವನ್ನೇ ಹೇಳಬೇಕಾಗುತ್ತದೆ. ಆದರೂ ಇಷ್ಟುಮಾತ್ರ ಹೇಳಬಹುದು. ಅದೇನೆಂದರೆ :—'ಜಗತ್ತಿನ ವಿಕಾಸದ ಮೆಟ್ಟಲುಗಳು ಬದಲಾಗುವ ಕಾಲಕ್ಕೆಲ್ಲ ಪರಮಾತ್ಮನು ತನ್ನ ಅವತಾರರನ್ನಾಗಲಿ, ವಿಭೂತಿಗಳನ್ನಾಗಲಿ ಕಳುಹಿಸುತ್ತಾನೆ. ಅವರು ಆ ಬದಲಾವಣೆಗೆ ನೆರವಾಗುತ್ತಾರೆ.'"

**ಪ್ರಶ್ನೆ** :—"ಅನಂತಜ್ಞಾನ, ಅನಂತಸಾಮರ್ಥ್ಯ, ಅನಂತಶಾಂತಿಯ ನೆಲೆಯಾದ ಪರಾತ್ಪರ ಪರಮಾತ್ಮನೇ ಮಾನವಶರೀರದಲ್ಲಿ ಅವತಾರ ತೆಗೆದುಕೊಂಡು ಬರುವನೇ? ಹಾಗಾದರೆ ಅಂಥವರು ಮಾನವರಂತೆ ಸಾಧನ ಮಾಡುವ ಕಾರಣವೇನು ?"

**ಉತ್ತರ** :—"ಅನಂತಜ್ಞಾನ, ಅನಂತಸಾಮರ್ಥ್ಯ, ಅನಂತ ಆನಂದ, ಅನಂತ ಶಾಂತಿಯ ನಿಧಿಯಾದ ಸ್ವಯಂ ಪರಮಾತ್ಮನೇ ಮಾನವ ದೇಹದಲ್ಲಿ ಅವತಾರ ತಾಳಿ ಬರುತ್ತಾನೆ. ಮನುಷ್ಯನಾಗಿ ಬಂದ ಬಳಿಕ ಎಲ್ಲವನ್ನೂ ಮನುಷ್ಯರಂತೆಯೇ ಮಾಡಬೇಕಾಗುತ್ತದೆ. ಇಲ್ಲದಿದ್ದರೆ ಉಳಿದ ಮಾನವರಿಗೆ ಅವರ ಗೂಡ ಹೊಂದಿಕೊಳ್ಳಲಿಕ್ಕೇ ಆಗದೆ ಹೋಗುತ್ತದೆ. ಸದಾಸರ್ವ ಕಾಲವೂ ಪರಮಾತ್ಮನು ಅವ್ಯಕ್ತ ರೂಪದಿಂದ ಕಾರ್ಯ ಮಾಡುತ್ತಲೇ ಇದ್ದಾನಲ್ಲಾ, ಹಾಗೆ ಆಗಿ ಬಿಡುತ್ತದೆ. ಅವತಾರಿಗಳಲ್ಲಿ ಸೀಮಾಬದ್ಧತೆಯೆಂಬುದೆಲ್ಲಾ ಹೊರಗಿನ ತೋರಿಕೆಯಲ್ಲಿಯೇ (ಹೊರವ್ಯಕ್ತಿತ್ವದಲ್ಲಿಯೇ) ಇರುತ್ತದೆ. ಒಳಗೆ ಅನಂತ ಜ್ಞಾನ, ಶಕ್ತಿ, ಶಾಂತಿ, ಆನಂದ ಮೊದಲಾದವುಗಳೆಲ್ಲ ಪೂರ್ಣ ರೂಪದಲ್ಲಿ ಇರುತ್ತವೆ."

ಅಂತಲೇ ಇತ್ತೀಚೆಗೆ "ಮದರ್ ಇಂಡಿಯಾ" ಮಾಸಪತ್ರಿಕೆಯಲ್ಲಿ ಮೊದಲಪುಟದಲ್ಲಿ ಪ್ರತಿತಿಂಗಳೂ ಶ್ರೀ ಅರವಿಂದರ ಹಸ್ತಾಕ್ಷರಗಳಲ್ಲಿ ಶ್ರೀ ಮಹಾತಾಯಿಯವರ ದಿವ್ಯಪ್ರಾರ್ಥನಾ ಗ್ರಂಥದ ಈ ಮಹಾವಾಕ್ಯವು ಪ್ರಕಟಿಸಲ್ಪಡುತ್ತಿದೆಯೆಂದು ಸರ್ವಭಕ್ತಹೃದಯಗಳಿಗೆ ಅನಿಸುತ್ತದೆ; ಆ ದಿವ್ಯ ಮಹಾವಾಕ್ಯವಿದು:—

**"ಒಂದು ಹೊಸ ಬೆಳಕು ಭೂಮಿಯ ಮೇಲೆ ಬೆಳಗುವುದು, ಒಂದು ಹೊಸ ಜಗತ್ತು ಹುಟ್ಟುವುದು, ಅಭಿವಚನ ಕೊಡಲಾದ ಸಂಗತಿಗಳು ನೆರವೇರುವವು."**

**—ಶ್ರೀ ಅರವಿಂದರು**

**(ಶ್ರೀ ಮಹಾತಾಯಿಯವರ ಪ್ರಾರ್ಥನಾ ಗ್ರಂಥದಿಂದ)**

ಇನ್ನು ನಮ್ಮ ಪ್ರಸ್ತುತ ವಿಷಯದ ಕಡೆಗೆ ಹೊರಳುವಾ: ಅಂದರೆ ನಮ್ಮ "ಭಕ್ತಿ ಜ್ಞಾನ ಕರ್ಮ ಸಮುಚ್ಚಯ." ಭಗವದ್ಗೀತೆಯ ೯ನೆಯ ಹಾಗೂ ೧೨ನೆಯ ಅಧ್ಯಾಯಗಳಲ್ಲಿ ಭಕ್ತಿಯೋಗದ ಸ್ವರೂಪವೂ, ೧೪ನೆಯ ಹಾಗೂ ೧೫ನೆಯ ಅಧ್ಯಾಯಗಳಲ್ಲಿ ಜ್ಞಾನಯೋಗದ ಸ್ವರೂಪವೂ, ೩ನೆಯ ಹಾಗೂ ೪ನೆಯ ಮತ್ತು ೫ನೆಯ ಅಧ್ಯಾಯಗಳಲ್ಲಿ ಕರ್ಮಯೋಗದ ಸ್ವರೂಪವೂ ಬಹಳ ವಿಸ್ತಾರವಾಗಿ ವಿವರಿಸಲ್ಪಟ್ಟಿವೆಯೆಂಬುದನ್ನು ಆ ಗ್ರಂಥವನ್ನೋದಿದವರೆಲ್ಲರೂ ಬಲ್ಲರು.

ಶ್ರೀ ಅರವಿಂದರ (ಪತ್ರಗಳಿಂದ ಸಂಗ್ರಹಿಸಲಾದ) "ಯೋಗಪ್ರಕಾಶ"ವೆಂಬ ಗ್ರಂಥದ ("ಲಾಯಿಟ್ಸ್ ಆನ್ ಯೋಗ") ೨ನೆಯ ಅಧ್ಯಾಯದಲ್ಲಿ ಜ್ಞಾನಯೋಗದ ವಿಷಯವೂ, ೩ನೆಯ ಅಧ್ಯಾಯದಲ್ಲಿ ಭಕ್ತಿ ಯೋಗದ ವಿಷಯವೂ, ಕೊನೆಯದಾದ ೪ನೆಯ ಅಧ್ಯಾಯದಲ್ಲಿ ಕರ್ಮಯೋಗದ ವಿಷಯವೂ ಅತ್ಯಂತ ಸುಂದರವಾಗಿ ವಿವರಿಸಲ್ಪಟ್ಟಿವೆ. ಅಲ್ಲದೆ ಈ ಗ್ರಂಥದ ಮೊದಲನೆಯ ಅಧ್ಯಾಯದಲ್ಲಿ ಶ್ರೀ ಅರವಿಂದರ ಯೋಗದ ಗುರಿಯೇನೆಂಬುದನ್ನು ಅತ್ಯಂತ ಹೃದಯಂಗಮವಾಗಿ ವಿವರಿಸಲಾಗಿದೆ. "ಗುರಿ" ಎಂಬುದೇ ಆ ಅಧ್ಯಾಯದ ಹೆಸರು. "ಪರಬ್ರಹ್ಮನಲ್ಲಿ ಲಯವಾಗುವುದು ನಮ್ಮ ಯೋಗದ ಗುರಿಯಲ್ಲ; ಪರಮಾತ್ಮ ನನ್ನು ಭೌತಿಕ ಜೀವನದಲ್ಲಿ ಪ್ರಕಟಗೊಳಿಸುವುದೇ ಅದರ ಧ್ಯೇಯವಾಗಿದೆ." ಎಂದು ಆ ಅಧ್ಯಾಯದಲ್ಲಿ ಸ್ಪಷ್ಟಗೊಳಿಸಲಾಗಿದೆ. ಮುಂದಿನ ಮೂರು ಅಧ್ಯಾಯಗಳು ಈ ಭವ್ಯವಾದ ಗುರಿಗೆ ಸಾಧನ ರೂಪವಾ ಗಿವೆ. ಅವೇ ಮೇಲೆ ಹೇಳಿದಂತೆ—"ಜ್ಞಾನ–ಭಕ್ತಿ–ಕರ್ಮ" ಯೋಗಗಳಿಗೆ ಸಂಬಂಧಿಸಿದವುಗಳಾಗಿವೆ.

ಭಗವದ್ಗೀತೆಯ ಮೇಲ್ಕಾಣಿಸಿದ ಅಧ್ಯಾಯಗಳ ಸಂಕ್ಷಿಪ್ತ ಸಾರಾಂಶವನ್ನು ಹೇಳಿ, ಶ್ರೀ ಅರವಿಂದರ "ಯೋಗಪ್ರಕಾಶ"ದ ಪ್ರತಿಯೊಂದು ಅಧ್ಯಾಯದೊಳಗಿನ ಒಂದೆರಡು ಪತ್ರಗಳ ಅನುವಾದವನ್ನು ಇಲ್ಲಿ ಕೊಡುವೆನು.

## ೧ ಭಕ್ತಿಯೋಗ

"ಪ್ರತ್ಯಕ್ಷ ಫಲದಾಯಿಯಾದ, ಅತ್ಯಂತ ಪವಿತ್ರವಾದ, ರಾಜವಿದ್ಯೆ, ರಾಜಗುಹ್ಯವೆಂದೆನಿಸುವ, ಪರಮ ರಹಸ್ಯಮಯವಾದ, ಪರಮಸುಖಕರವಾದ ವಿಷಯವನ್ನು (ಅಂದರೆ ಭಕ್ತಿಯೋಗವನ್ನು) [ಹೇ ಅರ್ಜುನನೇ] ನಿನಗೆ ಹೇಳುವೆನು. (ಅ. ೯–ಶ್ಲೋ. ೧, ೨). ನಾನು ಜಗತ್ತಿನ ತಂದೆಯೂ, ತಾಯಿಯೂ, ಮುತ್ತಯ್ಯನೂ ಆಗಿರುವೆನಲ್ಲದೆ ಪವಿತ್ರವಾದ ಓಂಕಾರವೂ ಸರ್ವವೇದಶಾಸ್ತ್ರರೂಪನೂ ನಾನೇ ಆಗಿದ್ದೇನೆ. ಜಗತ್ತಿಗೆ ಆಶ್ರಯನೂ, ಗತಿದಾಯಕನೂ, ರಕ್ಷಕನೂ, ಒಡೆಯನೂ, ಸರ್ವಸಾಕ್ಷಿಯೂ, ನಿವಾಸರೂಪನೂ, ಆಶ್ರಯಸ್ವರೂಪನೂ, ಮಿತ್ರನೂ, ಉತ್ಪತ್ತಿ-ಲಯಸ್ವರೂಪನೂ, ಆಧಾರಸ್ತಂಭನೂ, ಪುನರುದಯಕ್ಕೆ ಅವಿನಾಶವಾದ ಬೀಜರೂಪನೂ ನಾನೇ ಆಗಿದ್ದೇನೆ. (ಅ. ೯—ಶ್ಲೋ. ೧೭, ೧೮). ಅನನ್ಯಭಾವದಿಂದ ಯಾರು ಸದಾ ನನ್ನ ಉಪಾಸನೆಯನ್ನು ಮಾಡುವರೋ ಅಂಥ ಸತತ ಪರಮಾತ್ಮಸಂಯುಕ್ತಚಿತ್ತರ ಐಹಿಕ ಪಾರಮಾರ್ಥಿಕ ಯೋಗಕ್ಷೇಮವನ್ನೆಲ್ಲ ನಾನು ವಹಿಸುವೆನು. (ಅ. ೯––ಶ್ಲೋ. ೨೨). ಪತ್ರ, ಪುಷ್ಪ, ಫಲ, ಜಲ ಮೊದಲಾದವುಗಳನ್ನು ಯಾರು ನನಗೆ

ಭಕ್ತಿಯಿಂದ ಅರ್ಪಿಸುವರೋ ಅವನ್ನು ನಾನು ಅತ್ಯಂತ ತವಕದಿಂದ ಸ್ವೀಕರಿಸುವೆನು. ನೀನು ಏನೇನು ಮಾಡುವಿಯೋ, ಏನೇನು ಉಣ್ಣುವಿಯೋ, ಏನೇನು ಕರ್ಮಗಳನ್ನು ಮಾಡುವಿಯೋ, ಏನೇನು ಕೊಡುವಿಯೋ, ಏನೇನು ತಪಗೈಯುವಿಯೋ, ಇದೆಲ್ಲವನ್ನೂ ಹೇ ಅರ್ಜುನಾ ನನಗೆ ಸಮರ್ಪಿಸು. (ಅ. ೯—ಶ್ಲೋ. ೨೬, ೨೭). ನನ್ನನ್ನು ಸಂಪೂರ್ಣವಾಗಿ ಆಶ್ರಯಿಸುವುದರಿಂದ ಸ್ತ್ರೀಯರೂ, ವೈಶ್ಯರೂ, ಶೂದ್ರರೂ, ಪಾಪಿಜನ್ಮಿಗಳೂ ಕೂಡ ಪರಮಗತಿಯನ್ನು ಪಡೆಯುವರು. ಹೀಗಿದ್ದ ಬಳಿಕ ಮಹಾಪುಣ್ಯಶಾಲಿಗಳಾದ ಬ್ರಹ್ಮಜ್ಞಾನಿಗಳೂ ಹಾಗೂ ಮಹಾಭಗವದ್ಭಕ್ತರಾದ ರಾಜರ್ಷಿಗಳೂ ಪರಮಸದ್ಗತಿಯನ್ನು ಪಡೆಯುವುದೇನಾಶ್ಚರ್ಯ? .... .... .... .... (ಅ. ೯—ಶ್ಲೋ. ೩೨, ೩೩). ಆದ್ದರಿಂದ ಯಾವಾಗಲೂ ನೀನು ನನ್ನ ಮೇಲೆಯೇ ಮನಸ್ಸನ್ನಿಡು, ನನ್ನ ಭಕ್ತಿಯನ್ನೇ ಮಾಡು, ನನ್ನ ಸೇವೆಯನ್ನೇ ಮಾಡು, ನನ್ನನ್ನೇ ನಮಸ್ಕರಿಸುತ್ತಿರು. ಹೀಗೆ ಮತ್ಪರಾಯಣನಾಗಿ, ನನ್ನಲ್ಲಿಯೇ ಸಂಯುಕ್ತಚಿತ್ತನಾದರೆ ನೀನು ಅವಶ್ಯವಾಗಿ ನನ್ನನ್ನೇ ಕೂಡಿಕೊಳ್ಳುವಿ. (ಅ. ೯—ಶ್ಲೋ. ೩೪).

"ಹೀಗೆ ನನ್ನಲ್ಲಿಯೇ ತಮ್ಮ ಮನಸ್ಸನ್ನು ನೆಲೆಗೊಳಿಸಿ ಸರ್ವದಾ ನನ್ನೊಡನೆ ಸಂಯುಕ್ತಚಿತ್ತರಾಗಿ ಅತಿಶಯವಾದ ಶ್ರದ್ಧೆಯಿಂದ ಯಾರು ನನ್ನ ಉಪಾಸನೆ ಮಾಡುವರೋ ಅವರು ಶ್ರೇಷ್ಠಯೋಗಿಗಳೆಂದು ನನ್ನ ಅಭಿಪ್ರಾಯವಿರುತ್ತದೆ. ಆದರೆ ಯಾರು ಸರ್ವತ್ರವ್ಯಾಪಿಯೂ, ಕೂಟಸ್ಥವೂ, ಅಚಲವೂ, ಶಾಶ್ವತರೂಪವೂ ಆದ ಅವ್ಯಕ್ತ, ಅಕ್ಷರ, ಪರಬ್ರಹ್ಮಸ್ವರೂಪವನ್ನು,—ಸರ್ವೇಂದ್ರಿಯ ಸಂಯಮ ಮಾಡಿ, ಸರ್ವತ್ರ ಸಮಬುದ್ಧಿಯುಳ್ಳವರಾಗಿ, ಸರ್ವ ಪ್ರಾಣಿಗಳ ಹಿತದಲ್ಲಿ ಮಗ್ನರಾಗಿ,—ಉಪಾಸಿಸುವರೋ ಅವರು ಸಹ ನನ್ನನ್ನೇ ಪಡೆಯುವರು. ಆದರೆ ಈ ಅವ್ಯಕ್ತ ಪರಬ್ರಹ್ಮೋಪಾಸನೆಯು ಬಹಳ ಕಷ್ಟಕರವಾದದ್ದಾಗಿದೆ. .... .... .... .... .... (ಅ. ೧೨—ಶ್ಲೋ. ೨ ರಿಂದ ೫). ಆದ್ದರಿಂದ ಸರ್ವ ವ್ಯವಹಾರಕಾರ್ಯಗಳನ್ನೆಲ್ಲ ನನ್ನಲ್ಲಿ ಸಮರ್ಪಿಸಿ, ಮತ್ಪರಾಯಣರಾಗಿ ಅನನ್ಯವಾದ ಭಕ್ತಿಯೋಗದಿಂದ ಯಾರು ಸಗುಣಬ್ರಹ್ಮನಾದ ನನ್ನನ್ನು (ವ್ಯಕ್ತರೂಪನಾದ ಸಗುಣ ಪರಮಾತ್ಮನನ್ನು) ಧ್ಯಾನಿಸುತ್ತಲೂ ಉಪಾಸಿಸುತ್ತಲೂ ಇರುವರೋ, ನನ್ನಲ್ಲಿಯೇ ಚಿತ್ತವನ್ನು ನೆಲೆಗೊಳಿಸಿದ ಅಂಥವರನ್ನು ನಾನು ತಡವಿಲ್ಲದೆ ಮೃತ್ಯುಸಂಸಾರಸಾಗರದಿಂದ ಮೇಲೆತ್ತುವೆನು. ಆದ್ದರಿಂದ ಹೇ ಅರ್ಜುನಾ, ನನ್ನಲ್ಲಿಯೇ ಮನಸ್ಸನ್ನಿಡು, ನನ್ನಲ್ಲಿಯೇ ನಿನ್ನ ಬುದ್ಧಿಯನ್ನಿಡು, ಇಷ್ಟಾದಮೇಲೆ ನನ್ನಲ್ಲಿಯೇ ನಿವಾಸ ಮಾಡುವಿ. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. (ಅ. ೧೨—ಶ್ಲೋ. ೬ ರಿಂದ ೮). ಈ ಧರ್ಮಾಮೃತವನ್ನು ಯಥೋಕ್ತವಾಗಿ ಯಾರು ಶ್ರದ್ಧಾನ್ವಿತರಾಗಿಯೂ ಮತ್ಪರಾಯಣರಾಗಿಯೂ ಚೆನ್ನಾಗಿ ಉಪಾಸನೆಗೈಯುವರೋ ಅಂಥ ಭಗವದ್ಭಕ್ತರು ನನಗೆ ಅತಿಶಯ ಪರಮಪ್ರೀತಿಯವರಾಗಿದ್ದಾರೆ." (ಅ. ೧೨—ಶ್ಲೋ. ೨೦).

## ೨ ಜ್ಞಾನಯೋಗ

"ಇನ್ನು ಮೇಲೆ ಜ್ಞಾನದಲ್ಲೆಲ್ಲ ಹೆಚ್ಚಿನದಾದ ಜ್ಞಾನವನ್ನು ಹೇಳುತ್ತೇನೆ; ಯಾವುದನ್ನರಿತದ್ದರಿಂದ ಸರ್ವ ಋಷಿಮುನಿಗಳು ಪರಮಸಿದ್ಧಿಗೆ ಮುಟ್ಟಿದರೋ ಅಂಥ ಸರ್ವಶ್ರೇಷ್ಠವಾದ ಜ್ಞಾನವನ್ನು ಹೇಳುತ್ತೇನೆ ಈ ಜ್ಞಾನವನ್ನಾಶ್ರಯಿಸುವದರಿಂದಲೇ ಅಂಥವರು ನನ್ನ ಸಮಾನಧರ್ಮಿಗಳಾಗಿ ಸಾಧರ್ಮ್ಯ ಮುಕ್ತಿಯನ್ನು ಪಡೆಯುತ್ತಾರೆ. ಅಂಥವರು ಪ್ರಳಯಕಾಲದಲ್ಲಿ ನಾಶಹೊಂದುವದಿಲ್ಲ, ಹಾಗೂ ಪುನಃಸೃಷ್ಟಿಯ ಕಾಲದಲ್ಲಿ ಪುನರುದ್ಭವಿಸುವದಿಲ್ಲ. (ಅ. ೧೪-ಶ್ಲೋ. ೧, ೨) ಹೇ ಅರ್ಜುನನೇ, ಸತ್ವ, ರಜ, ತಮಸ್ಸುಗಳೆಂಬ ಪ್ರಕೃತಿ ಸಂಭವಗಳಾದ ತ್ರಿಗುಣಗಳು ದೇಹದಲ್ಲಿ ಆತ್ಮನನ್ನು ಕಟ್ಟಿಹಾಕುವವು. ಅಂದರೆ ಬದ್ಧನನ್ನಾಗಿ ಮಾಡುವವು. (ಅ. ೧೪-ಶ್ಲೋ. ೫). ಸಾಕ್ಷೀಭಾವವುಳ್ಳ ಅಂದರೆ ದ್ರಷ್ಟಾರನಾದ ಋಷಿಯು ಅಥವಾ ಮುನಿಯು ಮಾನವನ (ಬೌದ್ಧಿಕ, ಪ್ರಾಣಿಕ, ದೈಹಿಕ) ಸರ್ವ ಚಲನವಲನಗಳಿಗೆಲ್ಲ ಅವನ ತ್ರಿಗುಣಗಳೇ ಕಾರಣೀಭೂತವೆಂದು ಕಂಡುಕೊಂಡು, ಈ ಗುಣತ್ರಯಗಳ ಆಚೆಗಿರುವ ಆತ್ಮನನ್ನು ಯಾವಾಗ ಅರಿಯುವನೋ ಆಗ ಅವನು

ನನ್ನ ಭಾವಕ್ಕೆ ಬಂದು ಮುಟ್ಟಿದವನಾಗುತ್ತಾನೆ. ದೇಹಸಂಭವಗಳಾದ ಈ ತ್ರಿಗುಣಗಳನ್ನು ದಾಟಿದಾಗ ಆತ್ಮನು ಜನನ, ಮರಣ, ಮುಪ್ಪು, ದುಃಖ ಇವುಗಳಿಂದ ಬಿಡುಗಡೆ ಹೊಂದಿ ಅಮೃತತ್ವವನ್ನು ಪಡೆಯುತ್ತಾನೆ. (ಅ. ೧೪—ಶ್ಲೋ. ೧೯, ೨೦). ಅದು ಹೇಗೆಂದರೆ, ಹೇ ಅರ್ಜುನಾ, ತಿಳುವಳಿಕೆ, ಪ್ರವೃತ್ತಿ, ಧೀಮೂಢತೆ ಮೊದಲಾದ (ತ್ರಿಗುಣಜನಿತವಾದ ಒಳ್ಳೆಯ ಹಾಗೂ ಕೆಟ್ಟ) ಮನೋಧರ್ಮಗಳು ಯಾವವೇ ಪ್ರಬಲಿಸಿದರೂ ಅವುಗಳನ್ನು ದ್ವೇಷಿಸುವುದಿಲ್ಲ, ಅಥವಾ ಅವು ಬಾರದೆ ಹೋದಾಗ ಅವುಗಳನ್ನು ಆಶಿಸುವುದಿಲ್ಲ. ಯಾವನು ತಟಸ್ಥನಂತೆ ಕುಳಿತುಕೊಂಡು ತ್ರಿಗುಣಗಳ ಆಟಕ್ಕೆ ವಿಚಲಿತನಾಗದೆ "ಗುಣಗಳ ಆಟ ನಡೆದಿದೆ" ಎಂದು ಅಂದುಕೊಳ್ಳುತ್ತ ಸುಮ್ಮನೆ ಕುಳಿತುಕೊಳ್ಳುವನೋ ಅವನು ಚಂಚಲಚಿತ್ತನಾಗಲಾರನು. ಆಗ ಅವನಿಗೆ ಸುಖದುಃಖಗಳು ಸಮನೆಂದೆನಿಸುವವು. ಹಂಚೂ ಬಂಗಾರವೂ ಒಂದೇ ಎಂದೆನಿಸುವುದು. ಪ್ರಿಯ, ಅಪ್ರಿಯ, ನಿಂದಾಸ್ತುತಿ ಇವುಗಳನ್ನೆಲ್ಲ ಸಮವಾಗಿ ಕಾಣುವ ಧೀರನು ಆತನಾಗಿರುತ್ತಾನೆ. ಮಾನಾಪಮಾನಗಳೂ ಆತನಿಗೆ ಸಮವೇ. ಶತ್ರು ಮಿತ್ರರೂ ಆತನಿಗೆ ಒಂದೇ. ಆತನು ತನ್ನ ಲಾಭಕ್ಕಾಗಿ ಯಾವುದನ್ನೂ ಮಾಡುವುದಕ್ಕೆ ಓಡಾಡುವುದಿಲ್ಲ. ಇಂಥವನಿಗೇ ತ್ರಿಗುಣಾತೀತನೆಂದು ಅನ್ನಲಾಗುತ್ತದೆ. (ಅ. ೧೪-ಶ್ಲೋ. ೨೨ರಿಂದ ೨೪). ನನ್ನನ್ನು (ಪರಮಾತ್ಮನನ್ನು) ಯಾರು ಅಚಂಚಲವಾದ ಭಕ್ತಿಯೋಗದಿಂದ ಸೇವಿಸುವರೋ ಅವರು ಈ ತ್ರಿಗುಣಗಳನ್ನು ದಾಟಿ (ಅಂದರೆ ತ್ರಿಗುಣಾತೀತರಾಗಿ) ಬ್ರಹ್ಮಮಯರಾಗುತ್ತಾರೆ. (ಅ. ೧೪-ಶ್ಲೋ. ೨೬) "ಊರ್ಧ್ವಮೂಲಂ, ಅಧಃಶಾಖಂ, ಅಶ್ವತ್ಥಂ,(ಮೇಲೆ ಬೇರುಳ್ಳ, ಕೆಳಗೆ ಕೊಂಬೆಗಳುಳ್ಳ ಅಶ್ವತ್ಥ ವೃಕ್ಷ) ಎಂದು ಪರಮಾತ್ಮನ ಸನಾತನ ಶಾಶ್ವತ (ಪರಾತ್ಪರ) ಸ್ವರೂಪಕ್ಕೆ ಹೆಸರು ಕೊಡಲಾಗಿದೆ.

"ನನ್ನ (ಅಂದರೆ ಪರಮಾತ್ಮನ) ಅಂಶವೇ ಜೀವಲೋಕದಲ್ಲಿ ಸನಾತನವಾದ ಜೀವಾತ್ಮರೂಪವಾಗಿರುತ್ತದೆ. (ಅ. ೧೫-ಶ್ಲೋ. ೭) ಸಾಧನಪ್ರಯತ್ನದಿಂದ ಯೋಗಿಗಳು ತಮ್ಮ ಒಳಗೇ ಇರುವ ಈತನನ್ನು (ಜೀವಾತ್ಮನನ್ನು) ಕಂಡುಕೊಳ್ಳುತ್ತಾರೆ. ಉಳಿದವರಿಗೆ ಪ್ರಯತ್ನಪಟ್ಟರೂ ಆತನು ಕಾಣುವುದಿಲ್ಲ. (ಅ. ೧೫-ಶ್ಲೋ. ೧೧). ಅಹಂಕಾರ ಮೋಹಗಳಿಲ್ಲದವರೂ, ಸಂಗರಹಿತರೂ, ಸದಾ ಅಧ್ಯಾತ್ಮ ಭಾವದಿಂದ ತುಂಬಿದವರೂ, ಕಾಮನೆಗಳನ್ನೆಲ್ಲ ನಿವಾರಣೆಗೊಳಿಸಿಕೊಂಡವರೂ, ಸುಖದುಃಖಗಳೆಂಬ ದ್ವಂದ್ವಗಳಿಂದ ಬಿಡುಗಡೆ ಹೊಂದಿದವರೂ ಆದ ಅಜ್ಞಾನರಹಿತರು ಆ ಶಾಶ್ವತ ಸ್ಥಾನವನ್ನು ಪಡೆಯುತ್ತಾರೆ. (ಅ. ೧೫-ಶ್ಲೋ. ೫). ಆದನ್ನು ಸೂರ್ಯನಾಗಲಿ, ಚಂದ್ರನಾಗಲಿ, ಅಗ್ನಿಯಾಗಲಿ ಬೆಳಗಿಸಲಾರರು. ಅಲ್ಲಿಗೆ ಹೋದರೆ (ಪುನರ್ಜನ್ಮಕ್ಕೆ) ತಿರುಗಿ ಬರಲಾರರು. ಅಂಥ ಆ ಪರಮಸ್ಥಾನವು ನನ್ನದಾಗಿರುತ್ತದೆ (ಪರಮಾತ್ಮನದಾಗಿರುತ್ತದೆ.) (ಅ. ೧೫-ಶ್ಲೋ. ೬).

"ಹೀಗೆ ನಾನು (ಪರಮಾತ್ಮನು) ಸರ್ವರ ಹೃದಯಗಳಲ್ಲಿ ಕುಳಿತುಕೊಂಡಿರುತ್ತೇನೆ. ಸ್ಮೃತಿ, ಜ್ಞಾನ, ಊಹೆ ಇವೆಲ್ಲಾ ನನ್ನಿಂದಲೇ ಹುಟ್ಟುತ್ತವೆ. ಸರ್ವ ವೇದಗಳಿಂದ ಅರಿಯಲ್ಪಡುವವನು ನಾನೇ ಆಗಿದ್ದೇನೆ. ಇಷ್ಟೇ ಅಲ್ಲ (ಸರ್ವ ಋಷಿಗಳ ಹೃದಯದಲ್ಲಿ ಕುಳಿತು) ವೇದಾಂತವನ್ನು ರಚಿಸಿದವನೂ ನಾನೇ ಆಗಿದ್ದೇನೆ; ಹಾಗೂ (ಸರ್ವ ಜ್ಞಾನಿಗಳ ಹೃದಯದಲ್ಲಿ ಕುಳಿತು) ವೇದವನ್ನು ಅರಿಯುವವನೂ ನಾನೇ ಆಗಿದ್ದೇನೆ. ಈ ಲೋಕದಲ್ಲಿ ಕ್ಷರ, ಅಕ್ಷರ ಎಂದು ಅಂತಃಪುರುಷರು ಇಬ್ಬರಿದ್ದಾರೆ. ನಾಶವಂತ ಸರ್ವಪ್ರಾಣಿರೂಪನೇ ಕ್ಷರಪುರುಷನು. ಆ ಸರ್ವಪ್ರಾಣಿಗಳಲ್ಲಿ (ಪ್ರಕೃತಿಗೆ ಅತೀತನಾಗಿ) ನಿರ್ವಿಕಾರ ಸ್ವರೂಪನಾಗಿ (ಕೂಟಸ್ಥರೂಪದಿಂದ) ಕುಳಿತವನೇ ಅವಿನಾಶಿಯಾದ ಅಕ್ಷರಪುರುಷನು (ಅಥವಾ ಆತ್ಮನು). ಇವರಿಬ್ಬರಿಗೂ ಮೇಲೆ ಇರುವ ಬೇರೆ ಇನ್ನೊಬ್ಬ ಪುರುಷನಿಗೆ (ದೇಹಸ್ಥ) ಪರಮಾತ್ಮನೆಂದು ಹೇಳಲ್ಪಡುತ್ತದೆ. ಆತನು (ಒಬ್ಬೊಬ್ಬ ಮನುಷ್ಯರಲ್ಲಿ ಬೇರೆ ಬೇರೆ ಒಬ್ಬೊಬ್ಬನಾಗಿರದೆ) ಲೋಕತ್ರಯಗಳನ್ನೆಲ್ಲ ವ್ಯಾಪಿಸಿ ಅವುಗಳನ್ನೆಲ್ಲ ತನ್ನ ಮೈಮೇಲೆ ಧಾರಣ ಮಾಡಿದ (ಸರ್ವಾಂತರ್ಯಾಮಿಯಾದ) ಈಶ್ವರನಾಗಿರುತ್ತಾನೆ.

ಆದ್ದರಿಂದ ಕ್ಷರದ ಆಚೆಗೆ, ಅಕ್ಷರ ಆತ್ಮನಿಗಿಂತಲೂ ಸಹ ಮೇಲೆ, ಹೀಗೆ (ಸರ್ವರಲ್ಲಿ) [ದೇಹಸ್ಥ ಈಶ್ವರನಾಗಿ] ನಾನಿರುವುದರಿಂದಲೇ ನನಗೆ, ಸರ್ವಾಂತರ್ಯಾಮಿಯಾದ ಪರಮಾತ್ಮನಿಗೆ, ಲೋಕದಲ್ಲಿಯೂ ವೇದದಲ್ಲಿಯೂ ಪುರುಷೋತ್ತಮನೆಂದು • ವರ್ಣಿಸಲಾಗುತ್ತದೆ. ಇಂಥ ಪುರುಷೋತ್ತಮನಾದ ನನ್ನನ್ನು, ಅಜ್ಞಾನರಹಿತನಾದ ಯಾವಾತನು ಅರಿಯುವನೋ ಅವನು ಎಲ್ಲವನ್ನು ಬಲ್ಲವನಾಗಿ, ಹೇ ಅರ್ಜುನನೇ, ಸರ್ವಭಾವದಿಂದ ನನ್ನನ್ನು (ಪರಮಾತ್ಮನನ್ನು) ಭಜಿಸುತ್ತಾನೆ. ಈ ರೀತಿಯಾಗಿ, ಹೇ ಅರ್ಜುನನೇ, ಇಂಥ ಗುಹ್ಯಶಾಸ್ತ್ರವು ನಿನಗೆ ನನ್ನಿಂದ ಹೇಳಲ್ಪಟ್ಟಿತು. ಇವನ್ನು ತಿಳಿದುಕೊಂಡಂಥ ಬುದ್ಧಿವಂತನು ನಿಶ್ಚಯವಾಗಿಯೂ ಧನ್ಯಧನ್ಯನಾಗುತ್ತಾನೆ.'' (ಅ–೧೫, ಶ್ಲೋ–೧೫ರಿಂದ ೨೦).

## ೩ ಕರ್ಮಯೋಗ

"ಜಗತ್ತಿನಲ್ಲಿ ಬ್ರಹ್ಮರ್ಷಿಗಳಿಗೆ ಜ್ಞಾನಯೋಗವೆಂದೂ, ರಾಜರ್ಷಿಗಳಿಗೆ ಕರ್ಮಯೋಗವೆಂದೂ ಎರಡು ಪ್ರಕಾರದ ನಿಷ್ಠೆಗಳು ಪುರಾತನಕಾಲದಲ್ಲಿ, ಹೇ ಅರ್ಜುನನೇ, ನನ್ನಿಂದಲೇ (ಪರಮಾತ್ಮನಿಂದಲೇ) ಹೇಳಲ್ಪಟ್ಟವೆ. (ಅ. ೩—ಶ್ಲೋ. ೩). ಒಂದು ಕ್ಷಣವೂ ಕೂಡ ಕೆಲಸವಿಲ್ಲದೆ ಇರಲಿಕ್ಕೆ ಮನುಷ್ಯನಿಗೆ ಸಾಧ್ಯವಿಲ್ಲ. ಹೀಗೆ ಕಾರ್ಯತಃ ಮನುಷ್ಯನು ಪ್ರಕೃತಿಜನ್ಯವಾದ ಗುಣತ್ರಯಗಳ ಮೂಲಕ ತ್ರಿಗುಣಗಳಿಗೆ ವಶೀಭೂತನಾಗಿಯಾದರೂ ಸರ್ವದಾ ಸರ್ವಪ್ರಕಾರದ ಕೆಲಸಗಳನ್ನು ಮಾಡುತ್ತಲೇ ಇರುತ್ತಾನೆ. (ಅ. ೩—ಶ್ಲೋ. ೫). ಆದ್ದರಿಂದ ಮನಸ್ಸನ್ನು ಸಂಯಮಗೊಳಿಸಿ ನೀನು ಕರ್ಮವನ್ನು ಮಾಡುವವನಾಗು. ಹೀಗೆ ಮಾಡಿದ ಕರ್ಮವು ನಿಷ್ಕ್ರಿಯೆಗಿಂತ (ನೈಷ್ಕರ್ಮ್ಯಕ್ಕಿಂತ) ಶ್ರೇಷ್ಠವಾಗಿದೆ. ಕರ್ಮ ಮಾಡುವುದನ್ನೇ ಬಿಟ್ಟುಬಿಟ್ಟರೆ ನಿನ್ನ ಶರೀರ-ಯಾತ್ರೆ ಕೂಡ ನಡೆಯುವುದಿಲ್ಲ. (ಅ. ೩—ಶ್ಲೋ, ೮). ಕರ್ಮವು ಮೂಲತಃ ಸಗುಣಬ್ರಹ್ಮನಿಂದ ಹುಟ್ಟುತ್ತದೆ. ಸಗುಣಬ್ರಹ್ಮನು ನಿರ್ಗುಣಬ್ರಹ್ಮದೊಳಗಿಂದ ಉದ್ಭೂತನಾಗುತ್ತಾನೆ. ಆದ್ದರಿಂದ ಸರ್ವತ್ರವ್ಯಾಪಿಯಾದ ಸಗುಣಬ್ರಹ್ಮನು (ವಿಶ್ವಕಾರ್ಯರೂಪವಾದ) ಮಹಾಯಜ್ಞದಲ್ಲಿ .ಸರ್ವದಾ ಪ್ರತಿಷ್ಠಿತನಾಗಿರುತ್ತಾನೆ. ಈ ರೀತಿಯಿಂದ (ದಿವ್ಯತರವಾಗಿ) ಪ್ರವರ್ತಿತವಾದ (ವಿಶ್ವವ್ಯಾಪಕ) ಕರ್ಮಚಕ್ರವನ್ನು ಯಾರು ಅನುಸರಿಸುವುದಿಲ್ಲವೋ ಅವರು ಪಾಪಿಗಳು, ಇಂದ್ರಿಯ ಲೋಲುಪರು, ಅಂಥವರ ಜೀವನವು ಕ್ಷುಲ್ಲಕವಾದದ್ದು. (ಅ. ೩—ಶ್ಲೋ. ೧೫, ೧೬). ಆದ್ದರಿಂದ ಆಸಕ್ತಿರಹಿತನಾಗಿ ಸದಾ ಕರ್ಮರತನಾಗಿರು. ಹೀಗೆ ಆಸಕ್ತಿರಹಿತನಾಗಿ ಕರ್ಮ ಮಾಡುವುದರಿಂದ ಪುರುಷನು ಪರಾತ್ಪರನನ್ನು ಪಡೆಯುತ್ತಾನೆ. (ಅ. ೩—ಶ್ಲೋ. ೧೯). ಜನಕಾದಿ ರಾಜರ್ಷಿಗಳು ಕರ್ಮದಿಂದಲೇ ಸಿದ್ಧಪದವಿಯನ್ನು ಪಡೆದರು. ಜಗತ್ತಿನ ಸುಸ್ಥಿತಿಯ ಕಡೆಗೆ ಲಕ್ಷ್ಯವನ್ನಿಟ್ಟಾದರೂ ನೀನು ಕರ್ಮ ಮಾಡುವುದು ಯೋಗ್ಯವಾಗಿದೆ. ಶ್ರೇಷ್ಠರು ಹೇಗೆ ಹೇಗೆ ವರ್ತಿಸುವರೋ, ಇತರರು ಹಾಗೆಯೇ ವರ್ತಿಸುವರು. ಇಂಥವರು ಯಾವುದನ್ನು ಪ್ರಮಾಣವೆಂದು ನಡೆದು ತೋರಿಸುವರೋ, ಲೋಕವೆಲ್ಲಾ ಅದನ್ನೇ ಅನುಸರಿಸುವುದು. (ಅರ್ಥಾತ್ ನಿಷ್ಕರ್ಮವೇ ಶ್ರೇಷ್ಠವೆಂದು ತೋರಿಸಿದರೆ, ಜಗತ್ತಿನ ಜನರೆಲ್ಲಾ ನಿಮ್ಮನ್ನು ನೋಡಿ ನಿಷ್ಕರ್ಮಪರಾಯಣರಾಗಿ ಬಿಡುತ್ತಾರೆ.) ಹೇ ಅರ್ಜುನಾ, ಇದೀಗ ನನ್ನನ್ನೇ ನೋಡು. ನಿಜವಾಗಿ ನೋಡಿದರೆ ನನಗೆ (ಪರಮಾತ್ಮನಿಗೆ) ಮೂರು ಲೋಕಗಳಲ್ಲಿ ಏನೂ ಗಳಿಸಬೇಕಾಗಿಲ್ಲ, ಆದ್ದರಿಂದ ನಾನು ಏನೂ ಮಾಡಬೇಕಾಗಿಲ್ಲ. ಹೀಗಿದ್ದರೂ ನಾನು ಸರ್ವದಾ ಕರ್ಮವನ್ನು ಮಾಡುತ್ತಲೇ ಇರುತ್ತೇನೆ. (ಅರ್ಥಾತ್ ವಿಶ್ವಲೀಲೆಯನ್ನು ನಡಿಸುತ್ತಲೇ ಇರುತ್ತೇನೆ.) ತೂಕಡಿಕೆಯಿಲ್ಲದೆ ಹಗಲಿರುಳೂ ನಡಿಸುತ್ತಿರುವ ಈ ವಿಶ್ವಕಾರ್ಯವನ್ನು ಒಂದು ವೇಳೆ ಬಿಟ್ಟುಬಿಟ್ಟರೆ, (ಅಥವಾ ಅವತಾರ ತೊಟ್ಟು ಬಂದಿರುವ ನಾನು ಲೌಕಿಕ ಕಾರ್ಯಗಳನ್ನೆಲ್ಲಾ ತೊರೆದು ಬಿಟ್ಟರೆ) ಮಾನವರೆಲ್ಲಾ (ನನ್ನ ಆದರ್ಶವನ್ನೇ ಇಟ್ಟುಕೊಂಡು) ಸಂಪೂರ್ಣವಾಗಿ (ಅಂಥ ಆ) ನನ್ನ ಹಾದಿಯನ್ನೇ ಹಿಡಿದುಬಿಡುವರು. (ಅರ್ಥಾತ್ ಸಂಪೂರ್ಣವಾಗಿ ನಿಷ್ಕ್ರಿಯರಾಗಿ ಕುಳಿತು

ಬಿಡುವರು.) ಆದ್ದರಿಂದ ಎಲೈ ಅರ್ಜುನನೇ, ನಾನು ವಿಶ್ವಕಾರ್ಯ ಮಾಡದಿದ್ದರೆ ಜಗತ್ತುಗಳೆಲ್ಲಾ ನಾಶವಾಗಿ ಹೋಗುವವು. (ಹಾಗೂ ಅವತಾರಿಯಾದ ನಾನು ನನ್ನ ಲೌಕಿಕ ಕಾರ್ಯಗಳನ್ನು ಮಾಡದೆ ಬಿಟ್ಟರೆ, ಇಂಥ ತಪ್ಪು ಆದರ್ಶವನ್ನು ತೋರಿಸುವುದರ ಮೂಲಕ) ಜಗತ್ತಿನಲ್ಲೆಲ್ಲ ಸಂಕರವಾಗಿ ಹೋಗುವುದು. ಮತ್ತು ಈ ಕಾರಣದಿಂದ ಜಗತ್ತಿನ ಸರ್ವ ಪ್ರಜೆಗಳ ನಾಶಕ್ಕೆ ನಾನೇ ಕಾರಣೀಭೂತನಾದಂತಾಗುವುದು. ಆದ್ದರಿಂದ ಫಲಾಸಕ್ತಿಯಿಂದ ಅಜ್ಞಾನಿಗಳಾದ ಸಾಮಾನ್ಯ ಜನರು ಹೇಗೆ ಕರ್ಮರತರಾಗಿ ಇರುತ್ತಾರೋ, ಹಾಗೆಯೇ ಜ್ಞಾನಿಗಳು ಸಹ ಜಗತ್ತಿನ ಸುವ್ಯವಸ್ಥಿತತೆಯನ್ನು ಅನುಲಕ್ಷಿಸಿ ಆಸಕ್ತಿರಹಿತರಾಗಿ ಸರ್ವದಾ ಕಾರ್ಯನಿರತರಾಗಿಯೇ ಇರತಕ್ಕದ್ದು. ಸರ್ವದಾ ವ್ಯವಹಾರದಲ್ಲಿಯೇ ನಿರತರಾಗಿರಬೇಕಾದ ಸಾಮಾನ್ಯರಾದ ಅಜ್ಞಾನಿ ಜನರಿಗೆ (ನಿಷ್ಕ್ರಿಯರೂಪವಾದ ನಡತೆಯನ್ನು ತೋರಿಸಿ) ಬುದ್ಧಿಭ್ರಮೆಯನ್ನು ಹುಟ್ಟಿಸಬಾರದು. ಜ್ಞಾನಿಯಾದವನು ಸದಾ ಪರಮಾತ್ಮಸಂಯುಕ್ತಚಿತ್ತನಾಗಿ ತಾನು ಮಾಡಬೇಕಾದ ಕಾರ್ಯಗಳನ್ನೆಲ್ಲ ಚೆನ್ನಾಗಿ ಮಾಡುತ್ತ ಜಗತ್ತಿನ ಜನರ ಕಡೆಯಿಂದಲೂ ಅವರ ಸರ್ವ ಕಾರ್ಯಗಳನ್ನು ಮಾಡಿಸುತ್ತಲಿರಬೇಕು. (ಅ. ೩— ಶ್ಲೋ. ೨೦ ರಿಂದ ೨೬*). ಆದ್ದರಿಂದ, ಹೇ ಅರ್ಜುನನೇ, ಸರ್ವ ಕರ್ಮಗಳನ್ನೆಲ್ಲ ನನ್ನಲ್ಲಿ ಸಮರ್ಪಿಸಿ ಅಧ್ಯಾತ್ಮಪ್ರಜ್ಞೆಯುಳ್ಳವನಾಗಿ, ನಿಸ್ಸ್ವಾರ್ಥ ನಿರಹಂಕಾರಗಳಿಂದ ಕೂಡಿದವನಾಗಿ, ಮನಸ್ಸಿನ ಜ್ವರಗಳನ್ನೆಲ್ಲ ಕಳೆದುಕೊಂಡು (ಜೀವನಸಂಗ್ರಾಮದಲ್ಲಿ) ಸರ್ವದಾ ಹೋರಾಡುವವನಾಗು. ಯಾರು ನನ್ನ ಈ ಅಭಿಪ್ರಾಯವನ್ನು ಶ್ರದ್ಧಾಪೂರ್ವಕವಾಗಿಯೂ, ಅಸೂಯಾರಹಿತ ಬುದ್ಧಿಯಿಂದಲೂ ಸರ್ವದಾ ಅನುಷ್ಠಾನಗೈಯುವರೋ ಅವರು ಕರ್ಮಗಳಿಂದ ಉಂಟಾಗಬಹುದಾದ (ಪಾಪಪುಣ್ಯಗಳೆಂಬ) ಬಂಧನದಿಂದ ಬಿಡುಗಡೆ ಹೊಂದುತ್ತಾರೆ. ಆದರೆ ಯಾವ ಸರ್ವಜ್ಞಾನವಿಮೂಢರು ಅಸೂಯೆಯಿಂದ (ಹಾಗೂ ಅಶ್ರದ್ಧೆಯಿಂದ) ನನ್ನೀ ಅಭಿಪ್ರಾಯವನ್ನು ಅನುಷ್ಠಾನಗೈಯುವದಿಲ್ಲವೋ ಅಂಥ ನಷ್ಟರನ್ನು ಬುದ್ಧಿಯಿಲ್ಲದವರೆಂದು ತಿಳಿ. (ಅ. ೩ — ಶ್ಲೋ. ೩೦ ರಿಂದ ೩೩).

"ಈ ಯೋಗವನ್ನು ನಾನು (ಪರಮಾತ್ಮನು) ಮೊದಲು ವಿವಸ್ವಂತನಿಗೆ ಅಂದರೆ ಸೂರ್ಯದೇವನಿಗೆ ಹೇಳಿದೆನು. ಆತನು ತನ್ನ ಮಗನಾದ ವೈವಸ್ವತಮನುವಿಗೆ ಹೇಳಿದನು. ವೈವಸ್ವತಮನುವು ತನ್ನ ಮಗನಾದ ಇಕ್ಷ್ವಾಕುರಾಜನಿಗೆ ಹೇಳಿದನು. ಹೀಗೆ ಪರಂಪರಾಪ್ರಾಪ್ತವಾಗಿ ಇದನ್ನು ಅನೇಕ ರಾಜರ್ಷಿಗಳು ಅರಿತುಕೊಂಡರು. ಆದರೆ ಕಾಲಕ್ರಮದಲ್ಲಿ ಇಂಥ ಮಹತ್ತರವಾದ ಯೋಗವು, ಹೇ ಅರ್ಜುನನೇ, ಅಳಿದುಹೋಯಿತು. ಅದೇ ಪುರಾತನ ಮಹಾಯೋಗದ ಮಹಾರಹಸ್ಯವನ್ನು, ನನ್ನ ಭಕ್ತನೂ ಪ್ರಿಯಸಖನೂ ನೀನಾಗಿರುವ ಕಾರಣದಿಂದ, ನಿನಗೆ ಇಂದು ನಾನು ಹೇಳಿಕೊಟ್ಟೆನು. (ಅ. ೪—ಶ್ಲೋ. ೧ ರಿಂದ ೩). ಇಂಥ ಈ ದಿವ್ಯಧರ್ಮವು ಯಾವ ಯಾವ ಕಾಲಕ್ಕೆ ಹೀನದೆಸೆಗೆ ಬರುವುದೋ ಆಯಾ ಕಾಲಕ್ಕೆಲ್ಲ ನಾನು ಅಧರ್ಮನಾಶಕ್ಕಾಗಿ ಅವತಾರ ತೊಟ್ಟು ಬರುವೆನು. ಇದನ್ನು ಅನುಸರಿಸುವ ಸಜ್ಜನರ ಸಂರಕ್ಷಣಾರ್ಥವಾಗಿಯೂ, ಅನುಸರಿಸಲಾರದ ದುರ್ಜನರನ್ನು ದೂರಗೊಳಿಸುವ ಸಲುವಾಗಿಯೂ ಹಾಗೂ ಧರ್ಮವನ್ನು ಸಂಸ್ಥಾಪನೆಗೊಳಿಸುವ ಸಲುವಾಗಿಯೂ ನಾನು ಯುಗಯುಗಗಳಲ್ಲಿ ಅವತಾರ ತೊಟ್ಟು ಬರುತ್ತೇನೆ. (ಅ. ೪—ಶ್ಲೋ. ೭, ೮). ಯಾರ ಸರ್ವಕಾರ್ಯ ಸಮಾರಂಭವು ಕಾಮನಾ ಸಂಕಲ್ಪದಿಂದ ವರ್ಜಿತವಾಗಿದೆಯೋ, ಹಾಗೂ ಯಾರ ಕಾರ್ಯಕಲಾಪವು ಜ್ಞಾನಾಗ್ನಿಯಿಂದ ದಹಿಸಲ್ಪಟ್ಟದ್ದಾಗಿ (ಹುರಿದ ಬೀಜದಂತೆ) ಇರುವುದೋ ಅಂಥವರಿಗೆ ಸುಜ್ಞಾನಿಗಳೆಂದು ಮಹಾಜ್ಞಾನಿಗಳು ಅನ್ನುತ್ತಾರೆ. ಕರ್ಮಫಲಾಸಕ್ತಿಯಿಲ್ಲದೆ, ನಿತ್ಯತೃಪ್ತನೂ, ನಿರಾಲಂಬನೂ ಆದಂಥವನು ಕರ್ಮದಲ್ಲಿ ಪ್ರವರ್ತನೆಯುಳ್ಳವನಾದರೂ, ಆತನು ಏನೂ ಮಾಡಲಾರದವನಂತೆಯೇ ಇರುತ್ತಾನೆ. ಆಶಾರಹಿತನೂ, ಆತ್ಮಸಂಯಮನವುಳ್ಳವನೂ,

---

* ಈ ಏಳು ಶ್ಲೋಕಗಳು ಇಡಿ ಭಗವದ್ಗೀತೆಯಲ್ಲಿಯೇ ಅತ್ಯಂತ ಮಹತ್ವವಾದವುಗಳೆಂದು ಶ್ರೀ ಅರವಿಂದರು ತಮ್ಮ "ಗೀತಾಪ್ರಬಂಧ"ವೆಂಬ ["ಎಸ್ಸೇಜ್ ಆನ್ ದಿ ಗೀತಾ"] ಮಹಾಗ್ರಂಥದಲ್ಲಿ ಹೇಳಿದ್ದಾರೆ. ಆದ್ದರಿಂದ ಇವುಗಳನ್ನು ಸರ್ವರೂ ಪುನಃ ಪುನಃ ಓದಿ ನೋಡಬೇಕಾಗಿ ಬಿನ್ನಹ.

ಸರ್ವ ಪ್ರಕಾರದ ಕೂಡಹಾಕುವ ಬುದ್ಧಿಯನ್ನು ಬಿಟ್ಟವನೂ, ಕೇವಲ ಶರೀರಮಾತ್ರದಿಂದ ಕರ್ಮ ಮಾಡುವನಾದ್ದರಿಂದ ಆತನಿಗೆ (ಪಾಪಪುಣ್ಯವೆಂಬ ಅಥವಾ ಕರ್ಮಬಂಧನವೆಂಬ) ಯಾವ ಕಿಲ್ಬಿಷವೂ ತಾಕಲಾರದು. ಸಿಕ್ಕಷ್ಟರಲ್ಲಿಯೇ ಸಂತೋಷ ಹಚ್ಚಿಕೊಳ್ಳುವವನೂ, ದ್ವಂದ್ವಗಳನ್ನು ದಾಟಿದವನೂ, ಮತ್ಸರ ಗುಣವಿಲ್ಲದವನೂ, ಸೋಲು ಗೆಲುವುಗಳಲ್ಲಿ ಸಮಬುದ್ಧಿಯುಳ್ಳವನೂ ಆದಂಥವನು ಕರ್ಮನಿರತನಾಗಿದ್ದರೂ ಆತನು (ಕರ್ಮಬಂಧನದಿಂದ) ಬಂಧಿತನಾಗುವುದಿಲ್ಲ. (ಅರ್ಥಾತ್ ಬದ್ಧಾವಸ್ಥೆಗೆ ಗುರಿಯಾಗುವುದಿಲ್ಲ). ಸಂಗ ರಹಿತನೂ, ಮುಕ್ತನೂ, ಜ್ಞಾನದಲ್ಲಿಯೇ ನೆಲೆಗೊಂಡ ಚಿತ್ತವುಳ್ಳವನೂ, ಯಜ್ಞರೂಪದಿಂದ (ಸಮರ್ಪಣ ಭಾವದಿಂದ) ಮಾಡಿದ ಕರ್ಮವು (ಆತನಿಗೆ ಯಾವ ಬಂಧನವನ್ನೂ ಉಂಟುಮಾಡದೆ) ಸಂಪೂರ್ಣವಾಗಿ ಕರಗಿ ಹೋಗುತ್ತದೆ. ಅರ್ಪಣವೂ ಬ್ರಹ್ಮವಸ್ತುವೇ; ಹವಿರ್ದ್ರವ್ಯವೂ ಬ್ರಹ್ಮವಸ್ತುವೇ; ಯಾವುದರಲ್ಲಿ ಹೋಮ ಮಾಡುವೆವೋ ಅಂಥ ಅಗ್ನಿಯೂ ಬ್ರಹ್ಮನೇ; ಹವನ ಮಾಡುವವನೂ ಬ್ರಹ್ಮಸ್ವರೂಪನೇ; ಇದೆಲ್ಲಾ ಹೋಗಿ ಮುಟ್ಟುವುದೂ ಪರಬ್ರಹ್ಮನಿಗೇ; ಇಂಥ ಬ್ರಹ್ಮಕರ್ಮಸಮಾಧಿಯಲ್ಲಿ ಎಲ್ಲವೂ ಬ್ರಹ್ಮಮಯವೇ ಆಗಿರುತ್ತದೆ. "ಬ್ರಹ್ಮಾರ್ಪಣಂ, ಬ್ರಹ್ಮಹವಿರ್ಬ್ರಹ್ಮಾಗ್ನೌ, ಬ್ರಹ್ಮಣಾಹುತಂ, ಬ್ರಹ್ಮೈವ ತೇನ ಗಂತವ್ಯಂ, ಬ್ರಹ್ಮಕರ್ಮ ಸಮಾಧಿನಾ ॥" (ಅ. ೪ - ಶ್ಲೋ. ೧೯ ರಿಂದ ೨೪).

"ಯೋಗಯುಕ್ತನೂ, ವಿಶುದ್ಧಾತ್ಮನೂ, ಜಿತಾತ್ಮನೂ, ಜಿತೇಂದ್ರಿಯನೂ, ಸರ್ವಭೂತಾತ್ಮ ಭೂತಾತ್ಮನೂ (ಸರ್ವ ಪ್ರಾಣಿಗಳಲ್ಲಿರುವ ಆತ್ಮನೂ ತನ್ನ ಆತ್ಮನೂ ಒಬ್ಬನೇ ಆಗಿದ್ದಾನೆಂದು ಕಂಡುಕೊಳ್ಳುವವನೂ) ಕರ್ಮಪ್ರವೃತ್ತನಾಗಿದ್ದರೂ ಕೂಡ ಅವನಿಗೆ ಯಾವ (ಕರ್ಮಬಂಧನದ) ಲೇಪವೂ ಇಲ್ಲ. ಈಶಸಂಯುಕ್ತಚಿತ್ತನಾದ ತತ್ವವೇತ್ತನಾದವನು ನೋಡಿಯೂ, ಕೇಳಿಯೂ, ಮುಟ್ಟಿಯೂ, ಮೂಸಿಯೂ, ಉಂಡೂ, ಓಡಾಡಿಯೂ, ಮಲಗಿಯೂ, ಉಸುರಾಡಿಸಿಯೂ, ಮಾತನಾಡಿಯೂ, ಕೊಟ್ಟೂ, ತೆಗೆದುಕೊಂಡೂ, ಕಣ್ಣು ತೆರೆದೂ, ಕಣ್ಣು ಮುಚ್ಚಿಯೂ, "ಇಂದ್ರಿಯಗಳು ಇಂದ್ರಿಯ ವಿಷಯಗಳಲ್ಲಿ ಪ್ರವರ್ತಿಸುತ್ತಿರುವವು" ಎಂದು (ಸಾಕ್ಷೀ ಭಾವದಿಂದ) ಭಾವಿಸುತ್ತ "ನಾನು (ಅಂದರೆ ಆತ್ಮನು) ಏನೂ ಮಾಡುತ್ತಾ ಇಲ್ಲ" ಎಂದು ತಿಳಿದುಕೊಳ್ಳ ತಕ್ಕದ್ದು. ಸರ್ವಕರ್ಮಗಳನ್ನು ಪರಬ್ರಹ್ಮನಲ್ಲಿ ಸಮರ್ಪಿಸಿ, ಸಂಗರಹಿತನಾಗಿ ಯಾವನು ಮಾಡುವನೋ ಕಮಲದೆಲೆಯ ಮೇಲಿನ ನೀರಿನಂತೆ, ಆತನಿಗೆ ಯಾವ ಪಾಪವೂ (ಯಾವ ಕರ್ಮಬಂಧನವೂ) ಲೇಪಿಸುವುದಿಲ್ಲ. ಕರ್ಮಯೋಗಿಗಳು ಸಂಗರಹಿತರಾಗಿ ಆತ್ಮಶುದ್ಧಿಯ ಸಲುವಾಗಿ ಕೇವಲ ದೇಹದಿಂದ, ಮನದಿಂದ, ಬುದ್ಧಿಯಿಂದ, ಇಂದ್ರಿಯಗಳಿಂದ ಮಾತ್ರ ಕರ್ಮ ಮಾಡುತ್ತಾರೆ. ಪರಮಾತ್ಮ ಸಂಯುಕ್ತ ಚಿತ್ತರಾದವರು ಹೀಗೆ ಕರ್ಮ ಫಲದ ಆಶೆಯನ್ನು ತ್ಯಜಿಸಿ ಕರ್ಮ ಮಾಡುವುದರಿಂದ ನೈಷ್ಠಿಕವಾದ ಪರಮ ಶಾಂತಿಯನ್ನು ಪಡೆಯುವರು. ಆದರೆ ಪರಮಾತ್ಮ ಸಂಯುಕ್ತ ಚಿತ್ತರಲ್ಲದವರು ಕಾಮನಾಪರರಾಗಿ ಫಲಾಸಕ್ತಿಯಿಂದ ಕರ್ಮ ಮಾಡುವುದರಿಂದ (ಕರ್ಮಬಂಧನದಿಂದ) ಬದ್ಧರಾಗುತ್ತಾರೆ. (ಅ. ೫- ಶ್ಲೋ. ೭ರಿಂದ ೧೨) ಆದರೆ ನಿಜವಾಗಿ ನೋಡಿದರೆ ನವದ್ವಾರಗಳಿಂದ ಕೂಡಿದ ದೇಹವೆಂಬ ಪುರದಲ್ಲಿ ಆತ್ಮರಾಜನು, ಸರ್ವಕರ್ಮಗಳನ್ನು ಮನದಲ್ಲಿ ಸಂತ್ಯಜಿಸಿ (ಆದರೆ ಹೊರಗೆ ಸರ್ವಕರ್ಮಗಳು ನಡೆಯುತ್ತಾ ಇದ್ದರೂ ಸಹ) ಏನೂ ಮಾಡದಂತೆ ಏನೂ ಮಾಡಿಸದಂತೆ ಆನಂದ ವಶನಾಗಿ ಇರುತ್ತಾನೆ. ಈ ಪ್ರಭುವು (ತಾನು ಯಾರೊಳಗೆ ಕುಳಿತಿದ್ದಾನೆಯೋ ಅಂಥ) ಲೋಕಜನಗಳ ಕರ್ಮಗಳ ಕರ್ತೃತ್ವವನ್ನಾಗಲಿ, ಕರ್ಮಪ್ರವರ್ತನವನ್ನಾಗಲಿ, ಕರ್ಮಫಲ ಸಂಯೋಗವನ್ನಾಗಲಿ ಅವರಲ್ಲಿ ತಾನು ಹುಟ್ಟಿಸುತ್ತಿರುವುದಿಲ್ಲ. ಅದೆಲ್ಲವನ್ನೂ ಪ್ರಕೃತಿಯೇ ಮಾಡುತ್ತಾಳೆ. ಆ ಪ್ರಭುವು (ಆತ್ಮನು) ಯಾರ ಪಾಪವನ್ನೂ ಪುಣ್ಯವನ್ನೂ ಸ್ವೀಕರಿಸುವುದಿಲ್ಲ. ಹಾಗೂ ಅಜ್ಞಾನದಿಂದ ಜ್ಞಾನವು ಮುಚ್ಚಲ್ಪಟ್ಟಿದೆ. ಆದ್ದರಿಂದ ಪ್ರಾಣಿಗಳು ಮೋಹಗೊಳ್ಳುತ್ತವೆ. ಅಂದರೆ ಮೂಢತಾಪ್ರಾಪ್ತವಾಗುತ್ತವೆ. ಆತ್ಮಜ್ಞಾನದಿಂದ ಆ ಅಜ್ಞಾನವು ಯಾರಲ್ಲಿ ನಾಶವಾಗಿದೆಯೋ ಅವರಿಗೆ ಜ್ಞಾನವು ಸೂರ್ಯನಂತೆ ಪರಾತ್ಪರನನ್ನು ಪ್ರಕಾಶಗೊಳಿಸಿ ತೋರಿಸುತ್ತದೆ.

ಆತನಲ್ಲಿಯೇ ಬುದ್ಧಿಯನ್ನಿಟ್ಟವರು, ಆತನಲ್ಲಿಯೇ ಆತ್ಮವನ್ನು ನೆಲೆಗೊಳಿಸಿದವರು, ಕೇವಲ ಆತನಲ್ಲಿಯೇ ಪರಾಯಣರಾದವರು, ಜ್ಞಾನದಿಂದ ಕಲ್ಮಿಷ ತೊಳೆದವರಾಗಿ ಪುನರ್ಜನ್ಮಕ್ಕೆ ಬಾರದಂಥ ಪರಮಪದಕ್ಕೆ ಸೇರುತ್ತಾರೆ. (ಅ. ೫-ಶ್ಲೋ. ೧೩ರಿಂದ ೧೭). ಇಂಥ ಜ್ಞಾನಿಗಳು, ಸರ್ವ ಯಜ್ಞ ತಪಸ್ಸುಗಳ ಭೋಕ್ತಾರನೂ, ಸರ್ವಲೋಕ ಮಹೇಶ್ವರನೂ, ಸರ್ವ ಪ್ರಾಣಿಗಳ ಸಖನೂ ಆದ ನನ್ನನ್ನು ಅರಿತುಕೊಂಡು ಪರಮಶಾಂತಿಯನ್ನು ಪಡೆಯುತ್ತಾರೆ. " (ಅ. ೫-ಶ್ಲೋ. ೨೯).

*  *  *  *

ಕನ್ನಡ ನಾಡಿನ ಶಿವಶರಣರ ಷಟ್‌ಸ್ಥಲಜ್ಞಾನವಚನಗಳಲ್ಲಿ ಭಕ್ತಿ, ಯೋಗ ಹಾಗು ಜ್ಞಾನ ಇವುಗಳ ಸಮನ್ವಯವೂ, ಅವರ (ಶಿವಶರಣರ) ಚರಿತ್ರಗಳಲ್ಲಿ ಕಾಯಕ ಅಥವಾ ಕರ್ಮಯೋಗದ ಪರಮಾವಧಿ ಮಹತ್ವವೂ ಸ್ಪಷ್ಟವಾಗಿ ಒಡಮೂಡಿ ಕಂಡುಬರುತ್ತದೆ. ಭಗವದ್ಗೀತೆಯ ಕಾಲದ ನಂತರ ಮಧ್ಯಕಾಲದಲ್ಲಿ ಹೀಗೆ ಸರ್ವ ಯೋಗಗಳ ಸಮನ್ವಯ ಮಾಡಿದವರೆಂದರೆ ಇಡಿ ಭರತಖಂಡದಲ್ಲಿ ನಮ್ಮ ಕನ್ನಡನಾಡಿನ ಶಿವಶರಣರೇ ಎಂದು ನನಗೆ ಅನಿಸುತ್ತದೆ. ಬಲ್ಲವರು ಈ ವಿಷಯವನ್ನು ಕುರಿತು ಹೆಚ್ಚಿಗೆ ಸಂಶೋಧಿಸುವರೆಂದು ನಾನು ಅವರಲ್ಲಿ ಬಿನ್ನಯಿಸುತ್ತೇನೆ.

ಸದ್ಯದ ಆಧುನಿಕ ಜಗತ್ತಿನಲ್ಲಿ ಪುನಃ ಸರ್ವಯೋಗ ಸಮನ್ವಯವನ್ನು ಸಾರಿ ಆ ಮೂಲಕ ಮಾನವಕೋಟಿಯನ್ನು ಮತ್ತೊಂದು ಪಾವಟಿಗೆಗೆ ಮೇಲೇರಿಸುವುದಕ್ಕೆ (ವಿಜ್ಞಾನಕ್ಕೆ ತಲುಪಿಸುವುದಕ್ಕೆ) ಜಯಭೇರಿಯನ್ನು ಬಾರಿಸಿದವರೆಂದರೆ ಇಂದು ಶ್ರೀ ಅರವಿಂದರೇ. " ಅವತಾರಿಗಳು ಭೂಮಿಯ ಮೇಲೆ ಪುನಃ ಪುನಃ ಬರುವುದು ಮಾನವಕೋಟಿಯನ್ನು ಮುಂದುಮುಂದಿನ ಪಾವಟಿಗೆಗೆ ಏರಿಸುವುದಕ್ಕೇ " ಎಂದು ಶ್ರೀ ಅರವಿಂದರು ತಮ್ಮ ಸುವಿಖ್ಯಾತವಾದ " ಯೋಗ ಮತ್ತು ಅದರ ಉದ್ದೇಶ " (" ಯೋಗ ಆ್ಯಂಡ್ ಇಟ್ಸ್ ಆಬ್ಜೆಕ್ಟ್ಸ " ) ಎಂಬ ಗ್ರಂಥದ ಕೊನೆಯ ಅಂಶದಲ್ಲಿ ಹೇಳಿದ ಮಾತಿನ ಮರ್ಮವು ಇದೇ ಆಗಿದೆ. ಈಗ ಶ್ರೀ ಅರವಿಂದರು ತಾವು ಹೇಳಿದ " ವಿಜ್ಞಾನ "ವೆಂಬುದೂ ಸಹ ಇದೇ ಏನೂ ಕೊಟ್ಟ ಕೊನೆಯದಲ್ಲವೆಂದೂ, ಇನ್ನೂ "ಆನಂದ" "ಚಿತ್" "ಸತ್" ಮೊದಲಾದ ತತ್ವಗಳು ಭೂತಲದಲ್ಲಿ ಪ್ರಕಟವಾಗತಕ್ಕವುಗಳಿವೆಯೆಂದೂ, ಹಾಗೂ ಆಯಾಕಾಲಕ್ಕೆ ಆಯಾ ತತ್ವಗಳನ್ನು ಭೂಮಂಡಲಕ್ಕೆ ತರುವ ಸಲುವಾಗಿ ಪುನಃ ಮತ್ತೆ ಮತ್ತೆ ಅವತಾರಿಗಳು ಬರುತ್ತಾರೆಂತಲೂ ಸಹ ಅವರು ತಮ್ಮ ಅದೇ ಸುವಿಖ್ಯಾತ ಗ್ರಂಥದಲ್ಲಿ ಹೇಳಿದ್ದಾರೆ. ಆದ್ದರಿಂದ ಶ್ರೀ ಅರವಿಂದರ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ಪ್ರಖ್ಯಾತ " ಯೋಗಪ್ರಕಾಶ "ವೆಂಬ—ಪತ್ರಗಳಿಂದ ಸಂಗ್ರಹಿಸಲ್ಪಟ್ಟ—ಅಮೌಲ್ಯ ಗ್ರಂಥದ ಕಡೆಗೆ ಹೊರಳುವಾ. ಅದರ ನಾಲ್ಕೂ ಅಧ್ಯಾಯಗಳಿಂದ ಒಂದೊಂದು ಅಥವಾ ಎರಡೆರಡು ಪತ್ರಗಳನ್ನು ಇಲ್ಲಿ ಅನುವಾದಿಸುವೆನು. ಅವುಗಳಿಂದ ಇಡಿ ಗ್ರಂಥದ ಬಗೆಗೂ, ಅವರ ಯೋಗದಲ್ಲಿ ಜ್ಞಾನ-ಭಕ್ತಿ-ಕರ್ಮಗಳ ಸಾಮಂಜಸ್ಯವೂ, ಸಮನ್ವಯವೂ, ಐಕ್ಯತೆಯೂ ಇರುವುದೆಂಬ ವಿಷಯದ ಬಗೆಗೂ ಕೆಲಮಟ್ಟಿಗಾದರೂ ಕಲ್ಪನೆಯಾಗದಿರದು.

## (೧) ಗುರಿ

" ಇಲ್ಲಿ (ಆಶ್ರಮದಲ್ಲಿ) ಅನುಸರಿಸುವ ಯೋಗದ ಹಾದಿಯು ಉಳಿದ ಯೋಗಗಳಿಗಿಂತ ಭಿನ್ನವಾಗಿದೆ. ಇದರ ಗುರಿಯು ಕೇವಲ ಸಾಮಾನ್ಯ ಅಜ್ಞಾನಮಯ ಜಗತ್ಪ್ರಜ್ಞೆಯನ್ನು ದಾಟಿ ದೈವೀ ಪ್ರಜ್ಞೆಗೆ ಏರುವುದಷ್ಟೇ ಆಗಿಲ್ಲ; ಆದರೆ ವಿಜ್ಞಾನಮಯ ದೈವೀ ಚಿತ್ಪ್ರಜ್ಞೆಯ ಶಕ್ತಿಯನ್ನು ಮಾನಸಿಕ ಪ್ರಾಣಿಕ

ಯಾಗಿ ಭಾವಿಸುವರು. ಇದು ಅವರ ಬೌದ್ಧಿಕ ಗ್ರಹಿಕೆ ಅಥವಾ ಬೌದ್ಧಿಕ ತಿಳುವಳಿಕೆಯ ಪರಿಣಾಮವಾಗಿದೆ. ಏಕೆಂದರೆ ಅವರು ಇದರ ಸಹಾಯದಿಂದ ಮಾತ್ರವೇ ಅರಿತುಕೊಳ್ಳುವ ಹಾಗೂ ಭಾವಿಸುವ ಕೆಲಸವನ್ನು ಮಾಡುವರು. ಆದ್ದರಿಂದ ಅವರು ತಮ್ಮ ಒಳನೆಲೆಗಳನ್ನೂ ಕ್ರಿಯೆಗಳನ್ನೂ ಅರಿಯರು. ಒಂದು ವೇಳೆ ಅರಿತರೂ ಹೊರಮಗ್ಗಲಿಗೆ ಕಾಣುವಷ್ಟರ ಬಗೆಗೆ ಮಾತ್ರವೇ ಅರಿಯುವರು. ಆದರೆ ನಮ್ಮ ಪ್ರಕೃತಿಯ ಮಹಾಜಟಿಲತೆಯ ಬಗೆಗೆ ಅರಿವನ್ನುಂಟುಮಾಡಿಕೊಳ್ಳುವುದೂ, ಅದನ್ನು ಮಿಸುಕಾಡಿಸುವ ವಿವಿಧ ಶಕ್ತಿಗಳನ್ನು ಕಂಡುಕೊಳ್ಳುವುದೂ ಹಾಗೂ ಆ ಪ್ರಕೃತಿಯ ಮೇಲೆ ಪ್ರತ್ಯಕ್ಷಜ್ಞಾನದ ಪ್ರಭುತ್ವವನ್ನು ಸ್ಥಾಪಿಸುವುದೂ ಯೋಗದ ತಳಹದಿಯನ್ನು ಭದ್ರಗೊಳಿಸುವ ಕಾರ್ಯದೊಳಗಿನ ಮುಖ್ಯ ಭಾಗವೇ ಆಗಿದೆ. ನಾವು ಅನೇಕ ಅಂಶಗಳಿಂದ ನಿರ್ಮಿಸಲ್ಪಟ್ಟಿದ್ದೇವೆ. ಆ ಎಲ್ಲಾ ಅಂಶಗಳೂ ನಮ್ಮ ಒಟ್ಟು ಅರಿವಿಗೆ, ಅರ್ಥಾತ್ ನಮ್ಮ ವಿಚಾರಕ್ಕೆ, ಸಂಕಲ್ಪಕ್ಕೆ, ಇಂದ್ರಿಯಾನುಭೂತಿಗೆ, ಭಾವಕ್ಕೆ, ಕೃತಿಗೆ, ಒಂದಿಲ್ಲೊಂದು ಕೊಡುಗೆಯನ್ನು ಒದಗಿಸಿಯೇ ಇರುತ್ತವೆ. ಆದರೆ ನಾವು ನಮ್ಮ ಇವೆಲ್ಲ ಪ್ರವೃತ್ತಿಗಳ ಮೂಲವನ್ನಾಗಲಿ, ಬೆಳವಣಿಗೆಯ ಕ್ರಮವನ್ನಾಗಲಿ ಅರಿಯುವುದಿಲ್ಲ. ಆದರೆ ತೋರಿಕೆಯ ಮೇಲ್ಭಾಗದಲ್ಲಿ ಇವೆಲ್ಲವುಗಳ ಅಕಾಂಡತಾಂಡವಮಯವಾದ ಸಮ್ಮಿಶ್ರ ಸಂಕರ ಪರಿಣಾಮಗಳ ಬಗೆಗಷ್ಟೇ ನಮಗೆ ಅರಿವುಂಟಾಗುವುದು. ಆದ್ದರಿಂದ ಇವುಗಳ ಮೇಲೆ ನಾವು ಏನಾದರೂ ಬೇರೆ ಸುಪರಿಣಾಮವನ್ನು ಹುಟ್ಟಿಸಬೇಕೆಂದರೆ ಅದೆಲ್ಲಾ ಕೇವಲ ಸಂದಿಗ್ಧಮಯವಾಗಿ ಬಿಡುವುದೇ ಹೊರತು ಇದಕ್ಕಿಂತ ಹೆಚ್ಚಿನದೇನನ್ನೂ ಸಾಧಿಸುವುದಕ್ಕೆ ಅಸಾಧ್ಯವಾಗದಂತಾಗಿಬಿಡುತ್ತದೆ.

"ಆದರೆ ನಮ್ಮ ಆತ್ಮಸತ್ತೆಯ ಅಂಶಗಳೆಲ್ಲಾ ಮಹಾಜ್ಞಾನದ ಕಡೆಗೆ ಸದಾಕಾಲವೂ ಹೊರಳಿಕೊಂಡಿರುವುದೇ ಇದನ್ನು ಸಾಧಿಸುವುದಕ್ಕೆ ಮಹದುಪಾಯವಾಗಿದೆ. ಮೇಲಿನಿಂದ ದೈವೀ ಚಿನ್ಮಯೀ ಶಕ್ತಿಯ ಜ್ಯೋತಿಯನ್ನು ಕೆಳಗೆ ಕರೆಯುವುದೂ, ಹಾಗೂ ಹೃತ್ಪುರುಷನನ್ನು ಹೊರಮುಖಕ್ಕೆ ತಂದು ಮಹದಾಕಾಂಕ್ಷೆಯ ಅಥವಾ ಅಭೀಪ್ಸೆಯ ಜ್ವಾಲೆಯನ್ನು ಹೊತ್ತಿಸುವುದೂ ಇದಕ್ಕೆ ಮುಖ್ಯ ಮಾರ್ಗವಾಗಿದೆ; ಇದರಿಂದ ಬಾಹ್ಯಬುದ್ಧಿಯಲ್ಲಿ ಆತ್ಮಿಕ ಜಾಗೃತಿಯುಂಟಾಗುವುದು ಹಾಗೂ ಪ್ರಾಣಮಯ ಸತ್ತೆಯು ಅಗ್ನಿಕುಂಡದಲ್ಲಿ ಪರಿಶುದ್ಧಗೊಳಿಸಲ್ಪಡುವುದು."

* * * *

"…. …. …. …. …. ಮಾನವಸತ್ತೆಯು ಯಾವ ಯಾವ ಘಟಕಗಳಿಂದ ಸಂಘಟಿಸಲ್ಪಟ್ಟಿರುವುದೆಂದರೆ—ಚೈತ್ಯಪುರುಷನು ಅಥವಾ ಹೃತ್ಪುರುಷನು ಅಂತರ್ಮನ, ಅಂತಃಪ್ರಾಣ, ಅಂತರ್ಭೌತಿಕ ಮೊದಲಾದ ಎಲ್ಲ ಆಂತರಿಕ ಸತ್ತೆಗಳಿಗೂ, ಹಾಗೂ ಅವುಗಳ ಪ್ರಕಟೀಕರಣದ ಯಂತ್ರಸ್ವರೂಪವಾಗಿ ತೀರ ಬಾಹ್ಯಿಕವಾಗಿರುವ ಮನ, ಪ್ರಾಣ, ದೇಹಗಳಿಂದ ಕೂಡಿದ ಬಾಹ್ಯಪ್ರಕೃತಿಗೂ, ಹಿಮ್ಮಗ್ಗಲಲ್ಲಿ ನಿಂತುಕೊಂಡು ಸಹಾಯ ಮಾಡುತ್ತಿರುತ್ತಾನೆ. ಆದರೆ ಇವೆಲ್ಲವುಗಳಿಗಿಂತ ಮೇಲ್ಗಡೆಗೆ "ಮೂಲ ಸತ್ತೆ" ಅಥವಾ "ಜೀವಾತ್ಮ" ನಿದ್ದಾನೆ. ಆದರೆ ಆತನು ಇವೆಲ್ಲವುಗಳನ್ನೂ ತನ್ನ ಪ್ರಕಟತ್ವದ ಸಲುವಾಗಿ ಉಪಯೋಗಿಸುತ್ತಾನೆ. ಈತನು ಸ್ವಯಂ ಪರಮಾತ್ಮನ ಒಂದು ಅಂಶವೇ ಆಗಿದ್ದಾನೆ. ಆದರೆ ಮಾನವನ ಈ ಸತ್ಯಸ್ವರೂಪವು ಅವನ ಹೊರಸ್ವರೂಪಗಳಿಂದ ಮುಚ್ಚಲ್ಪಟ್ಟಿರುತ್ತದೆ. ಆ ಬಾಹ್ಯಸ್ವರೂಪವು ಆಂತರಿಕವಾದ ಈ ಜೀವಾತ್ಮ ಹಾಗೂ ಹೃತ್ಪುರುಷರ ಸ್ಥಾನದಲ್ಲಿ ಮನೋಮಯ ಹಾಗೂ ಪ್ರಾಣಮಯ ಅಹಂಕಾರವನ್ನು ಸ್ಥಾಪಿಸುತ್ತದೆ. ಆದರೆ ಯಾರು ತಮ್ಮನ್ನು ತಾವು ಅರಿಯುವುದಕ್ಕೆ ಆರಂಭಿಸಿರುವರೋ, ಅಂಥವರಿಗೆ ಮಾತ್ರ ಈ ಮೂಲಪುರುಷನ ಅರಿವು ಉಂಟಾಗಲು ಸಾಧ್ಯವಾಗುತ್ತದೆ. ಆದರೆ ಆಗಲೂ ಕೂಡ ಆ ಮೂಲಪುರುಷನು ಸರ್ವದಾ ಮನ, ಪ್ರಾಣ, ದೇಹಗಳ ಕ್ರಿಯೆಗಳ ಹಿಂಗಡೆಯಲ್ಲಿಯೇ ಇರುತ್ತಾನೆ. ಆದರೆ ಸ್ವಯಂ ಪರಮಾತ್ಮನ ಸ್ಫುಲಿಂಗರೂಪನಾಗಿರುವ ಹೃತ್ಪುರುಷ ಅಥವಾ ಅಂತರಾತ್ಮನ ಮುಖಾಂತರವಾಗಿಯೇ ಆತನು ಹೆಚ್ಚು ಪ್ರತ್ಯಕ್ಷ ರೂಪದಿಂದ ಪ್ರಕಟನಾಗು

ತ್ತಾನೆ. ನಮ್ಮ ಪ್ರಕೃತಿಯೊಳಗೆ ಈ ಹೃತ್ಪುರುಷನ ವಿಕಾಸವು ಯಾವಾಗ ಆಗುವುದೋ ಆವಾಗ ಮಾತ್ರವೇ ನಮ್ಮ ಮೇಲ್ಗಡೆಗಿರುವ ಕೇಂದ್ರಸ್ವರೂಪನಾದ ಮೂಲ ಜೀವಾತ್ಮನ ಕೂಡ ಅರಿತರಿತು ಸಂಯುಕ್ತ ರಾಗುವ ಕಾರ್ಯವು ನಮ್ಮೊಳಗೆ ಆರಂಭವಾಗುವುದು. ಯಾವಾಗ ಇಷ್ಟಾಗುವುದೋ, ಹಾಗೂ ಜೀವಾತ್ಮನು ತನ್ನ ಚಿನ್ಮಯ ಸಂಕಲ್ಪಶಕ್ತಿಯಿಂದ ಪ್ರಕೃತಿಯ ಪ್ರವೃತ್ತಿಗಳನ್ನು ನಿಯಂತ್ರಣಗೊಳಿಸಿ ಸುವ್ಯವಸ್ಥೆಗೊಳಿಸ ತೊಡಗುವನೋ ಆಗ ನಾವು ತಿಳಿದುಕೊಳ್ಳಬೇಕಾದುದೇನೆಂದರೆ, ಮಾನವನಿಗೆ ಆಗ ಕೇವಲ ಬೌದ್ಧಿಕ ಇಲ್ಲವೆ ನೈತಿಕ ಪ್ರಭುತ್ವವಿಷ್ಟೇ ಅಲ್ಲ, ಆದರೆ ವಾಸ್ತವಿಕವಾದ ಆಧ್ಯಾತ್ಮಿಕ ಆತ್ಮಪ್ರಭುತ್ವವೂ ಪ್ರಾಪ್ತವಾಗಿರುತ್ತದೆ...."

* * * *

## (೩) ಸಮರ್ಪಣ ಹಾಗೂ ಉನ್ಮುಕ್ತತೆ

"ಈ ಯೋಗದ ಮುಖ್ಯ ತತ್ವವೆಂದರೆ ಪರಮಾತ್ಮನೊಬ್ಬನಿಗೇ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸುವುದು,—ಆದರೆ ಆತನ ಹೊರತು ಇನ್ನಾರಿಗೂ ಅಲ್ಲ, ಹಾಗೂ ಇನ್ನಾವುದಕ್ಕೂ ಅಲ್ಲ; ಮತ್ತು ಜಗನ್ಮಾತೆಯ ಕೂಡ ಏಕತ್ವವನ್ನು ಸಾಧಿಸುವುದರ ಮೂಲಕವಾಗಿ ನಮ್ಮೊಳಗೆ ವಿಜ್ಞಾನಮಯ ಪರಮಾತ್ಮನ ಪರಾತ್ಪರ ಜ್ಯೋತಿ, ಶಕ್ತಿ, ವಿಶಾಲತೆ, ಶಾಂತಿ, ಪವಿತ್ರತೆ, ಸತ್ಯಪ್ರಜ್ಞೆ ಮತ್ತು ಆನಂದ ಮೊದಲಾದವುಗಳನ್ನೆಲ್ಲ ಇಳಿಸಬೇಕಾಗಿದೆ."

* * * *

"ರಾಧಾದೇವಿಯೆಂದರೆ ಪರಮಾತ್ಮನ ಬಗೆಗಿರುವ ಸಾರ್ವಭೌಮಿಕ ಹಾಗೂ ಸರ್ವಾಂಗೀಣ ಪ್ರೇಮದ ರೂಪಕವೇ ಆಗಿದ್ದಾಳೆ. ಸರ್ವಾಂಗೀಣವೆಂದರೆ, ಜೀವಸತ್ತೆಯ ಸಕಲ ವಿಭಾಗಗಳಲ್ಲಿ, ಅಂದರೆ ಅತಿ ಮೇಲಿನ ಆತ್ಮಿಕ ಸತ್ತೆ ಮೊದಲುಗೊಂಡು ಕೆಳಗಿನ ಜಡದೇಹದ ವರೆಗಿನ ಸರ್ವಸತ್ತೆಗಳಲ್ಲಿ, ನಮ್ಮ ಸಮಸ್ತ ಜೀವಸತ್ತೆಯ ಸಾರ್ವಭೌಮಿಕ ಆತ್ಮಸಮರ್ಪಣ ಹಾಗೂ ಆತ್ಮನಿವೇದನ ಅಥವಾ ಆತ್ಮ ನೈವೇದ್ಯವನ್ನು ಸಾಧಿಸುವುದೇ ಆಗಿದೆ, ಮತ್ತು ಪರಾತ್ಪರ ಪರಮಾನಂದವನ್ನು ಕೆಳಗೆ ದೇಹಪರ್ಯಂತವಾಗಿ, ಕೇವಲ ಭೌತಿಕ ಜಡಪ್ರಕೃತಿಯಲ್ಲಿ ಸಹ ಆಹ್ವಾನಿಸಬೇಕಾಗಿದೆ."

* * * * *

"ಯಾರು ತಮಗಾಗಿ ತಮ್ಮನ್ನು ಏನೂ ಉಳಿಸಿಕೊಳ್ಳದೆ, ಅಂದರೆ ತಮ್ಮ ಸರ್ವವಿಭಾಗಗಳನ್ನು ಪರಮಾತ್ಮನಿಗೆ ಅರ್ಪಿಸುವರೋ, ಅವರಿಗೆ ಪರಮಾತ್ಮನು ಶಾಂತಿಯನ್ನೂ, ಜ್ಯೋತಿಯನ್ನೂ, ಶಕ್ತಿಯನ್ನೂ, ಆನಂದವನ್ನೂ, ಸ್ವಾತಂತ್ರ್ಯವನ್ನೂ, ವಿಶಾಲತೆಯನ್ನೂ, ಜ್ಞಾನದ ಪರಮೋನ್ನತ ಶಿಖರಗಳನ್ನೂ, ಆನಂದದ ಮಹಾಸಾಗರಗಳನ್ನೂ ಕೊಡುವನು."

* * * * *

"ಕೇವಲ ಸಮರ್ಪಣದ ಬಗೆಗೆ ಮಾತಾಡುವದರಿಂದಾಗಲಿ, ಅಥವಾ ಬರಿ ಅವರ ಸಿದ್ಧಾಂತ ಹಾಗೂ ಹಸಿಬಿಸಿ ಇಚ್ಛೆಯಿಂದಾಗಲಿ ಸರ್ವಾಂಗೀಣ ಆತ್ಮನಿವೇದನವು (ಆತ್ಮನೈವೇದ್ಯವು) ಸಿದ್ಧಿಸಲಾರದು. ಆದರೆ ಮೌಲಿಕ ಹಾಗೂ ಸಂಪೂರ್ಣ ಬದಲಾವಣೆಯ ಕಡೆಗೆ ಮುಂದೋಟವಿರಬೇಕು. .... .... .... .... .... .... ಆತ್ಮಸಮರ್ಪಣ ಹಾಗೂ ಆತ್ಮನೈವೇದ್ಯಗಳನ್ನು ನೀವು ಹಿಂದಕ್ಕೆ ಸೆಳಕೊಳ್ಳುವಿರಾದರೆ ಜಗನ್ಮಾತೆಯೆಡೆಗೆ ಆತ್ಮೋದ್ಘಾಟನ ಮಾಡುವುದೆಂಬ ಮಾತಿನಲ್ಲಿ ಹೆಚ್ಚಿನ ಆಧ್ಯಾತ್ಮಿಕ ಅರ್ಥವೇನೂ ಇಲ್ಲವೇ ಇಲ್ಲ. ಈ ಯೋಗದ ಸಾಧನೆ ಮಾಡುವವರಿಗೆ ಆತ್ಮಸಮರ್ಪಣದ ಆಹ್ವಾನವನ್ನೇ ಕೊಟ್ಟಿದೆ. ಏಕೆಂದರೆ ಇಂಥ ಪ್ರಗತಿಶೀಲವಾದ

ಆತ್ಮಸಮರ್ಪಣವನ್ನು ಬಿಟ್ಟುಬಿಟ್ಟರೆ ಈ ಯೋಗದ ಗುರಿಯನ್ನು ಸಮೀಪಿಸುವುದು ಸಂಪೂರ್ಣ ಅಶಕ್ಯವೇ ಇರುತ್ತದೆ. ”

*　　*　　*　　*　　*

## (೪) ಕರ್ಮ

“ಅನುಭವಗಳ ಸಲುವಾಗಿ ಕರ್ಮವನ್ನು ಅರ್ಥಾತ್ ಬಾಹ್ಯಿಕ ಪ್ರಜ್ಞೆಯನ್ನು ಅಲಕ್ಷಿಸಿ, ಸಂಪೂರ್ಣವಾಗಿ ಅಂತರ್ಮುಖರಾಗುವುದೆಂದರೆ ತೂಕ ತಪ್ಪಿದವರೂ, ಸಾಧನೆಯಲ್ಲಿ ಏಕದೇಶೀಯ ಸ್ಥಿತಿಗೆ ಮುಟ್ಟಿದವರೂ ಆದಂತೆಯೇ ಸರಿ. ಅದರಂತೆಯೇ ಕೇವಲ ಬಹಿರ್ಮುಖದಲ್ಲಿಯೇ ಧುಮುಕಿದರೆ ಅದರಿಂದಲೂ ನಾವು ಸಾಧನೆಯಲ್ಲಿ ತೂಕ ತಪ್ಪಿದವರೂ ಏಕದೇಶೀಯತೆಯ ಸ್ಥಿತಿಗೆ ಮುಟ್ಟಿದವರೂ ಆಗುವೆವು. ಆದರೆ ನಾವು ಆಂತರಿಕ ಅನುಭವ ಹಾಗೂ ಬಾಹ್ಯಿಕ ಕರ್ಮ ಇವೆರಡರಲ್ಲಿಯೂ ಒಂದೇ ಪ್ರಜ್ಞೆಯುಳ್ಳವರಾಗಲಿಕ್ಕೆ ಬೇಕು; ಹಾಗೂ ಇವೆರಡನ್ನೂ ಜಗನ್ಮಾತೆಯ ಸಾನ್ನಿಧ್ಯದಿಂದ ತುಂಬಿದವುಗಳನ್ನಾಗಿಯೇ ಮಾಡತಕ್ಕದ್ದು.

*　　*　　*　　*　　*

“ಕರ್ಮವನ್ನು ಪಾಲಿಸುವುದೆಂದರೆ ಆಂತರಿಕ ಅನುಭವ ಹಾಗೂ ಬಾಹ್ಯಿಕ ವಿಕಾಸ ಇವೆರಡರಲ್ಲಿ ತೂಕವನ್ನು ಉಳಿಸಿಕೊಂಡಂತೆಯೇ ಸರಿ. ಹೀಗಿಲ್ಲದಿದ್ದರೆ, ಏಕದೇಶೀಯತೆಯೂ, ತೂಕ ಮಾಪಗಳ ಅಭಾವವೂ ಕಟ್ಟಿ ಇಟ್ಟದ್ದೇ. ಇಷ್ಟೂ ಅಲ್ಲದೆ, ಕರ್ಮದ ಸಾಧನೆಯನ್ನು ಪರಮಾತ್ಮನಿಗಾಗಿ ಮೀಸಲಾಗಿಡತಕ್ಕದ್ದು. ಏಕೆಂದರೆ, ಇದರಿಂದ ಕೊನೆಯಲ್ಲಿ ಸಾಧಕರಿಗೆ ತಮ್ಮ ಆಂತರಿಕ ಪ್ರಗತಿಯನ್ನು ತಮ್ಮ ಬಾಹ್ಯಿಕ ಪ್ರಕೃತಿಯಲ್ಲಿಯೂ ಬಾಹ್ಯಜೀವನದಲ್ಲಿಯೂ ತಂದುಕೊಳ್ಳಲಿಕ್ಕೆ ಶಕ್ಯವಾಗುವುದಲ್ಲದೆ, ಇದು ಸಾಧನೆಯ ಸರ್ವಾಂಗೀಣತೆಗೂ ಸಹಾಯವನ್ನು ಮಾಡುವುದು.

*　　*　　*　　*　　*

“ಆತ್ಮಸಮರ್ಪಣವು, ನೀವು ಮಾಡುವ ಯಾವದೇ ಪ್ರಕಾರದ ವಿಶಿಷ್ಟತರವಾದ ಕರ್ಮದ ಮೇಲೆ ಅವಲಂಬಿಸಿರಲಾರದು. ಆದರೆ ನೀವು ಸರ್ವ ಕರ್ಮಗಳನ್ನು—ಅವು ಯಾವ ಪ್ರಕಾರದವುಗಳೇ ಆಗಿರಲೊಲ್ಲವೇಕೆ—ಯಾವ ಭಾವನೆಯಿಂದ ಮಾಡುವಿರೆಂಬುದರ ಮೇಲೆ ಅದು ಅವಲಂಬಿಸಿದೆ. ಯಾವದೇ ಕರ್ಮವು, ದಕ್ಷತೆಯಿಂದಲೂ ಎಚ್ಚರಿಕೆಯಿಂದಲೂ, ಪರಮಾತ್ಮನಿಗೆ ಯಜ್ಞರೂಪವಾಗಿ, ಯಾವ ವಾಸನೆಯೂ ಅಹಂಕಾರವೂ ಇಲ್ಲದೆ, ಸುದೈವ-ದುರ್ದೈವಗಳಲ್ಲಿ ಧೀರ ಸಮಚಿತ್ತತ್ವ ಹಾಗೂ ಮನದ ಸಮತೆ ಇವುಗಳಿಂದ ಕೂಡಿ, ಹಾಗೂ ಯಾವದೇ ವೈಯಕ್ತಿಕ ಲಾಭ ಇಲ್ಲವೆ ಫಲ ಪರಿಣಾಮಗಳ ಉದ್ದೇಶವಿಲ್ಲದೆ, ಕೇವಲ ಪರಮಾತ್ಮನ ಉದ್ದೇಶದ ಸಲುವಾಗಿ, ಹಾಗೂ ದೈವೀಶಕ್ತಿಗೇ ಸರ್ವ ಕರ್ಮಗಳು ಸಂಬಂಧಿಸಿದವುಗಳಾಗಿವೆಯೆಂಬ ಪ್ರಜ್ಞೆಯಿಂದೊಡಗೂಡಿ, ಆಚರಿಸಲ್ಪಟ್ಟುದಾದರೆ, ಇಂಥ ಕರ್ಮವೇ,—ಕರ್ಮಮೂಲಕವಾಗಿ ಆತ್ಮಸಮರ್ಪಣವನ್ನು ಸಾಧಿಸುವುದಕ್ಕೆ ಸಾಧನೀಭೂತವಾಗುವದು.

*　　*　　*　　*　　*

“ಯಾರು ಸರ್ವಪ್ರಕಾರದಿಂದಲೂ ಯಥಾರ್ಥ ಹೃದಯದಿಂದ ಜಗನ್ಮಾತೆಗಾಗಿ ಕರ್ಮ ಮಾಡುವರೋ, ಅವರು ಧ್ಯಾನಕ್ಕೆ ಕೂಡದೆಯೂ, ಯಾವ ವಿಶಿಷ್ಟ ಯೋಗಸಾಧನೆಗಳನ್ನು ಮಾಡದೆಯೂ ಸಹ ಆ ಕರ್ಮಮೂಲಕವಾಗಿಯೇ ಉಚಿತ ಪ್ರಜ್ಞೆಯ ಸ್ಥಿತಿಗೆ ಸಿದ್ಧತೆಯನ್ನು ಮಾಡಿಕೊಳ್ಳುವರು. ಹೇಗೆ ಧ್ಯಾನ ಮಾಡಬೇಕೆಂದು ನಿಮಗೆ ಹೇಳಿಕೊಡಬೇಕಾಗಿಲ್ಲ. ನೀವು ನಿಮ್ಮ ಕರ್ಮದಲ್ಲಿಯೂ ಹಾಗೂ ಸರ್ವ

ಸಮಯಗಳಲ್ಲಿಯೂ ಯಥಾರ್ಥ ಹೃದಯರಾಗಿದ್ದುಕೊಂಡರೆ, ಹಾಗೂ ಜಗನ್ಮಾತೆಯ ಇದಿರಿಗೆ ನಿಮ್ಮನ್ನು ನೀವು ತೆರೆದಿಡುವವರಾದರೆ, ಏನೇನು ಆವಶ್ಯಕವಿದೆಯೋ ಅದೆಲ್ಲಾ ತಾನಾಗಿಯೇ ಬರುವುದು."

* * * *

ಶ್ರೀ ಅರವಿಂದರ "ಯೋಗಪ್ರಕಾಶ"ವೆಂಬ ಗ್ರಂಥದಲ್ಲಿ ಹೇಳಿದಂತೆ ಹೀಗೆ ಕರ್ಮ, ಭಕ್ತಿ, ಜ್ಞಾನಗಳನ್ನೆಲ್ಲಾ ಆಚರಿಸಿದ ಬಳಿಕ ಮಾನವ ಮನವು ಸ್ವಾಭಾವಿಕವಾಗಿ ಅಂತರ್ಮುಖವಾಗುವುದರಿಂದ ನಮ್ಮೊಳಗಿನ ಅಂತರಾತ್ಮನು ಹೊರಮುಗ್ಗಲಿಗೆ ಬಂದು ನಮ್ಮ ಪ್ರಕೃತಿಯನ್ನು ನಿಯಂತ್ರಿಸತೊಡಗುವನು. ಆಗ ಶ್ರೀ ಅರವಿಂದರ "ಯೋಗದ ತಳಹದಿ" ಎಂಬ ಗ್ರಂಥದಲ್ಲಿ ಹೇಳಿದಂತೆ, ಮನ, ಪ್ರಾಣ, ದೇಹ, ಅವಚೇತನ ಮೊದಲಾದವುಗಳೊಳಗಿನ ದೋಷಗಳನ್ನೆಲ್ಲಾ ಹೊರದೂಡಲಿಕ್ಕೆ ಸಾಧ್ಯವಾಗುವುದು. ಆ ಬಳಿಕ ಶ್ರೀ ಅರವಿಂದರ "ಅಧಿಕ ಯೋಗಪ್ರಕಾಶ"ವೆಂಬ ಗ್ರಂಥದೊಳಗೆ ಹೇಳಿದ ವರ್ಣ, ಪ್ರಕಾಶ, ಆಕೃತಿ, ರೂಪಕ ಇವೇ ಮೊದಲಾದ ಅನೇಕ ಯೋಗಾನುಭವಗಳಿಗೆ ಮುಟ್ಟುವೆವು. ಇದರ ಮುಂದೆ ಇನ್ನೂ ಎಷ್ಟೋ ಸಾಧನೆಗಳಿವೆಯೆಂದು ಶ್ರೀ ಅರವಿಂದರ "ದಿವ್ಯಜೀವನ" ("ಲಾಯಿಫ್ ಡಿವ್ಹಾಯ್ನ್") ಎಂಬ ಮಹಾಗ್ರಂಥದಿಂದ ತಿಳಿಯುವುದು. ಶ್ರೀ ಮಹಾ ತಾಯಿತಂದೆಗಳ ಕೃಪೆಯಿದ್ದರೆ ಇವೆಲ್ಲ ವಿಷಯಗಳನ್ನು ಕುರಿತು ಮತ್ತೆ ಮುಂದೆ ಪ್ರಸ್ತಾಪಿಸುವೆನು.

ಭಗವದ್ಗೀತೆ ಹಾಗೂ, ಶರಣರ ಷಟ್‌ಸ್ಥಲ ಹಾಗೂ ನೂರೊಂದು ಸ್ಥಲದ ವಚನಗಳನ್ನೂ ಶ್ರೀ ಅರವಿಂದರ ಮೇಲ್ಕಾಣಿಸಿದ ಗ್ರಂಥಗಳನ್ನೂ ವಾಚಕರೂ ಅವಶ್ಯವಾಗಿ ಓದಿಕೊಂಡು ಮೇಲ್ಕಂಡ ವಿಷಯಗಳನ್ನೆಲ್ಲ ಇನ್ನೂ ಹೆಚ್ಚು ಕೂಲಂಕಷವಾಗಿ ಅರಿತುಕೊಳ್ಳುವರೆಂದು ವಾಚಕಮಹಾಶಯರಲ್ಲಿ ವಿಜ್ಞಾಪಿಸಿಕೊಂಡು ನನ್ನೀ ಲೇಖನವನ್ನು ಮುಗಿಸುವೆನು.

॥ ಓಂ ಶ್ರೀ ಓಂ ॥

ಓಂ ಜಗತಃ ಪಿತರೌ ವಂದೇ ಪರಮೇಶ್ವರೀ ಪರಮೇಶ್ವರೌ ॥

ಜಗತ್ತಿನ ತಾಯಿತಂದೆಗಳಾದ ಶ್ರೀ ಪರಮೇಶ್ವರ ಪರಮೇಶ್ವರಿಯರ ದಿವ್ಯ ಶ್ರೀಚರಣಗಳಿಗೆ
ಅನಂತಾನಂತ ಪ್ರಣಾಮಗಳು.

॥ ಓಂ ಶ್ರೀ ಓಂ ॥

—ಶ್ರೀ ಮಾತೃಶ್ರೀಚರಣಶಿಶು—
ಮಧುರಚೆನ್ನ, ಹಲಸಂಗಿ

# ಮಹಾಮಾತೆಗೆ

೧

ದಾರಿದೋರಿ ನಡೆಯಿಸೆನ್ನ ಮಹಾಮಾತೆಯೆ
ತೋರಿ ಕೃಪೆಯ ಶಾಂತಿ ನೀಡು ಲೋಕತ್ರಾತೆಯೆ

೨

ಪ್ರಾಣ ಬುದ್ಧಿ ಚಿತ್ತ ಮನವು ಎಲ್ಲ ನೀನೆಯೆ
ತ್ರಾಣ ಕಣ್ಣು ಕಿವಿಯು ಮೂಗು ರಸನೆ ನೀನೆಯೆ

೩

ಕೈಯು ನೀನು ಕಾಲು ನೀನು ಸುಕೃತಿ ಗೈಯಿಸು
ಮೈಯು ನೀನೆ ಗಂಧದಂತೆ ಅದನು ತೇಯಿಸು

೪

ತಿಳಿಯಲೆನಗೆ ನಿನ್ನ ಮಾತು ಒಂದೆ ನಿಚಳ
ಒಳಗೆ ಹೊರಗೆ ಕೃತಿಸುತಿರಲಿ, ಅದುವೆ ಹೆಚ್ಚಳ

೫

ನಿನ್ನ ಕ್ರಿಯೆಯೆ ಸರ್ವಕಾಲ ನಡೆವ ತೆರದಲಿ
ಎನ್ನ ತೆರವುಗೊಳಿಸಿ ಧ್ವನಿಸು ನಿನ್ನ ಸರದಲಿ

೬

ಏರು ಇಳಿವು ಸುಖವು ದುಃಖ ದ್ವಂದ್ವ ದಾಟಿಸು
ಪಾರುಗಾಂಬ ಭಕ್ತಿಬಲಗಳನ್ನು ನಾಟಿಸು

೭

ಪರಾತ್ಪರದ ಕೃಪೆಯ ತಳೆವ ಶಕ್ತಿ ಕರುಣಿಸು
ಪರಮಪದದ ಸೂತ್ರದಲ್ಲಿ ಎನ್ನ ಪವಣಿಸು

—ದೇಸಾಯಿ ದತ್ತಮೂರ್ತಿ

# ಶ್ರೀ ಅರವಿಂದರೂ ರಸಶಾಸ್ತ್ರವೂ

— ೨ —

## ೧. ಕಲೆಗಾರನ ವ್ಯಕ್ತಿತ್ವ

ರಸ ಆನಂದಗಳು, ವಿಶಿಷ್ಟಾರ್ಥದಲ್ಲಿ, ಎಲ್ಲ ಪದ್ಯ ಕಲೆಗಳ ಉದ್ಗಮಸ್ಥಾನ. 'ಆನಂದವು ಅಸ್ತಿತ್ವದ ಆತ್ಮ' ಎನ್ನುತ್ತಾರೆ ಅರವಿಂದರು. ಅವರ ಪ್ರಕಾರ, 'ರಸವು ಆನಂದದ ತೀವ್ರವೂ ಸಾಂದ್ರವೂ ಆದ ಮುದ್ರೆ, ಘನರೂಪ. ನಮ್ಮ ಸ್ಥೂಲವಾದ ಜೈವಿಕ ಚೈತಸ ಅನುಭವಗಳಲ್ಲಿ ಎಷ್ಟೋ ವೇಳೆ ಅವೆರಡೂ ಪೃಥಕ್ಕೃತ ವಾದರೂ ಕವಿಕಲೆಗಾರರ ಮನಸ್ಸಿಗವು ಒಂದೇ ಆಗಿ ಪ್ರವರ್ತಿಸುವುವು. ಈ ಯಮಳ ಶಕ್ತಿಗಳು ಸಂಧಿಸಿ ಅವರ ಕೃತಿಯ ಪರಿಪೂರ್ಣ ಸಮಶ್ರುತಿಯ ಸ್ವರಮೇಳವನ್ನು ಸಾಧಿಸುತ್ತವೆ; ಇವೇ ಅವರು ಆರಾಧಿಸುವ ಆದ್ಯದೈವತೆ ಗಳು.' (ಪು. ೪೯೭, ಆರ್ಯ–ಮಾರ್ಚ್, ೧೯೨೦). 'ಅವುಗಳೊಡನೆ ಪ್ರಭಾವಿಕವೂ ಆಕರ್ಷಕವೂ ಆದ ಏಕತ್ವದಲ್ಲಿ ಒಂದಲು' ಮಿಕ್ಕ ಶಕ್ತಿಗಳು ಗ್ರಾಹ್ಯತೆಯನ್ನು ಪಡೆಯಬೇಕು. ಈ ಸಾರವತ್ತೆಯಲ್ಲಿ ನ್ಯೂನತೆ ಯಿದ್ದರೆ ಚಿಂತನಚೈತನ್ಯವುಳ್ಳ ಚಿತ್ತದ ಅತ್ಯುನ್ನತ ಪ್ರಯತ್ನಶ್ರಮ ಕೂಡ ವ್ಯರ್ಥವಾಗಿ ಬಿಡುವುದು. ಅತ್ಯವ ಜ್ಞೇಯ ಪದಾರ್ಥ ಕೂಡ 'ಈ ಕಾವ್ಯಾನಂದ ಸೌಂದರ್ಯದ ಮಾಧುರ್ಯವಿದ್ದುಬಿಟ್ಟರೆ' ಚಿರಚ್ಯವನತ್ವ ಪಡೆದು ಮೆರೆಯುವುದು.

ಕಲೆಗಾರನು ಈ ಧ್ಯೇಯಗಳ ಬೆಳಕಿನಲ್ಲಿ ಬಾಳುತ್ತಾನೆ ಮತ್ತು ತನ್ನ ಅಹಂಕಾರಿಕ ಆತ್ಮದ ಅಪ್ರವಿಷ್ಟ ಪ್ರದೇಶದಲ್ಲಿ ಅವಕ್ಕಾಗಿ ದೇಗುಲವನ್ನು ನಿರ್ಮಿಸುತ್ತಾನೆ. ಕಲಾಜಗತ್ತು ಹೇಗೆ ಅವನ ವ್ಯಕ್ತಿತ್ವಕ್ಕೆ ಸಂಬಂಧಿಸಿರು ತ್ತದೆ ?

'ಕೇವಲ ಬೌದ್ಧಿಕ ಚೈತನ್ಯದಿಂದ, ಶುಷ್ಕ ಜ್ಞಾನಬಲದಿಂದ ಪದ್ಯರಚನೆ ಮಾಡದಿರು. ಅದು ನಿಜ ಸ್ಫೂರ್ತಿಯ ನೆಲೆಯಲ್ಲ. ಭಾವನೆ ದರ್ಶನಗಳ ಅಂತರ್‌ಹೃದಯದಿಂದ ಎತ್ತಿ ಬರೆ' ಎನ್ನುತ್ತಾರೆ ಶ್ರೀ ಅರವಿಂದರು. (ಪು. ೨೫೩—ಪತ್ರಮಾಲೆ ೩.) ಕಲೆಗಾರನ ಮತ್ತು ಕಲಾಕೃತಿಯ ವಿಷಯವಾಗಿ ಅವರು ವಿಶದಪಡಿಸಿದ ಮನೋ ವಿಜ್ಞಾನವು ಆ ವಿಷಯದ ಬಗ್ಗೆ ನಮಗಿರುವ ಜ್ಞಾನವನ್ನು ತುಂಬ ಹೆಚ್ಚಿಸಿದೆ. ಸ್ವತಃ ಕಲಯಿತಾರರಾಗಿ ದಾರ್ಶನಿಕದ ನಿರರ್ಗಳತೆಯಿಂದಲೂ ಅಲಿಪ್ತತೆಯಿಂದಲೂ ಅವರು ಬರೆಯುತ್ತಾರೆ.

ಕವಿಗಳೂ ಕಲಾಜನಕರೂ ಪ್ರಾತಿಭಚಕ್ಷುಸ್‌ಸಂಪನ್ನರು; ಮಿಕ್ಕ ಮಾನವರಿಗೆ ಅಗಮ್ಯವಾದ ಕಲ್ಪಕತೆ ಮತ್ತು ಅಭಿವ್ಯಂಜನಗಳ ಉಚ್ಚತರ ಕಾರ್ಯಕೌಶಲ ಅವರ ಚೈತನ್ಯಕ್ಕೆ ಹೇಗೋ ಹಸ್ತಗತವಾಗಿರುತ್ತದೆ ಎಂದು ಅರವಿಂದರು ಲಕ್ಷಣಿಸಿದ್ದಾರೆ. ಸಾಮಾನ್ಯ ಮಾನವರ ಚೇತಶ್ಚೇತನೆಗಿಂತ ಮೇಲ್ಮಟ್ಟದ ಚೈತನ್ಯದ ಪ್ರವೇಶ ಅಥವಾ ಪ್ರಭಾವವೇ ಪ್ರತಿಭಾಜನಕ. ಅದರ ಹೆಚ್ಚಿನ ಜ್ಯೋತಿಯೂ ಶಕ್ತಿಯೂ ಸಹಜಾಭಿವ್ಯಂಜನಸಾಧನವಾಗಿ ರೂಪಿಸಲ್ಪಟ್ಟ ಅಂಥ ಚೈತನ್ಯದ ಒಂದು ಅಂಶದಿಂದ ಅಭಿವ್ಯಂಜಿಸಲ್ಪಡುವ ಅಪೂರ್ವ ಘಟನೆ ಉಂಟಾಗುವುದು ಎಲ್ಲೋ ಕೆಲವರಲ್ಲಿ ಮಾತ್ರ.

ಕೊನೆಯ ಪಕ್ಷ ಸಾಮಾನ್ಯ ಮನುಷ್ಯರಿಗಿರುವ ಅಥವಾ ಅವರು ಬಳಸುವ ಚೈತನ್ಯಕ್ಕೆ ಮೇಲ್ಪಂಕ್ತಿಯಲ್ಲಿರುವ ಪ್ರಜ್ಞೆಯು ಘಟಿಸುವ ಒಂದು ಅಂತಃಪ್ರೇರಣೆ, ಆವಿರ್ಭಾವ, ಸ್ಫೂರ್ತಿ ಅವಭಾಸ, ಸೂಚನೆ, ಸ್ಪರ್ಶ ಅಥವಾ ಅಂತಃಪ್ರವಾಹವಾದರೂ ಪ್ರತಿಯೊಂದು ಪ್ರಾತಿಭಕಾರ್ಯದ ಅಂತರ್ಯಾಮಿಯಾಗಿ ಇಲ್ಲವೆ ನಿಯತಪೂರ್ವವರ್ತಿಯಾಗಿ ಇದ್ದೇ ಇರುತ್ತದೆ. ಸ್ಫೂರ್ತಿಬಲವೇ ಅವರ ಕಲ್ಪಕಸಾಮರ್ಥ್ಯ. ಪದರೂಪದಲ್ಲಿ ಪ್ರಕಟವಾಗದೆ ಉಳಿಯುವ ಸ್ಫೂರ್ತಿಯೂ ಇರಬಲ್ಲುದು. ಜ್ಞಾನದ ಜ್ಯೋತಿಸ್-ಶಕ್ತಿ-ಸಾರದಲ್ಲಿಯ ಒಂದು ಬಗೆಯ ಪ್ರಖರತೆಯೇ ಸ್ಫೂರ್ತಿಯ ತಿರುಳು. ಪರಮಸ್ಫೂರ್ತಿಯನ್ನು ಒಂದೇ ಸಮವಾದ ಉತ್ಕಟಸ್ಥಿತಿಯಲ್ಲಿ ಬಹಳ ಕಾಲ ಉಳಿಸಿಕೊಳ್ಳಬಲ್ಲ ಕವಿಗಳ ಸಂಖ್ಯೆ ತೀರ ಅಲ್ಪ. ಅತ್ಯುನ್ನತ ಸ್ಫೂರ್ತಿ ಆಗೀಗ ಹನಿಯಾಗಿ ಉದುರೀತಲ್ಲದೆ ಹೊಳೆಯಾಗಿ ಹರಿಯದು, ಧಾರಾವಾಹಿಯಾಗಿ ಧುಮ್ಮಿಕ್ಕದು. ಅನೇಕ ಕವಿಗಳು ವ್ಯವಹಾರದಲ್ಲಿ ಸ್ಫೂರ್ತಿಯನ್ನು ಕೇವಲ ಸತತೋದ್ಯಮಶ್ರಮದಿಂದ ಉಳಿಸಿಕೊಳ್ಳಬೇಕಾಗುತ್ತದೆ. ಸ್ಫೂರ್ತಿಯ ದ್ವಿತೀಯ ಉನ್ಮೇಷವು ಪ್ರಥಮೋನ್ಮೇಷ-ಘಟಿತ ಕವಿಕಾರ್ಯವನ್ನು ಸುಧಾರಿಸೀತು; ಆದರೆ ಅಂಥ ಸುಧಾರಣೆ ಚೈತಸವಾದರೆ ಕೃತಿ ಕೆಟ್ಟುಹೋದೀತು.

ಸ್ಫೂರ್ತಿಯು ಯಾವಾಗಲೂ ಕಲ್ಪಕ, ಉಚ್ಚತರ ಅಥವಾ ಭಾವನಾತ್ಮಕ ಜೈವಿತ ಚೈತನ್ಯದ ಮೂಲಕ ಉದಯಿಸುತ್ತದೆ. ಕಲ್ಪಕ ಸೌಂದರ್ಯದ ಪ್ರಾಣಬಲವೇ ಸ್ಫೂರ್ತಿಗೆ ಸಾರವತ್ತೆಯನ್ನೂ ಉತ್ತೇಜನವನ್ನೂ ಕೊಟ್ಟು ಅದರ ರೂಪವನ್ನು ನಿರ್ಣಯಿಸುವುದು. ಸ್ಫೂರ್ತಿಯ ಮೂಲ ಆಕರವು ಅದನ್ನು ಅಮಿಶ್ರರೂಪದಲ್ಲಿ ಅಪರಿವರ್ತಿತವಾಗಿ ಜೈವಿಕ ಚೈತನ್ಯದಲ್ಲಿ ಪ್ರತಿಷ್ಠಿಸಿ, ಮೂಲಾಭಿನ್ನವಾಗಿ ಸಹಜರೂಪ ಮತ್ತು ಶಕ್ತಿಗಳಲ್ಲಿ ಅಭಿವ್ಯಂಜಿಸಿದಾಗಲೇ ಅತ್ಯಂತ ಪ್ರಾಮಾಣಿಕವೂ ಪರಿಪೂರ್ಣವೂ ಆದ ಕಾವ್ಯರಚನೆಯಾಗುವುದು. ಜೈವಿಕ ಚೈತನ್ಯವು ಅತಿ ಪಾಟವದಿಂದ ಸ್ವಕೀಯ ಉತ್ತೇಜನವನ್ನು ಬಹಳ ಹೆಚ್ಚಾಗಿ ಕೊಟ್ಟಾಗ ಪದ್ಯವೇನೋ ಓಜೋಮಯವಾಗುವುದು; ಆದರೆ ಬಗೆಯಲ್ಲಿಯೂ ನಿಜಾವಭಾಸಕತೆಯಲ್ಲಿಯೂ ಕಡಿಮೆಯದಾಗುವುದು.

ಕವಿಗೆ ಗೃಹೀತವನ್ನು ಪ್ರಕಾಶಿಸುವ ಬಾಹ್ಯಚೇತನೆಯೊಂದಿರುತ್ತದೆ. ಅದು ಸಂಪೂರ್ಣ ನಿರ್ಲಿಪ್ತತೆಯಿಂದ ಗೃಹೀತಾರ್ಥವನ್ನು ಅಪರಿವೃತ್ತರೂಪದಲ್ಲಿ ಹೊರಗೆಡಹಬೇಕು. ಆ ಬಾಹ್ಯಚೇತನೆ ಅತಿ ಜಡವಾಗಿದ್ದು ಸರಾಗವಾದ ಅಭಿವ್ಯಂಜನಕ್ಕೆ ತಡೆಯೊಡ್ಡಿದರೆ, ಅಥವಾ ಅತಿ ಚಪಲವಾಗಿದ್ದು ಗೃಹೀತಾರ್ಥದ ಪರಿವರ್ತನಕ್ಕೆಡೆಗೊಟ್ಟರೆ ಪದ್ಯರಚನೆ ಅತೃಪ್ತಿಕರವಾಗುವುದು. ಕಲ್ಪಕ ಜೈವಿಕಚೈತನ್ಯ ಮತ್ತು ಬಾಹ್ಯಚೇತನೆಗಳು ಒಡರಿಸುವ ಪ್ರತಿಬಂಧ, ಅತಿ ಚಾಪಲ್ಯ ಅಥವಾ ಉಭಯಚೇಷ್ಟೆಯೇ ಬರೆಯುವಲ್ಲಿ ಶ್ರಮಕಾಠಿನ್ಯಗಳುಂಟಾಗಲು ಕಾರಣ. ತನ್ನ ಮನೋಭಾವದ ಅತ್ಯುನ್ನತ ಅಥವಾ ಅತಿ ಸ್ವತಂತ್ರ ಅವಸ್ಥೆಯಲ್ಲಿ ಕವಿ ದೇವಮುಖನೆನಿಸುತ್ತಾನೆ. ಅಭಿವ್ಯಕ್ತವಾಗಬೇಕಾಗಿದ್ದ ಉಚಿತ ಪದ ಮತ್ತು ಲಯಗಳ ಬದಲು ವಿಚಾರಶಕ್ತಿಯು ತನ್ನವೇ ಆದ ಕೀಳ್ಮಟ್ಟದ ಶ್ರಮಜನ್ಯ ರಚನೆಗಳನ್ನು ಸೇರಿಸಲು ಹೆಣಗುತ್ತದೆ. ಅತಿ ವೈಚಾರಿಕ ಅಧಿಷ್ಠಾನಗಳು ಸುರಿಯಲು ಯತ್ನಿಸುತ್ತಿರುವ ಕಾವ್ಯಾರ್ಥಕ್ಕೆ ವಿಚಾರಶಕ್ತಿ ಸ್ವಕೀಯ ರೂಪವನ್ನು ಕೊಡಲು ಅಥವಾ ಸ್ವಯಂಕೃತ ರಚನೆಯನ್ನು ಅವರಲ್ಲಿ ಸೇರಿಸಲು ಪ್ರಯತ್ನಿಸುತ್ತದೆ. ಉಚಿತವಾದ (ಸಹಜಸ್ಫೂರ್ತಿಜನ್ಯವಾದ) ಪದ ಲಯ ತಾತ್ಪರ್ಯಗಳು ಪರಿಪೂರ್ಣರೂಪದಲ್ಲಿ ಅಭಿವ್ಯಕ್ತವಾಗಲು ಸದಾಸಿದ್ಧವಾಗಿದ್ದರೂ ವಾಹಕ ಚೇತನೆಯ ಯಾವುದಾದರೊಂದು ಭಾಗ ಅವನ್ನು ಹಾಗೇ ಗ್ರಹಿಸಿ ಅಕ್ಷರದಲ್ಲಿ ಮೂಡಿಸುವುದರ ಬದಲು ಅನುವಾದಿಸುವುದರತ್ತ ಒಲೆಯುತ್ತದೆ. ವಿಚಾರಶಕ್ತಿಯು ಸ್ಫೂರ್ತಿಕಾರ್ಯದಲ್ಲಿ ಕೈಹಾಕುವುದನ್ನು ಉದಾಹರಿಸಲು ಅರವಿಂದರು ಮನಮೋಹನರ ಒಂದು ಅಷ್ಟಷಟ್‌ಪದಿಯ ಹೃದ್ಯವಿಶ್ಲೇಷಣೆಯನ್ನು ಕೊಟ್ಟಿದ್ದಾರೆ (ಪು. ೬೬-೬೯—ಪ. ಮಾ ೩).

ಸಾಮಾನ್ಯವಾಗಿ ಪ್ರತಿಯೊಬ್ಬ ಕವಿಯ ಕೃತಿಯನ್ನು ಅವಲೋಕಿಸಿದಾಗಲೂ ಅವನಲ್ಲಿ ಸ್ಫೂರ್ತಿಯ ಪುನರವತರಣಕ್ಕಿಂತ ಹೆಚ್ಚಾಗಿ ದೋಲಾಯಮಾನತೆಯೇ ಕಂಡುಬರುತ್ತದೆ. ಪ್ರತಿಯೊಬ್ಬನಲ್ಲೂ ಈ

ಅರ್ಥಗ್ರಾಹಕ ಸ್ಫೂರ್ತಿಯ ಉತ್ತಮ, ಮಧ್ಯಮ, ಅಧಮ ಮಟ್ಟಗಳಿರುತ್ತವೆ; ಅಧಮ ಮಟ್ಟದಲ್ಲಿ ಆತನ ಕಾವ್ಯಶಕ್ತಿ-ನ್ಯೂನತೆಗಳು ಹೊರಬೀಳುತ್ತವೆ.

ವ್ಯಕ್ತಿಯ ಕಲ್ಪಕಶಕ್ತಿಯನ್ನು ಅವನ ಆಂತರಿಕ ಚೈತನ್ಯದ ವ್ಯಕ್ತಿತ್ವದಲ್ಲಿ ಹುಡುಕಹೋಗಬೇಕಲ್ಲದೆ, ಅವನ ಭೌತಿಕ ಅಥವಾ ಜೈವಿಕ ಚೈತನ್ಯದಲ್ಲಿ ಕಾಣಹೋದರೆ ಅದು ಸಿಗದು. ವಾಸ್ತವಜೀವಿತದಲ್ಲಿ ಮಾನವನ ಭೌತಿಕ ಚೈತನ್ಯವು ಸ್ವಾರ್ಥಮಯವೂ ಕಠಿನವೂ ಆಗಿರಬಹುದು; ಆದರೆ ಆತ ತನ್ನ ಕಲಾಕೃತಿಯ ಕಲ್ಪಿತ ಸೃಷ್ಟಿಯಲ್ಲಿ ದಯಾಪರ, ದಾನಶೀಲ ಸುಧಾರಕನಾಗಿರಬಲ್ಲನು. ಕಲೆಗಾರನು ಒಂದು ಕಲ್ಪಕಶಕ್ತಿಗೆ ಕೇವಲ ಪ್ರಕಾಶನಸಾಧನವಾಗಿರಬಹುದು, ಅಥವಾ ಮನುಷ್ಯನು ಬಹುವ್ಯಕ್ತಿತ್ವವುಳ್ಳವನಾದುದರಿಂದ ಕವಿತ್ವ ಅಥವಾ ಕಲಯಿತೃತ್ವ ಅವನಲ್ಲಿಯ ಅನೇಕ ವ್ಯಕ್ತಿತ್ವಗಳಲ್ಲಿ ಬರಿ ಒಂದೆನಿಸಿರಬಲ್ಲುದು; ತನ್ನ ಕಾರ್ಯ ಮುಗಿದ ಮೇಲೆ ಆದು ಅವನನ್ನು ಕೇವಲ ಮನುಷ್ಯನನ್ನಾಗಿ ಇಲ್ಲಿ ಬಿಟ್ಟು ಹೋಗಬಹುದು. ಕಲ್ಪಕಶಕ್ತಿ ಕೆಲಸ ಮಾಡುವುದು ಆತನ ಕವಿತ್ವನೆಂಬ ವ್ಯಕ್ತಿತ್ವದ ಮೂಲಕ ಮಾತ್ರ. ಆ ಕವಿತ್ವಧರ್ಮವು ಒಂದೇ ಬರಿ ಹಾರ್ಮೋನಿಯಂ ರೀಡಿನಂತೆ ಸ್ವರವಾಹಕವಾಗಿರಬಹುದು; ಆದರ ಮೂಲಕ ಆತ್ಮವು (ಸ್ಥಾಯಿಭಾವ) ತನ್ನ ಸ್ವರವನ್ನು ಹರಿಯಿಸ ಬಹುದು, ಭಾವಪ್ರಕಟನ ಮಾಡಬಹುದು. ಅನಂತರ ಅದು ಮೂಲೆಗೆ ಸೇರಬಹುದು. ಇಲ್ಲವೆ ಬಾಹ್ಯ ಮಾನವ ರಚನೆಯಲ್ಲೂ ಜೈವಿಕ ಚೈತನ್ಯದ ಮತ್ತು ಒಟ್ಟಿನ ಮನುಷ್ಯತ್ವದ ಭೌತಿಕ ಚಟುವಟಿಕೆಗಳಲ್ಲೂ ವ್ಯಾಪಿಸಿರ ಬಹುದು.' (ಪು. ೫೪—ಪ. ಮಾ. ೩).

ಕಾವ್ಯವು ಚೈತನ್ಯದ ಯಾವುದಾದರೊಂದು ಮಟ್ಟದಲ್ಲಿ ಪ್ರಾರಂಭವಾಗಬಹುದು. ಅದು ಚೈತನ್ಯಪೂರ್ಣ ಅಥವಾ ಜೀವಂತ ಎನಿಸಬೇಕಾದರೆ ಜೈವಿಕ ಚೈತನ್ಯದ ಮೂಲಕವೇ ಹೊರಬೀಳಬೇಕು. ಅದು ವಿಶಿಷ್ಟ ವ್ಯಕ್ತಿಯ ಮೂಲ ಕೃತಿ, ಸೂಕ್ಷ್ಮ ಧರ್ಮಸಂಪನ್ನ ರಚನೆ ಮತ್ತು ಎಲ್ಲ ಸೂಕ್ಷ್ಮ ಅಂಗೋಪಾಂಗಗಳಲ್ಲಿಯೂ ಪರಿಪೂರ್ಣತೆವೆತ್ತ ಕಾವ್ಯ ಎನಿಸಬೇಕಾದರೆ ಜೈವಿಕ ಚೈತನ್ಯದ ಕಲ್ಪಕ ಸಾಧನವು ಗಭೀರತರ ಚಿದನುಭವದೊಡನೆ ಸಮ್ಯಕ್ ಸಂಬದ್ಧವಾಗಿರುವುದು ಅವಶ್ಯಕ. 'ಪದ್ಯದಲ್ಲಿ ಆತ್ಮದ ಇಬ್ಭಾಗಗಳು ಕೂಡಿ ಕೆಲಸ ಮಾಡುತ್ತವೆ: ಒಂದನೆಯದು ಲಿಖಿತವನ್ನು ಭಾವಿಸುತ್ತದೆ, ಅನುಭವಿಸುತ್ತದೆ, ಒಂದು ಬಗೆಯ ಆತ್ಮಿಕ ಅಂತಃಪ್ರವೇಶನದ ಮೂಲಕ ತಾದಾತ್ಮ್ಯಭಾವವನ್ನು ಹೊಂದುತ್ತದೆ; ಎರಡನೆಯದು ಕೇವಲ ದಾರ್ಶನಿಕ, ಕಲ್ಪಕಧರ್ಮಯುಕ್ತ—ಅದು ರಸಕಾರ್ಯದಲ್ಲಿ ಭಾಗಿಯಾಗದೆ ಅದರ ಅಂತರರ್ಥವನ್ನು ನೋಡುತ್ತದೆ ಮತ್ತು ಆ ಅರ್ಥವನ್ನು ಸಂಪೂರ್ಣ ವಾಗಿ ಪ್ರಕಟಿಸುವ ಪದಕ್ಕಾಗಿ ಕಾದು ಕೇಳುತ್ತದೆ. ಈ ಇಬ್ಭಾಗಗಳು ಸಂಧಿಸುವ ಒಂದಲ್ಲ ಒಂದು ಸ್ಥಳದಲ್ಲಿ ಭಾವಿಕ ಅಥವಾ ಅನುಭೂತ ಅರ್ಥವು ಪದ್ಯದ ಸಾರಭೂತ ಪೂರಣವಾಗಿ ರೂಪಿಸಲ್ಪಡುತ್ತದೆ.' (ಪು. ೫೦—ಪ. ಮಾ. ೩).

ಎಲ್ಲ ಕಾವ್ಯವೂ ಚೈತಸ, ಜೈವಿಕ ಅಥವಾ ಉಭಯಜ. ಕೆಲವೊಮ್ಮೆ ಅದರಲ್ಲಿ ಚಿದಂಶವೂ ಕಂಡುಬರಬಹುದು. ಎಲ್ಲೋ ಕೆಲ ಸಾಲುಗಳಲ್ಲಿ, ವಾಕ್‌ಪುಂಜಗಳಲ್ಲಿ ಪರಚೈತನ್ಯ ಮೈದೋರಬಹುದು; 'ಚೈತಸ ಮತ್ತು ಜೈವಿಕ ಸ್ಫೂರ್ತಿಯನ್ನು ಸ್ವಪ್ರಭಾ ಸಾಮರ್ಥ್ಯದತ್ತ ಎತ್ತಿ ಹಿಡಿಯಬಹುದು.' ಪದ್ಯವು ಆಂತರಿಕ ಚೈತನ್ಯದ ಆಳಗಳಿಂದ ಮೇಲ್‌ಚಿಮ್ಮಬಹುದು ಅಥವಾ ಕೆಲವೊಮ್ಮೆ ಪರಚೈತನ್ಯ ದಿಂದಲೂ ಒಡಮೂಡಬಹುದು. ಆದರೆ ಅದೊಂದೂ ಸ್ಪಷ್ಟರೂಪದಲ್ಲಿ ಸಾಮಾನ್ಯವಾಗಿ ಹೊರಬೀಳದು. 'ಅದು ಚೆನ್ನಾಗಿ ಎಚ್ಚತ್ತಿರುವಾಗ ಅಥವಾ ಅಂತರ್ಮುಖತೆಯಲ್ಲಿದ್ದಾಗ ಶಾಬ್ದ ಅಥವಾ ಜೈವಿಕ ದರ್ಶನ ಮತ್ತು ಕಲ್ಪನಾ ಚಿತ್ರಗಳ ಮೂಲಕ ಉದಯಿಸುತ್ತದೆ; ಅಂತರ್ಮುಖಾವಸ್ಥೆಯಲ್ಲಿ ಪದ್ಯೋ ದಯವಾಗುವಾಗ ಸ್ವಪ್ನಸಮಾಧಿಯನ್ನು ಮುಟ್ಟಬಹುದು. ಈ ಎಲ್ಲ ಸಂದರ್ಭದಲ್ಲೂ ರೂಪಕ ಶಕ್ತಿ

ಯಾಗಿ ಕೆಲಸ ಮಾಡುವುದು ದರ್ಶನವಲ್ಲದೆ ಸ್ವಪ್ನವಲ್ಲ. ಸ್ವಪ್ನಗಳೂ ಕಾವ್ಯವಸ್ತುಗಳಾಗಬಹುದು, ಕಾವ್ಯದ ತಿರುಳಾಗಬಹುದು, ಉಪಾದಾನ ಕಾರಣವಾಗಬಹುದು; ಆದರೆ ಅಷ್ಟು ಮಾತ್ರದಿಂದ ಕನಸು, ದರ್ಶನ ಅಥವಾ ರೂಪಮಾಲಿಕೆಗಳನ್ನು ಕಾಂಬ ಪ್ರತಿಯೊಬ್ಬನೂ ಕವಿಯೆನಿಸಲಾರ.' (ಪು. ೨೩೯–೪೦. –ಪ. ಮಾ. ೩)

ಕವಿಮನ ಕಾವ್ಯತಂತ್ರ ಮಗ್ನವಾಗುವುದು ಸ್ಫೂರ್ತಿ ಪ್ರತಿಬಂಧಕ ಎನ್ನುತ್ತಾರೆ ಕೆಲವರು. ಕಾವ್ಯದ್ರವ್ಯ ಸಾಕಷ್ಟಿದ್ದಾಗ ಕಾವ್ಯತಂತ್ರದತ್ತ ಲಕ್ಷ್ಯ ಹಾಕಿದರೆ ದ್ರವ್ಯ ಮತ್ತಷ್ಟು ಸುಂದರವಾಗಿ ರೂಪಿಸಲ್ಪಡುತ್ತದೆ. ಸಾಮಾನ್ಯವಾದ ಪಾದಾಂತಿಕ ಪ್ರಾಸದಂತೆ ಪಲ್ಲ, ಅಂತಃಪ್ರಾಸ (ಛೇಕಾನುಪ್ರಾಸ) ಮುಂತಾದ ಉಪಾಯಗಳು ಕೂಡ ಸ್ಫೂರ್ತಿಗೂ ಅಭಿವ್ಯಕ್ತಿಗೂ ಬಹುದೊಡ್ಡ ಸಾಹಾಯ್ಯ ನೀಡಬಲ್ಲವು. ತಂತ್ರ ಅಥವಾ ಮಾರ್ಗದ ಶೋಧ ಎಂದರೆ ವಿವಕ್ಷಿತ ಅರ್ಥವನ್ನು ಹೇಳಲು ಅತ್ಯುತ್ತಮವೂ ಅತ್ಯುಚಿತವೂ ಆದ ವಾಗ್ರೂಪವನ್ನು ಹುಡುಕುವುದು ಎಂದಿಷ್ಟೇ ಅರ್ಥ; ಮತ್ತು ಒಮ್ಮೆ ಅಂಥ ಮಾರ್ಗ ಹಸ್ತಗತವಾಯಿತೆಂದರೆ ಸ್ಫೂರ್ತಭಾವವು ಪೂರ್ಣ ಸಹಜತೆಯಿಂದ ನಿರರ್ಗಳವಾಗಿ ಅದರೊಳಗೆ ಹರಿದು ತುಂಬಿಕೊಳ್ಳಬಹುದು. ಆದುದರಿಂದ ಕಾವ್ಯಾರ್ಥದತ್ತ ಅಲಕ್ಷ್ಯಮಾಡದಿದ್ದಲ್ಲಿ ಕಾವ್ಯತಂತ್ರದತ್ತ ಲಕ್ಷ್ಯ ಹಾಕಿದರೆ ಯಾವ ಕೇಡೂ ಉಂಟಾಗದು.

## ೨. ಸ್ಫೂರ್ತಿಜನಕ ಆಕರಗಳು

ಚೈತನ್ಯದ ಯಾವುದೋ ಒಂದು ಗಭೀರತರ ಇಲ್ಲವೆ ಉನ್ನತತರ ಮಟ್ಟವೇ ಯಾವಾಗಲೂ ಸ್ಫೂರ್ತಿ ಜನಕ ಆಕರವಾಗಿರುತ್ತದೆ. ಆದರೆ ಈ ಸೋಪಾನಗಳ ವಿಶಿಷ್ಟಗುಣಗಳನ್ನು ಕಲೆ ಅಥವಾ ಕಾವ್ಯ ಎಂಬ ಅತ್ಯಂತ ಪ್ರಭಾವಪೂರ್ಣವಾದ ರಸಗಂಗಾವಳಿಯಲ್ಲಿ ಗುರುತಿಸಲು ಸಾಧ್ಯವೇ? ಈ ಸಮಸ್ಯೆಗಳ ಬಗ್ಗೆ ಅರವಿಂದರು ಮಾಡಿದ ವಿಚಾರವು ಕಲೆಯ ತತ್ವ ಮತ್ತು ಮಾನಸವಿಜ್ಞಾನಗಳಿಗೆ ಅತ್ಯಪೂರ್ವ ಕೊಡುಗೆ ಎನಿಸಿದೆ. ಅವರು ಸಮಾಮನಿಸಿದ ವೈಶ್ಲೇಷಿಕಾಂಶಗಳು ಸ್ವಾನುಭವವನ್ನೂ ಪ್ರಾಚೀನ ಭಾರತೀಯ ವಿಚಾರವನ್ನೂ ಅವಲಂಬಿಸಿರುವುದರಿಂದ ಅವಕ್ಕೆ ಅಪೌರುಷೇಯ ಪ್ರಾಮುಖ್ಯವಿದೆ. ರಸಶಾಸ್ತ್ರಕ್ಕೂ ಯೌಗಿಕ ಮನೋವಿಜ್ಞಾನ ಮತ್ತು ಮಾನಸ ತತ್ವಜ್ಞಾನಗಳಿಗೂ ಅವೇ ಶ್ರುತ್ಯುಕ್ತಿಗಳಾಗಬಲ್ಲವು.

ಜೈವಿಕ ಚೈತನ್ಯದ ಉಚ್ಚಾವಚಸ್ಥಲ ಸ್ಫೂರ್ತಿಯ ಅಧಿಷ್ಠಾನವಾದಾಗ ಸ್ವಯಂವಹ ಭಾವಗೀತದ ಸೃಷ್ಟಿಯಾಗುತ್ತದೆ; ಶೇಕ್ಸ್‌ಪಿಯರ್ ಜೈವಿಕಸ್ಫೂರ್ತಿಯಿಂದ ಕವಯಿಸಿದಾತ; ಹೋಮರ್ ಸೂಕ್ಷ್ಮಭೌತಿಕ ಚೈತನ್ಯದಿಂದ ಸ್ಫೂರ್ತಿ ಪಡೆದವ. ಆಂತರಿಕ ಚೈತನ್ಯ ಅಥವಾ ಉದಾತ್ತ ಮನ ಸ್ಫೂರ್ತಿದಾತೃವಾದಾಗ ನಿರ್ಮಿಸಲ್ಪಡುವ ಪದ್ಯದಲ್ಲಿ ಕೆಲಮಟ್ಟಿನ ದಾರ್ಶನಿಕವಾದ ಸ್ವಯಮುದ್ಬುದ್ಧ ತೀವ್ರಭಾವಸಾಂದ್ರತೆಯಿರುತ್ತದೆ; ಆದರೆ ಜ್ಯೋತಿರ್ಮಯ ಚೈತನ್ಯದ ವಿಸ್ತಾರವೈಭವ ಅಲ್ಲಿ ಕಂಡುಬರದು. ಅದು ಸೂಕ್ಷ್ಮತರವೂ ಕೋಮಲವೂ ಆಗಿರುವುದಲ್ಲದೆ ಅದರಲ್ಲಿ ಪರಚೈತನ್ಯಮುಖವಾದ ಭಾವಸೋಪಾನದ ಲಕ್ಷಣವೆನಿಸುವ ವಿಸ್ತಾರಗತಿ ಕಂಡುಬರದು. ಆಂತರಿಕ ಚೈತನ್ಯವು ಚೈತಸೋತ್ತರ ಅಥವಾ ಆಧ್ಯಾತ್ಮಿಕ ಉಚ್ಚಾನುಭವದ ಪ್ರತಿಭಾಸವನ್ನು ಪಡೆಯಬಲ್ಲುದು. ಆದರದು ಅದಕ್ಕೆ ಸ್ವಾಭಾವಿಕವಾಗಿ ಲಭ್ಯವಲ್ಲ. ಭೌತಿಕೋತ್ತರ ಲೋಕಗಳಿಂದ ಸ್ಫೂರ್ತ ಭಾವಗಳನ್ನು ಪಡೆಯುವುದು ಕಲೆಗಾರರಿಗೆ ಸಾಧಾರಣ—'ಕಲ್ಪಕ ಕಲೆಯ ಮತ್ತು ರಸದ ಸೂಕ್ಷ್ಮ ಜೈವಿಕ ಪ್ರಪಂಚದಲ್ಲಿ ಅಂಥ ಭಾವಗಳು ನಿರ್ಮಿತವಾಗಿ ತಕ್ಕ ವಾಹಕದ ಮೂಲಕ ಅವತರಿಸಿ ಬರುವುವು.' ದಾರ್ಶನಿಕ ಚೈತನ್ಯ ಎಂಬುದೂ ಒಂದಿದೆ; ಆದೂ ಆಂತರಿಕ ಚೈತನ್ಯದ ಒಂದು ಅಂಶವೇ. 'ಆಂತರಿಕ, ಜೈವಿಕ ಮತ್ತು

ಭೌತಿಕ ಚೈತನ್ಯಗಳು ನಮ್ಮ ಬಾಹ್ಯ ವ್ಯಕ್ತಿತ್ವದ ಮತ್ತು ಅದು ವಾಸಿಸುವ ಪ್ರಪಂಚದ ಕಿರುನೆಲದ ಜಡವೂ ಸಂಕುಚಿತವೂ ಆದ ಇತಿಮಿತಿಗಳಿಂದ ಬದ್ಧವಾಗಿಲ್ಲ.' (ಪು. ೬೩—ಪ. ಮಾ. ೩). 'ಅಂತರಿಕ ಚೈತನ್ಯದಲ್ಲಿ ಬಹುದರ್ಶನಗಳಿವೆ; ಅವುಗಳಲ್ಲಿ ಸತತ ಕಾರ್ಯಂಕರ ಪ್ರಕೃತಿಯ ದರ್ಶನವೂ ಒಂದು. ಪ್ರೇರಕ ಚೈತನ್ಯವು ಚೈತಸೋತ್ತರ ಪ್ರೇರಣಾಧಿಷ್ಠಾನದಿಂದ ಕೆಳಗೆ ಪ್ರೇರಿತ ಅಂತರಿಕ ಚೈತನ್ಯಲೋಕದ ವರೆಗೂ ವ್ಯಾಪಿಸಿದೆ. ಆದುದರಿಂದ ಅದು ಒಂದೇ ಕಾಲದಲ್ಲಿ ಚೈತಸೋತ್ತರ ಶಕ್ತಿಯೂ ಹೌದು, ಚೈತಸ ಮೇಧಾಶಕ್ತಿಯೂ ಹೌದು. ಯೌಗಿಕ ಅಥವಾ ಅನುಭಾವಿಕ ಚೈತನ್ಯವು ರಹಸ್ಯಮುಖಿ, ಆಧ್ಯಾತ್ಮಿಕ ಎಂಬುದೇನೋ ನಿಜ; ಆದರೆ ಅಂತರಿಕ ಚೈತನ್ಯವು ಗೂಢಾತ್ಮ-ಅಧ್ಯಾತ್ಮ ಸಂಬಂಧವನ್ನು ನೇರವಾಗಿ ಇಟ್ಟುಕೊಳ್ಳದೆಯೇ ಕಾರ್ಯಕರವಾಗಬಹುದು. ಆದು ಸಾಮಾನ್ಯ ಮನದ ಕ್ಷೇತ್ರ ಉಪಾದಾನಗಳಲ್ಲಿ ಕೆಲಸ ಮಾಡಬಲ್ಲುದು; ಆದರೆ ಅದರ ಕಾರ್ಯದಲ್ಲಿ ವಿಶದ ತರವೂ ಗಭೀರತರವೂ ಆದ ಶಕ್ತಿ, ವಿಸ್ತಾರ ಮತ್ತು ದೀಪ್ತಿಗಳು ಕಂಡುಬರುತ್ತವೆ; ಅಲ್ಲದೆ ಅದು ಪರಚೈತನ್ಯದಲ್ಲಿ ಹೆಚ್ಚಿನ ಸಾಮರಸ್ಯವನ್ನು ಹೊಂದಿರುತ್ತದೆ.' (ಪು. ೭೧—ಪ. ಮಾ. ೩) ಗ್ರಾಹಕ ಮನದ ಗುಣಕ್ಕೆ ತಕ್ಕಂತೆ ಪಾರ್ಥಿವಸ್ಮೃತಿಯಿಂದಲೂ ಗತವೃತ್ತಗಳನ್ನು ಹೆಚ್ಚುಕಡಿಮೆ ತಪ್ಪಿಲ್ಲದೆ ಪಡೆಯಬಹುದು.

ಇನ್ನು ಪ್ರಾಂತರಿಕ ಅಥವಾ ಚಿನ್ಮಯ ಚೈತನ್ಯದ ವಿಷಯ: ಈ ಚಿದಗ್ನಿ ಪಾವಕವು ಗಭೀರ ತರ ಹೃದಂತರಾಳದಲ್ಲಿ ಪ್ರಜ್ವಲಿಸುತ್ತದೆ. ಅಲ್ಲಿಂದ ಅದು ಚೈತಸ, ಜೈವಿಕ ಚೈತನ್ಯಗಳನ್ನೂ ಭೌತ ಶರೀರವನ್ನೂ ಹೊಕ್ಕು ಬೆಳಗುತ್ತದೆ. ಚೈತಸ ಚೈತನ್ಯದಲ್ಲದು ಪ್ರೇರಣಾತ್ಮಕ ಪ್ರತ್ಯಕ್ಷ (ಅಪರೋಕ್ಷ) ಮತ್ತು ಸತ್ಯಾಸತ್ಯವಿವೇಕಗಳ ಬೆಳಕನ್ನು ಹರಿಯಿಸುತ್ತದೆ. ಆ ವಿವೇಕದೃಷ್ಟಿಯಿಂದ ದರ್ಶನ–ಭಾವಗಳ ಸತ್ಯಾಸತ್ಯತೆಯನ್ನು ಪರಿಚ್ಛೇದಿಸಲು ಶಕ್ಯವಾಗುತ್ತದೆ. ಜೈವಿಕಚೈತನ್ಯದಲ್ಲದು ನ್ಯಾಯ್ಯ ಅಥವಾ ಉಚಿತ ಭಾವನೆಯಾಗಿ ಉದ್ದೀಪ್ತವಾಗುತ್ತದೆ ಮತ್ತು ಒಂದು ವಿಧದ ಪ್ರೇರಕಭಾವನೆಯಾಗಿಯೂ ಮಿಂಚುತ್ತದೆ, ಸರಿಯಾದ ಪ್ರೇರಣೆ ಒದಗುವ ಸದವಕಾಶವನ್ನು ನಿರ್ಮಿಸುವ ಒಂದು ವಿಧದ ಕೌಶಲವಾಗಿಯೂ ಮೂಡುತ್ತದೆ. ಶರೀರದಲ್ಲಿ ಅಂಥದೇ, ಆದರೆ ಅದಕ್ಕೂ ಸ್ವಯಂಚಲವಾದ ಅನ್ಯೂನಾನತಿರಿಕ್ತ ವಿಷಯಾವಬೋಧವನ್ನು ಪ್ರಚೋದಿಸುತ್ತದೆ. ಅದು ಭೌತಿಕ ಅಥವಾ ಅಗ್ರಚೇತನೆಯನ್ನು ತುಂಬಿಕೊಂಡಾಗ ತತ್ಸಾಧನಗಳ ಮೇಲೆ ಪ್ರಭಾವ ಬೀರಿ ಅವುಗಳಿಗೆ ಸ್ವಕಾರ್ಯವನ್ನು ಕಲಿಸುತ್ತದೆ. ಕಲೆಯಲ್ಲಿ ಚಿನ್ಮಯದ ಚಿತ್‌ಕ್ರಿಯೆಯು ಚೈತ ಸೋತ್ತರ ಲೋಕಗಳ ಕ್ರಿಯೆಗಿಂತ ಭಿನ್ನವಾದುದು. "ಅದರಲ್ಲಿ ಮಹತ್ತೆ, ಓಜಸ್ಸು, ವೈಶದ್ಯಗಳು ಕಡಿಮೆ; ಮಾಧುರ್ಯ, ಕೋಮಲ ಸೌಂದರ್ಯ, ಭಾವನಾಸೌಂದರ್ಯ ಕೂಡ, ನಿಜಪ್ರತ್ಯಕ್ಷದ ನಯವಾದ ಸೂಕ್ಷ್ಮತೆ, ಆತ್ಮೀಯ ವಾಣಿ ಮುಂತಾದವು ಹೆಚ್ಚಾಗಿ ಕಂಡುಬರುತ್ತವೆ—'ಮಾಧುರ್ಯ ಮತ್ತು ಕಾಂತಿ' ಎಂಬ ಆರ್ನಾಲ್ಡನ ಮಾತನ್ನು ಚಿನ್ಮಯಶೈಲಿಯ ತಿರುಳಿಗನ್ವಯಿಸಿ ಹೇಳಬಹುದು. ಚೈತಸೋತ್ತರ ಅಥವಾ ಆಧ್ಯಾತ್ಮಿಕ ಶಕ್ತಿಗಳು ಪ್ರವೃತ್ತ ವಾದಾಗ ಭಣಿತಿವೈಶದ್ಯ, ಓಜಸದರ್ಪ, ಋಚಿತಾವಭಾಸ, ಭಾವಗತಿವಿಸ್ತಾರ ಒದಗುತ್ತವೆ." (ಪು ೯೧—ಪ. ಮಾ. ೩). ಶೆಲ್ಲಿಯ 'ಗಗನ ಭಾರದ್ವಾಜ' ಎಂಬ ಪದ್ಯದ 'ಹಿಂದೆಮುಂದೆ ನೋಡುವೆವು' ಎಂಬ ನುಡಿಗೆ ಚೈತಸೋತ್ತರ ಸ್ಫೂರ್ತಿಸ್ಪರ್ಶವಿಲ್ಲ. ಅಲ್ಲಿ ಮನ, ಹೃದಯ ಮತ್ತು ಜೈವಿಕ ಭಾವನೆಗಳು ಅತ್ಯುದಾತ್ತಸ್ವರದಲ್ಲಿ ಚಿನ್ಮಯಸ್ಫೂರ್ತಿನಿಯತವಾಗಿ ಸಾಗುವುದು ತೋರುತ್ತದೆ. ಲಯವಾದರೂ ತಾದೃಶ: ಋಜು, ರೇಖಾಸಮ ನಿರ್ದಿಷ್ಟ, ನಿರರ್ಗಲ, ಕಾಂತಭಾವಪ್ರವಾಹ ಚಿದಧಿಷ್ಠಾನದಿಂದ ಸರಾಗವಾಗಿಯೂ ಪ್ರಸನ್ನವಾಗಿಯೂ ಹರಿಯುವುದು 'ನಾ ಕೊಡಲಾರೆನು ನರನೊಲವ' ಎಂಬ ಭಾವಗೀತ ಬಹುಶಃ ಆಂಗ್ಲ ಕಾವ್ಯಪ್ರಪಂಚದಲ್ಲಿ ಅತ್ಯಂತ ಶುದ್ಧವಾದ ಚಿನ್ಮಯಸ್ಫೂರ್ತಿಯ ಕಾವ್ಯದ ಉದಾಹರಣೆ ಎನ್ನಬಹುದು.

ಅನಂತರ ಚೈತಸೋತ್ತರ ಲೋಕಗಳು: ಉತ್ತರಚೈತನ್ಯದ ಕಾವ್ಯಕ್ಕೆ ಪ್ರಭುತ್ವಸಂಪನ್ನ ಗತಿಯಿದೆ; ಎಷ್ಟೋ ವೇಳೆ ಅರಕ್ಷಪಾದಸಹಜವಾದ ಋಚಿತಪದಾರ್ಪಣದಿಂದ ಅದು ಸುವ್ಯಕ್ತಪ್ರಭಾವಲಯದಲ್ಲಿ ಸಾಗುತ್ತದೆ.

ಅಲ್ಲಿ ದಿವ್ಯಶಕ್ತಿ, ದಿವ್ಯವೃಂದ, ದಿವ್ಯಗಾಂಭೀರ್ಯ ಮೂಡಿರುತ್ತದೆ. ಜ್ಯೋತಿರ್ಮಯ ಚೈತನ್ಯದ ಬಹಿಃಪ್ರವಾಹವು ಶ್ರೌತಪದಪಂಕ್ತಿಗಳ ಮೂಲಕ ಭಾಸ್ವರವಾಗಿ, ಇಲ್ಲವೆ ಪ್ರತಿಮಾಸಮುಚ್ಚಯದ ದೀಪ್ತಿಯಲ್ಲಿ, ಕೆಲವೊಮ್ಮೆ ಅಪೌರುಷೇಯ ವಾಣಿಗಳಿಂದ ಭಾರವತ್ತಾಗಿ, ಮತ್ತೆ ಕೆಲವೊಮ್ಮೆ ಜಾಜ್ವಲ್ಯಮಾನ ಗತಿವಿಸ್ತಾರದೊಡನೆ ಆವಿರ್ಭವಿಸುತ್ತದೆ. ಅಂತಃಪ್ರೇರಣೆ ಸಾಮಾನ್ಯವಾಗಿ ಸ್ಫುರದ್ರೂಪವುಳ್ಳದ್ದು; ಒಮ್ಮೆ ವಿದ್ಯುದುನ್ಮೇಷದಂತೆ ಫಳಚ್ಚನೆ ಚಮಕಿಸಿ ವಿದ್ಯುದ್ಗತಿಯಿಂದ ಒಂದು ಭಾವಸ್ಥಲ, ದೃಶ್ಯ, ಆವರಣ ಅಥವಾ ಸನ್ನಿವೇಶವನ್ನು, ಅದರ ಸಾರ್ವಾಂಗಿಕ ದರ್ಶನಪರಿಪೂರ್ಣತೆಯಲ್ಲಿ, ಜ್ಞಾನಚಕ್ಷುವಿಗೆ ಸಾಶ್ಚರ್ಯ ಸಂತೋಷವುಂಟಾಗುವಂತೆ ಎದುರಿಡುತ್ತದೆ. ಚೈತಸಮುಟ್ಟವನ್ನು ಮೀರದ ಕಾವ್ಯದಲ್ಲಿ ಸಾಮಾನ್ಯವಾಗಿ ಕಂಡುಬರುವ ಚೈತಸಸ್ಫೂರ್ತಿಗಿಂತ ಅದು ಭಿನ್ನವಾದುದು. ಅದರ ಲಯವು ಒಂದು ಬಗೆಯ ನಿರ್ಣಾಯಕತೆಯ ಮತ್ತು ಅನಿವಾರ್ಯತೆಯ ಧ್ವನಿಯುಳ್ಳದ್ದು. ಆ ಧ್ವನಿ ಯಾವ ಗೌಣಾಂಗವನ್ನು ಲಕ್ಷಿಸದೆ ಉಳಿಯದು, ಆದರೆ ಅವೆಲ್ಲ ಅಂಶಗಳನ್ನೂ ಒಂದೇ ಏಟಿಗೆ ಅಭಿವ್ಯಂಜಿಸಿ ಬಿಡುವುದು.

ಪರಚೈತನ್ಯವು ಪರಾತ್ಪರ ಚೈತನ್ಯದಂತೆ ವಿಶ್ವೋತ್ತರವಲ್ಲ, ವಿಶ್ವವ್ಯಾಪಕ ಮಾತ್ರ. ವಿಶ್ವದ ವಿಶಿಷ್ಟ ಪದಾರ್ಥಗಳೆಲ್ಲವುಗಳ ಹಿಂದೆಯೂ ಆ ವಿಶ್ವಪ್ರಜ್ಞೆ ವ್ಯಾಪಿಸಿದೆ ಮತ್ತು ನಮ್ಮ ಚೈತಸ, ಜೈವಿಕ ಮತ್ತು ಭೌತಿಕ ಸತ್ಯತೆ-ಸಂಭಾವ್ಯತೆಗಳೆಲ್ಲವುಗಳಿಗೂ ಅದೇ ಆಕರ. ಅದು ಪ್ರಚ್ಛನ್ನವೂ ಸರ್ವಾಂತರ್ಯಾಮಿಯೂ ಆಗಿರುವುದರಿಂದ ಅದರ ಕೆಲವಂಶ ಈಚೆಗೆ ಹೊಳೆದು ಆ ಮೂಲಕ ಅದರ ಸ್ಪರ್ಶ ವಕ್ಷ್ಯಮಾಣ ಅರ್ಥಕ್ಕೆ ಲಭಿಸುತ್ತದೆ. ಈ ಸ್ಪರ್ಶ ಪದೇ ಪದೇ ಲಭ್ಯವಾಗಬೇಕಾದರೆ, ಅದನ್ನು ಪ್ರಚ್ಛಾದನದಿಂದ ಮುಕ್ತಗೊಳಿಸಿ, ಅದರ ಸ್ವರ್ಣಪ್ರಭಾ ಪ್ರಭಾವಕ್ಕೆ ನಾವು ಮೆಯ್ಯೊಡ್ಡಬೇಕು; ಇಲ್ಲವಾದರೆ ಉಚ್ಚ ಮತ್ತು ಸಾಮಾನ್ಯ ಚೈತನ್ಯಗಳ ನಡುವೆ ನಾವು ಸಂಪರ್ಕ ಸಾತತ್ಯವನ್ನು ಕಲ್ಪಿಸಿಕೊಳ್ಳಬೇಕು. ಆಗ ಚೇತ, ಹೃದಯ, ಇಂದ್ರಿಯಗಳ ಕಾಣ್ಕೆಗೆ ಹೊಂದದ ಬಗೆಯಲ್ಲಿ ವಸ್ತುಗಳು ಗೋಚರಿಸುವುವು; ಆ ಮಹತ್ತರ ಚೈತನ್ಯದ ಅನುಭವ-ದರ್ಶನ-ಉನ್ಮುಖ ಪ್ರತಿಕ್ರಿಯೆಗಳಿಗನುಗುಣವಾಗಿ ಅವು ನಮ್ಮೆದುರು ನಿಲ್ಲುವುವು.

ಪರಚೈತನ್ಯವು ಸಮುಚ್ಚಯದರ್ಶಿ. ಅದರ ವಿಚಾರ, ಭಾವನೆ, ದರ್ಶನಗಳು ಉಚ್ಚ, ಗಭೀರ ಅಥವಾ ವಿಶಾಲ—ಇಲ್ಲವೆ ಈ ಮೂರೂ ಗುಣಗಳುಳ್ಳವು. ಅವಕ್ಕೆ ತಾದೃಶ ಭಾಷಾಶೈಲಿಯೂ ಲಯವೂ ಇವೆ. ನೇರವಾದ ಪರಚೈತನ್ಯ ಪ್ರವಾಹದಲ್ಲಿ ಅವ್ಯಕ್ತವು ಗಭೀರ ಪರಾರ್ಥ. ವ್ಯಂಜಕಪದಸಂಯೋಜನೆಯಿಂದ ಅಥವಾ ಪ್ರತಿಮಾರೂಪಕ ಸಾಮರ್ಥ್ಯದಿಂದ ಇಲ್ಲವೆ ಅಗಾಧ ಭಾವವ್ಯಂಜಕವಾದ ಸವಿಸ್ತಾರ ಆಸ್ಫಾಲನ, ಸುದೀರ್ಘ ಗತಿ, ಅಥವಾ ಪ್ರತಿಪದೋತ್ಪಾತವುಳ್ಳ ಸ್ವರಭಾರ ಲಯಗಳಿಂದ ವ್ಯಕ್ತದ ಸಾಮೀಪ್ಯಕ್ಕೆ ಒತ್ತಲ್ಪಡುತ್ತದೆ. ಅವರ ಸ್ವರಭಾರದಲ್ಲಿಯೂ ಪದವಿನ್ಯಾಸದಲ್ಲಿಯೂ ಒಂದು ವಿಧದ ಅಪರಿಹಾರ್ಯ ಔಚಿತ್ಯವಿದೆ; ಅಲ್ಲಿ ಪದಗಳ ಸ್ಫೂರ್ತಿಬದ್ಧ ಆಯ್ಕೆ ಅಥವಾ ಅಪೂರ್ವಪದ ಸಮಾಹರಣ ಕಂಡುಬರುತ್ತದೆ. ಶೇಕ್ಸ್‌ಪಿಯರನ—'ಈ ಕ್ರೂರ ಜಗದಲ್ಲಿ ನೀ ದುಃಖುದುಸಿರೆಳೆವೆ' ಎಂಬ ಸಾಲಿನಲ್ಲಿ ಓದುಗನ ಮನ, ಸೂಕ್ಷ್ಮ ನರಮಂಡಲ ಮತ್ತು ಬುದ್ಧಿ ಇವುಗಳ ಮೇಲೆ, ಪ್ರಪಂಚದ ದುಃಖವನ್ನು ಕಣ್ಣಾರೆ ಕಂಡು ಎಚ್ಚೆತ್ತ ಜೀವಕ್ಕೆ ಬದುಕಿನಲ್ಲಿ ಒದಗುವ ಶೋಕ, ಸಂತಾಪ, ಕಾಠಿನ್ಯ, ಕಾರ್ಕಶ್ಯಗಳ ಸನಾತನತೆಯನ್ನು ಬಿಂಬಿಸಲು ತಕ್ಕ ಶಬ್ದ ಮತ್ತು ನಾದವ್ಯವಸ್ಥೆಯಿದೆ. ವರ್ಡ್ಸ್‌ವರ್ತನ—

'ನಿದ್ದೆಯೂರ ಗಾಳಿ ಬೀಸಿ ಬಂದಿತೆನ್ನ ಬಳಿಗೆ'

ಎಂಬ ಪಂಕ್ತಿಯಲ್ಲಿ ಪರಚೈತನ್ಯದ ಒಂದು ಅವ್ಯಕ್ತಭಾವವು ಅತ್ಯುಚ್ಚ ಪ್ರೇರಕ ಚೈತನ್ಯದ ಮೂಲಕ ಸವ್ಯಾಜವಾಗಿ ಆವಿರ್ಭವಿಸಿದೆ. ಆ ಭಾವೋದಯ ಅವ್ಯಾಜವಲ್ಲದುದರಿಂದ ಆ ಸಾಲಿನಲ್ಲಿ ಪರಚೈತನ್ಯಸಂಚಾರ ಅಥವಾ ತತ್ಸಹಜ ಲಯ ಕಂಡುಬರದಾಗಿದೆ. ಪುನಃ, ವರ್ಡ್ಸ್‌ವರ್ತನ—

'ಚಿತ್ರ ಚಿಂತನಾಬ್ಧಿಯಲ್ಲಿ ಚಲಿಸುತಿರುವೆನೊಬ್ಬನೇ'

ಎಂಬ ಸಾಲಿನಲ್ಲಿ ಮತ್ತು ಶೇಕ್ಸ್‌ಪಿಯರ್ ಮಹಾಕವಿಯ—

'ಆ ಅಗಾಧಕಾಲತಲದೊಳಂಧಕಾರಗುಹೆಯಲಿ'

ಎಂಬಲ್ಲಿ ಆ ಭಾವದ ಅವ್ಯಾಜೋದಯವಿದೆ. ಅನೇಕ ಶಕ್ತಿಗಳ ಸದೃಶಪದಾರ್ಪಿತ ಭಾವಾಭಿವ್ಯಂಜನ ಕಡಿಮೆಯಿರುವ ಅಥವಾ ಇತೋಪ್ಯಧಿಕ ಭಾವಾವೇಶಬದ್ಧವೂ ಕೇವಲ ವರ್ಣನಾತ್ಮಕವೂ ಆದ ಕವಿಕೃತಿಗಳಿವೆ. ಉದಾಹರಣೆಗಾಗಿ ಮಾರ್ಲೋವಿನ ಈ ಪಂಕ್ತಿಗಳನ್ನು ತೆಗೆದುಕೊಳ್ಳಬಹುದು:

'ಇಲ್ಲೆ ದಾಳಿಯಿಟ್ಟಿತಲ್ಲ ಧೂರ್ತ ಸೈನ್ಯ ದುರ್ಮುಖ
ಎಲ್ಲಿಲ್ಲದಸಂಖ್ಯ ನಾವೆಯೇರಿ ಕವಿದು (ಹೇ ಸಖ!)
ಇಲ್ಲಿಯುಮ್ಮಿನಭ್ರಂಲಿಹ ಸೌಧಗೋಪುರಂಗಳ
ಇಲ್ಲೆನಿಸಿತು ಸುಟ್ಟುಸೂರೆಗೈದು (ತಾನಮುಂಗಳ!)'

ಇದರ ಮೇಲೆ ಮಿಲ್ಟನ್ನನ—

'ಆ ಅನಂತಕಾಲದಲ್ಲಿ ಅಲೆವ ಭಾವದಲೆಗಳು'

ಎಂಬ ಪಂಕ್ತಿ. ಇಲ್ಲಿ 'ಅನಂತಕಾಲದಲ್ಲಿ' ಎಂಬುದರ ಜೊತೆಗಿಟ್ಟ 'ಅಲೆವ' ಎಂಬ ಪದವೇ ಈ ಸಾಲಿಗೆ ಅಮರತ್ವ ಕೊಟ್ಟದ್ದು. ಅದರ ಬದಲು ಇನ್ನಾವುದಾದರೂ ಪದವನ್ನು ಬಳಸಿದ್ದರೆ ಇದಕ್ಕೆ ಪರಚೈತನ್ಯಪ್ರಕಾಶ ಬರುತ್ತಿದ್ದಿಲ್ಲ. ವಾಚ್ಯಾರ್ಥ ಹೀಗೇ ಇದ್ದರೂ (ಅಲೆವ—'Wander' ಎಂಬ ಪದ ಹಾಕಿದಷ್ಟು) ಸಫಲವಾಗುತ್ತಿದ್ದಿಲ್ಲ. ಇಂಥ ಪಾರಚೈತನಿಕ ಪದಪಂಕ್ತಿಯಲ್ಲಿಯ ಲಯವು ಅನಾದ್ಯನಂತ ಎನಿಸುತ್ತದೆ ರಸಿಕ ಮನಕ್ಕೆ; ಅದು ಎಂದಿನಿಂದಲೂ ಸನಾತನ ಲೋಕಗಳಲ್ಲಿ ಧ್ವನಿಸುತ್ತಿದೆ ಎಂದು ಭಾಸವಾಗುತ್ತದೆ. ಪದಲಯವು ಶ್ರಾವಣವಿಷಯದ ಒಂದಂಶವಷ್ಟೆ; ನಿಜವಾಗಿ ನೋಡಿದರೆ ಅದು ನಮ್ಮ 'ಶ್ರೋತ್ರಸ್ಯ ಶ್ರೋತಂ— ಕಿವಿಯ ಕಿವಿ' ಕೇಳುವ ಲಯದ ಆಧಾರ ಮಾತ್ರ. ಕೆಲಮಟ್ಟಿಗೆ ಎಲ್ಲ ಮಹಾಕಾವ್ಯರಚನೆಯೂ ಈ ಲಯವನ್ನು ಸಾಧಿಸಿಕೊಳ್ಳಲು ಯತ್ನಿಸುತ್ತದೆ; ಆದರೆ ಈ ಸಿದ್ಧಿಯು ಪರಚೈತನ್ಯಕ್ಕೆ ಶ್ವಾಸೋಚ್ಛ್ವಾಸದಷ್ಟು ಸುಲಭ ಮತ್ತು ಸ್ವಾಭಾವಿಕ; ಅಲ್ಲಿ ಅದು ಪದ-ಲಯದ ಹಿಂದೆ ಇರುವುದಷ್ಟೇ ಅಲ್ಲದೆ, ಪದಸಂಚಾರದಲ್ಲಿಯೂ ಸೇರಿ ಒಂದು ವಿಧದ ಪೂರ್ಣಾವಲಂಬನೀಯ ಸಶರೀರತೆಯನ್ನು ಹೊಂದುತ್ತದೆ.

ಪರಚೈತನ್ಯದ ಸ್ಫೂರ್ತಿಯಿಂದ ಉದಿಸುವುದೇ **ಮಂತ್ರ.** ಮಾನವ್ಯ ಕಾವ್ಯರಚನೆಯಲ್ಲಿ ಅದು ಶುದ್ಧರೂಪದಲ್ಲಿ ಪ್ರಕಟವಾಗುವುದು ವಿರಳ. ಅತ್ಯುಚ್ಚ ಪ್ರೇರಕ ಚೈತಸ ಚೈತನ್ಯದಿಂದಲೂ ಪರಚೈತನ್ಯದಿಂದಲೂ ಹೊರಟ ಛಂದೋಬದ್ಧ ಪಂಕ್ತಿಗಳಲ್ಲಿ ಮಾಂತ್ರಿಕ ಲಕ್ಷಣವಿರುತ್ತದೆ; ಲಯ ಕೂಡ ಮಾಂತ್ರಿಕ ಛಾಯೆಯುಳ್ಳದ್ದಾಗಬಹುದು. ಆದರದು ಅದೇ ಆಗಿರಲಾರದು, ಅದಕ್ಕೆ ನಿಕಟವರ್ತಿಯಷ್ಟೇ ಆಗಿರಬಹುದು.

'ಭಾವಿಕಾವ್ಯ'ದಲ್ಲಿ ಅರವಿಂದರು ಕಾವ್ಯಶೈಲಿಯ ಪರಿಪೂರ್ಣತೆಯ ವಿವಿಧ ಸೋಪಾನಗಳನ್ನು ವಿವರಿಸಿದ್ದಾರೆ. ಅವೆಂದರೆ: ಅನ್ಯೂನಾನತಿರಿಕ್ತತೆ, ಪರಿಣಾಮಿತ್ವ, ವಾಗ್ವಿದ್ಯುದುನ್ಮೇಷ, ಸ್ಫೂರ್ತಿಮತ್ತೆ ಮತ್ತು ದುರ್ನಿವಾರ್ಯವೆನಿಸುವ ಔಚಿತ್ಯ. ಆದ್ಯಂತ ಸೋಪಾನಗಳನ್ನುಳಿದು ಮಿಕ್ಕ ಮೂರನ್ನು ಸ್ಫೂರ್ತಿ ಲೋಕತ್ರಯದೊಡನೆ ಹೊಂದಿಸಬಹುದು. ಆ ಲೋಕಗಳೆಂದರೆ, ಉತ್ತರ ಚೈತನ್ಯ, ಜ್ಯೋತಿರ್ಮಯ ಚೈತನ್ಯ ಮತ್ತು ಪ್ರೇರಕ ಚೈತನ್ಯ. ತಮ್ಮ ತಮ್ಮ ರೀತಿಯಲ್ಲೇ ಈಯೆಲ್ಲ ಶೈಲಿಗಳನ್ನು ದುರ್ನಿವಾರ್ಯ

ಔಚಿತ್ಯದ ದಶೆಗೇರಿಸಿಬಹುದು. ಪರಮೌಚಿತ್ಯವು ಇದೆಲ್ಲಕ್ಕಿಂತ ಹೆಚ್ಚಿನದು. ಅತ್ಯಂತ ಭಿನ್ನವಾದ ಶೈಲಿಗಳಲ್ಲಿ ಅದನ್ನು ಕಾಣಬಹುದು; ಆದರೆ ಅದನ್ನು ವರ್ಗೀಕರಿಸಲು ಸಾಧ್ಯವಿಲ್ಲ, ಅದು ಅವಿಶ್ಲೇಷಣೀಯ.

ಇವಲ್ಲದೆ, ಅನ್ಯೋನ್ಯವಾಗಿ ಸಂಧಿಸುವ ಮತ್ತು ಪರಸ್ಪರ ರೂಪಪರಿವರ್ತಕವಾದ ಇತರ ಮಿಶ್ರ ಸ್ಫೂರ್ತಿಸೋಪಾನಗಳೂ ಇವೆ. ಪರಚೈತನ್ಯದ ಸ್ಫೂರ್ತ್ಯುತ್ಸವು ಮಿಕ್ಕೆಲ್ಲವನ್ನು ಜೊತೆಗೇ ಪ್ರಕಾಶಿಸ ಬಲ್ಲುದು. ಮತ್ತೆ, ಪರಚೈತನ್ಯೇತರವಾದ ಚೈತಸ ಕಾವ್ಯರಚನೆಯಲ್ಲಿ ತದ್ಘಟಿತ ಶೈಲಿಭೇದವೆಲ್ಲಕ್ಕೂ ಪರ್ಯಾಯವಾಗುವ ಅಥವಾ ತಜ್ಜನ್ಯವೆನಿಸುವ ಶೈಲಿಗಳಿವೆ. ಮಿಲ್ಟನ್ನನ 'ವೈಭವನಿರ್ಭರ ಶೈಲಿ' ಅಥವಾ ಗಜಗಂಭೀರ ಶೈಲಿ ಉತ್ತರ ಚೈತನ್ಯಕ್ಕೆ ಅಂಥ ಒಂದು ಪರ್ಯಾಯ. ಉತ್ತರ ಚೈತನ್ಯವು ಆತ್ಮಜ್ಞಾನ ಉಂಟಾಗುವ ಮೊದಲನೆಯ ಲೋಕ. ಆ ಆತ್ಮವು ವಿಶ್ವವ್ಯಾಪಿ; ವಿಷಯಾಂತರ್ಗತಾರ್ಥವನ್ನು ಅದು ಉನ್ನತ ವಿಚಾರಶಕ್ತಿಯಿಂದಲೂ ಸರ್ವಂಕಷ ಪ್ರಜ್ಞಾದೃಷ್ಟಿಯಿಂದಲೂ ನೋಡಬಲ್ಲುದು, ಅರಿಯಬಲ್ಲುದು. ಆದರೆ ಆ ದರ್ಶನಕ್ಕೆ ತೀಕ್ಷ್ಣವೂ ತೀವ್ರವೂ ಆದ ಊರ್ಧ್ವಲೋಕಪ್ರದೀಪಗಳು ಬೇಕಾಗಿಲ್ಲ; ಅದರ ಬೆಳಕು ವಿಶದವೂ ಪ್ರಖರವೂ ಸ್ಪಷ್ಟವೂ ಆದ ಹಗಲಿನಂತೆ, ಅಷ್ಟೆ. ಕವಿಪ್ರೌಢಿ ಭಿನ್ನವಾದುದು; ಬುದ್ಧ್ಯುಪಮ ಆದರೆ ಬುದ್ಧ್ಯುತ್ತರ ಎನಿಸುವ ಕಲ್ಪನಾಶಕ್ತಿಯನ್ನು ಗರಿಗಟ್ಟಿಕೊಂಡು ಅದರ ದರ್ಶನ ಉದ್ಗಮಿಸುವುದು. ಉತ್ತರ ಚೈತನ್ಯವು ಆಧ್ಯಾತ್ಮಿಕ ಲೋಕಕ್ಕೆ ಸೇರಿದ್ದು, ಇದು ಹಾಗಲ್ಲ. ಆದರೆ ವಿಶಾಲತರ ತಾತ್ವಿಕ ಮತ್ತು ಆಲಂಕಾರಿಕ ಪ್ರೌಢಿಯು ಸಾಮಾನ್ಯ ಬುದ್ಧಿಶಕ್ತಿಗಿಂತ ಅದಕ್ಕೆ ಹತ್ತಿರವಾದುದು ಮತ್ತು ಅದು ಆ ಮೇಲ್ಬಗೆಯ ಪ್ರಭಾವವನ್ನು ಪಡೆಯಬಲ್ಲುದು. ಮಿಲ್ಟನ್ ತನ್ನ ಪದ್ಯವನ್ನು—

'ಮಾನವನ ಮೊದಲಿನಾಜ್ಞೋಲ್ಲಂಘನೆಯ ಮತ್ತ-
ಮಾ ವರ್ಜನೀಯ ವೃಕ್ಷದ...............'

ಎಂದು ಪ್ರಾರಂಭಿಸುವಾಗ ಸ್ಪಷ್ಟವಾಗಿ ಕವಿಪ್ರೌಢಿಯಿಂದಲೇ ಬರೆಯುತ್ತಾನೆ. ಆದರೆ ತಾತ್ಪರ್ಯದಲ್ಲಾಗಲಿ, ಶೈಲಿಯಲ್ಲಾಗಲಿ ಮೇಲ್ಬಗೆಯ, ಚೈತಸೋತ್ತರ ಲೋಕಗಳ ಯಾವ ಅಂಶವೂ ಅಲ್ಲಿಲ್ಲ. ಹೀಗಿದ್ದರೂ ಅದರಲ್ಲೊಂದು ಲಯವೈಶದ್ಯ, ಭಾಷೆಯ ಅಸ್ಖಾಲನಗತಿ ಇವೆ; ಅವು ಮೇಲಿನ ಸ್ಫೂರ್ತಿ ಲೋಕಗಳಿಗೆ ಸಹಜವಾದಂಥವು. ಕವಿಪ್ರೌಢಿ ವಾಹಕವಾದ ಪದ್ಯರಚನೆಯಲ್ಲಿ ಮೇಲ್ಬಗೆಯ ಅಂಶ ಸ್ಫುರಿಸಿ ಅದನ್ನು ಸ್ವಾಭಾವಿಕವಾಗಿ ಮೇಲ್ಮಟ್ಟಕ್ಕೆತ್ತಬಹುದು. 'ಆ ಅನಂತಕಾಲದಲ್ಲಿ ಅಲೆವ ಭಾವದಲೆಗಳು' ಎಂಬಂಥ ಸಾಲುಗಳಲ್ಲಿ ಅಂಥ ಉದ್ಗತಿ ಸಾಧಿಸೀತು.

ಶೇಕ್ಸಪಿಯರನ ಪದ್ಯವು ಕಲ್ಪನಾಶಕ್ತಿಯ ವರ್ಣರೇಖೆಗಳ ಮೂಲಕ ಮಿಂಚುತ್ತದೆ. ಅದನ್ನು ಜೈವಿಕಮನದ ಸ್ಫೂರ್ತಿಯ ಚೈತಸಪರ್ಯಾಯ ಎಂದು ತಿಳಿಯಬಹುದು. ಕೆಲವೊಮ್ಮೆ ಆತ ಉದಾತ್ತ ಭಾವೋನ್ಮೀಲನ ಮಾಡ ಹೊರಟು ಚೈತಸೋತ್ತರ ಸ್ಫೂರ್ತಿಯೊಡನೆ ಸಂಬಂಧಿಸಿಬಿಡುತ್ತಾನೆ. ಇಲ್ಲಿ ನೋಡಿ—

'ಆ ಭೀಷಣ ಗಗನಗರ್ಭಗತ ಕೂಪಕಕೆತ್ತಿ
ಕರ್ಣಧಾರನಕ್ಷಿಗಳನು ಮುದ್ರಿಸಿ ಕೆಯ್ಯೊತ್ತಿ
ದುರವಗ್ರಹ ದರ್ಪರಸೋದ್ರೇಕದೋಲದಲ್ಲಿ
ತೂಗುವೆಯೇನವನ ಮನಃಶಿಶುವ ಬೀಸಿ ಚೆಲ್ಲಿ ?"

ಆದರೆ ಇದರ ಮಿಕ್ಕಭಾಗವು, ಭಾವೋದ್ದೀಪಕ ಭಾಷೆ ಮತ್ತು ಸಾನುರಣನ ಪದಾನುಸ್ಯೂತ ಲಯಗಳಿದ್ದರೂ, ಚೈತಸೋತ್ತರ ಅಂತಸ್ತಿಗಿಂತ ಬಹಳ ಕೆಳಮಟ್ಟಕ್ಕಿಳಿದಿದೆ.

ಈಯೆಲ್ಲ ವಿಮರ್ಶಾತ್ಮಕ ಪ್ರಕಾರಗಳಲ್ಲಿಯೂ ಚೈತನ್ಯೋತ್ತರ ಚೈತನ್ಯಲೋಕಗಳಿಂದ ರೂಹುದಳೆದ ಕಾವ್ಯಗಳಲ್ಲಿರುವಂತಹ ಮರ್ಮಜ್ಞತೆ ಕಂಡುಬರುತ್ತದೆ. ' ಈ ವರ್ಣನೆಯಲ್ಲಿ ಎಷ್ಟು ಅಂಶ ಸಾಮಾನ್ಯ ಕಾವ್ಯವಾಚಕನಿಗೆ ಅರ್ಥವಾದೀತು, ಎಷ್ಟು ಸ್ಪಷ್ಟವಾಗಿ ಇಲ್ಲಿಯ ವಿವರಗಳನ್ನು ಆತ ತಿಳಿದುಕೊಂಡಾನು ?' ಎಂದು ಕೇಳುತ್ತಾರೆ ಅರವಿಂದರು. (ಪು. ೧೧೭--ಪ. ಮಾ. ೩) ಈ ಅರವಿಂದ ಋಷಿಗಳು ಸುಮಾರು ನಲವತ್ತು ವರ್ಷಕಾಲ ತಮ್ಮ ಭವಿಷ್ಯದರ್ಶನಗಳಿಂದ ಆವೃತರಾಗಿ ಏಕಾಂತ ವಾಸದಲ್ಲಿ ಪ್ರಣಿಧಾನ ಪರಾಯಣರಾಗಿದ್ದರು. ನವನಾಗರಕತೆಯ ಮಂತ್ರವನ್ನು ಉದೀರಿಸುವ ಮಾನವ ನಕ್ಷತ್ರರಾಶಿಗಳ ಕ್ಷಿತಿಜದಲ್ಲಿ ಅವರು ಹೊಳೆದರು. ಕಲೆ ಮತ್ತು ಕಾವ್ಯಗಳ ಮೇಲಿನ ಅವರ ಅಭಿಪ್ರಾಯಗಳನ್ನು ಅಭ್ಯಸಿಸುವುದೆಂದರೆ ಆ ಗುರುವಿನ ಮನೋಮಂದಿರಗಳಲ್ಲಿ ಒಂದರ ಪರಿಚಯವನ್ನು ಬೆಳೆಸಿಕೊಳ್ಳುವುದು ಎಂದೆನಿಸುತ್ತದೆ. ಯುಕ್ತವಾದ ಪ್ರೈರಣಿಕ ನಿಶಿತತೆ ಮತ್ತು ಗ್ರಹಣಶಕ್ತಿಗಳಿದ್ದರೆ ಓದುಗನು ಈ ಅವಾಂತರ ಭೇದಗಳನ್ನು ಭಾವಿಸಿಕೊಳ್ಳಬಲ್ಲನು ಮತ್ತು ವರ್ಡ್ಸ್‌ವರ್ತ್ ಹೇಳುವಂತೆ ಸ್ವತಃ ಅವನ ಮನವು ಸುಂದರ ಪ್ರತಿಮಾಬಿಂಬಿತ ಸೌಧವಾದಾಗ ಅವನು ಅವೆಲ್ಲವನ್ನೂ ಪ್ರತ್ಯಕ್ಷವಾಗಿ ಕಾಣಬಲ್ಲನು. ಈ ಸಂದರ್ಭದಲ್ಲಿ ನೆನಪಿಡಬೇಕಾದ್ದೊಂದಿದೆ. ಬರಿ ಮಾನಸೀಕೃತ ಜ್ಞಾನ, ಎಷ್ಟೋ ಸ್ಪಷ್ಟವಾಗಿ ಸೂತ್ರೀಕೃತವಾಗಿರಲಿ, ನಿಜಾನುಭವಜನ್ಯ ವಿವೇಕವಿಲ್ಲದೆ ಹೋದರೆ, ಕೇವಲ ಟೊಳ್ಳು ಕಲ್ಪನೆಯಾದೀತು.

## ೩. ಕಲೆಗಾರನೂ ಆನಂದವೂ

ವಿಶ್ವವ್ಯಾಪಕ ಆನಂದವೇ ಕಲಾದೃಷ್ಟಿಯ ಜನಕ. ವಿಶ್ವಾನಂದವು ಮೂರು ಮುಖ್ಯವೂ ಮೂಲವೂ ಆದ ರೂಪಗಳನ್ನು ಹೊಂದುತ್ತದೆ: ರಸ, ಪ್ರೇಮ ಮತ್ತು ಆನಂದ—ಸರ್ವಾಸ್ತಿತ್ವದ ಆನಂದ, ಸರ್ವ ಚರಾಚರ ದರ್ಶನಜನ್ಯ ಆನಂದ. ವಿಶ್ವಾನಂದವೇ* ವಿಶ್ವಜನಕ, ವಿಶ್ವಕಲಾಕಾರ, ಅದು ಸ್ವಕೀಯ ಸೃಷ್ಟಿಕಾರ್ಯವನ್ನು ಸಾಕ್ಷಿಯಾಗಿ ನೋಡುತ್ತದೆ, ಅನುಭವಿಸುತ್ತದೆ ಮತ್ತು ಅವರಲ್ಲಿ ಸುಖಪಡುತ್ತದೆ. ಅಧಶ್ಚೈತನ್ಯದಲ್ಲಿ ಆನಂದವು ಸ್ವವಿರುದ್ಧ ಪದಾರ್ಥಗಳನ್ನು ಸೃಜಿಸುತ್ತದೆ: ಸುರೂಪ-ಕುರೂಪ, ರಾಗ-ದ್ವೇಷ, ಆಕರ್ಷಣ-ಅಪಕರ್ಷಣ, ಇಷ್ಟ-ಅನಿಷ್ಟ, ಸುಖ-ದುಃಖ, ಸುಮ್ಮಾನ-ದುಮ್ಮಾನ, ಈ ದ್ವಂದ್ವಗಳ ನಡುವೆ ಅಥವಾ ಸಿತಾಸಿತ ವರ್ಣದ ಹಿನ್ನೆಲೆಯಲ್ಲಿ ಒಂದು ಸರ್ವಸಾಮಾನ್ಯವಾದ ತಾಟಸ್ಥ್ಯಸ್ಥಿತಿಯಿದೆ, ತನ್ನ ಅಚಿದಂಶದ ಅಂಧಕಾರಮಯ ಅಸತ್ತಿನಲ್ಲಿ ಆನಂದವು ಮುಳುಗುವ ವಿಶ್ವವ್ಯಾಪಕ ಜಾಡ್ಯದಿಂದ ಜನಿಸಿದ ಅಲಕ್ಷ್ಯವಿದೆ. ಈ ಎಲ್ಲವೂ ರಸಲೋಕಕ್ಕೆ ಸೇರಿದಂಥವು. ಅವುಗಳ ಅತಿ ಮಂದ ಪ್ರತಿಕ್ರಿಯೆಯೆಂದರೆ ಅಲಕ್ಷ್ಯ, ಔದಾಸೀನ್ಯ; ಅತ್ಯುನ್ನತ ಪ್ರತಿಕ್ರಿಯೆಯೆಂದರೆ ಮೂಲದ ಪರಾನಂದಕ್ಕೆ ನಿಕಟವರ್ತಿಯಾಗ ರಸಾನಂದ. ಚೈತನ್ಯವು ತನ್ನ ಪರಂಧಾಮದಿಂದ ಸೌಪಾನಿಕ ಮಟ್ಟಗಳಲ್ಲಿ ಇಳಿದು ಅಚಿತ್ತಿನಲ್ಲಿ ಮುಳುಗುವಾಗ ಆದರ ಪ್ರಖರಶಕ್ತಿ ಕಡಿಮೆಯಾಗುತ್ತ ಹೋಗುವುದು ಕಂಡು ಬರುತ್ತದೆ. ಅಸ್ತಿತ್ವದ, ಚೈತನ್ಯದ, ಓಜಸ್ಸಿನ, ವಿಷಯನಿಷ್ಠ ಹರ್ಷದ ಮತ್ತು ಜೀವನದ ವಿವಿಧ ಪ್ರಖರತೆ ಕ್ರಮೇಣ ನಷ್ಟವಾಗುವುದು.

ಆನಂದದ ಅಪರ ಅಥವಾ ಅಧಶ್ಚೇತನಾವಸ್ಥೆಯಲ್ಲಿ ಅದರ ವಿರುದ್ಧಸೃಷ್ಟಿಗಳಾದ ದ್ವಂದ್ವಗಳಲ್ಲಿ ಸಿಕ್ಕಿದ ಬಹುಸಂಖ್ಯ ಮಾನವಜಂತುಗಳು ಆಹಾರ-ನಿದ್ರಾ-ಭಯ-ಮೈಥುನಪ್ರಧಾನವಾದ ಮೂಲಪ್ರವೃತ್ತಿನಿಷ್ಠ ಪ್ರಾಕೃತಜೀವನವನ್ನು ನಡೆಸುತ . ಮಾನಸ್ಯ ಕುಲ ಈ ಪ್ರಾಣಿಸಹಜ ಜೀವನದ ಸಾಮಾನ್ಯ ಮುದ್ರೆಯಿಂದ

* ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ, ಆನಂದೇನ ಜಾತಾನಿ ಜೀವಂತಿ, ಆನಂದಂ ಪ್ರಯಂತ್ಯಭಿಸಂವಿಶಂತಿ. ||

**ಅಲಂಕೃತವಾಗಿದೆ. ಆದರೆ ಸಾಮಾನ್ಯ ಭಾವಿಕ ಜೀವನವು ಕ್ರೋಧ, ಶೋಕ, ಭಯ, ಅನಾಸ್ಥೆಗಳಿಂದಲೂ ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿ ಆಕರ್ಷಣ,** ಹಸಿತ, ಉತ್ಸಾಹ ಮತ್ತು ಆಶ್ಚರ್ಯಗಳಿಂದಲೂ ತುಂಬಿದೆ.*

ಆದರೆ ನಾವು ಚೈತಸೋತ್ತರ ಪ್ರದೇಶಕ್ಕೆ ಹಾಯ್ದರೆ ನಮ್ಮ ಮಿತಮಾನಸಕ್ಕೆ ಮೀರಿದ ಉನ್ನತತರವೂ ವಿಶದಪರವೂ ಆದ ಮೌಲ್ಯಗಳು ಲಭಿಸುವುವು. ಭೌತಿಕ, ಜೈವಿಕ ಮತ್ತು ಚೈತಸ ಚೈತನ್ಯಗಳು ಲಕ್ಷ್ಯಕ್ಕೆ ತರುವ ಬೆಲೆಗಳಿಗೆ ಪರ್ಯಾಯವಾಗಿ ಭಿನ್ನಮೂಲ್ಯಗಳು ಗಣನೆಗೆ ಬರುವುವು. **ಸಾತ್ವಿಕ** ಮಾನವನು ತನ್ನ ಅಧಶ್ಚೈತನ್ಯವನ್ನು ಉದಾತ್ತೀಕರಿಸುತ್ತಾನೆ. ಅವನು ತನ್ನ ಮೌಲಿಕ ಆಕರ್ಷಪ್ರವೃತ್ತಿ ಅಥವಾ ರತಿಯನ್ನು ಉದಾತ್ತವಾದ ಸ್ನೇಹ-ಪ್ರೇಮ ಭಾವನೆಗೆ ತಿರುಗಿಸುತ್ತಾನೆ; ಹಸಿತ ಅಥವಾ ಹಾಸವನ್ನವನು ದಯಾ-ದಾಕ್ಷಿಣ್ಯ ನಿರ್ಭರವಾದ ಹಾಸ್ಯವನ್ನಾಗಿ ಪರಿವರ್ತಿಸಿಕೊಳ್ಳುತ್ತಾನೆ; ಉತ್ತೇಜನ-ಉತ್ಸಾಹಗಳನ್ನು ಗಭೀರ, ದಾಂತ, ಪ್ರಸನ್ನ ಧ್ಯೇಯಸಾಧನ ಪ್ರಯತ್ನವನ್ನಾಗಿ ಮಾರ್ಪಡಿಸಿಕೊಳ್ಳುತ್ತಾನೆ; ಕೀಳೂ ಹೀನವೂ ಆದುದರ ಬಗ್ಗೆ ಇರುವ ದ್ವೇಷ ತಿರಸ್ಕಾರಗಳನ್ನು ಉದಾತ್ತ ನಿರ್ಲಿಪ್ತತೆಗೆ ತಿರುಗಿಸುತ್ತಾನೆ. ಗಭೀರ ಪ್ರಣಿಧಾನ ಕಾಲದಲ್ಲವನು ದಿವ್ಯ ಶಾಂತಿ ಮತ್ತು ಆನಂದಗಳ ಈಷತ್ಸ್ಪರ್ಶವನ್ನು ಪಡೆಯುತ್ತಾನೆ. ಆದರೆ ಶಾಂತಿಯು ತನ್ನ ಹಿರಣ್ಮಯ ಪತತ್ರಗಳಿಂದ ಅವನೆದೆಯನ್ನು ತಣಿಸಬಂದಿಲ್ಲ, ಆದು ಅವನ ಸ್ಥಿರಸ್ವತ್ತಾಗಿಲ್ಲ. ಆನಂದವೋ ಅಪೂರ್ವಾತಿಥಿ, ಆಗೊಮ್ಮೆ ಈಗೊಮ್ಮೆ ಬರುವ ವಿರಲ ಸಂದರ್ಶಕ.

ಸತ್ಯಾನ್ವೇಷಿಯು ಕೇವಲ ಸಾತ್ವಿಕವಾಗಿ ಬಾಳುವುದನ್ನು ಮೀರಿ ಚಿನ್ಮಯ ಚೈತನ್ಯವನ್ನು ಬೆಳೆಸಿಕೊಂಡಾಗ ಅವನ ಆನಂದ ಹೆಚ್ಚಿನ ಘನರೂಪವನ್ನು ಪಡೆಯುವುದು. ವಿಶ್ವಾತ್ಮನ ಬಗ್ಗೆ ತಿಳಿವಳಿಕೆಯನ್ನು ಹೆಚ್ಚಿಸಿಕೊಂಡು ಅದರತ್ತಣ ಭಾವನೆಯನ್ನು ಉತ್ಕರ್ಷಿಸಿಕೊಂಡು ಅದನ್ನು ವ್ಯಕ್ತಿಯನ್ನು ಭಜಿಸುವಂತೆ ಭಜಿಸಿದರೆ ಅವನಿಗೆ ಭಕ್ತಿಭಾವನೆ ( ಅಥವಾ ಅರವಿಂದರೆಂಬ ‘ ದೇವಮುಖಭಾವನೆಗಳು ’) ಪ್ರಾಪ್ತವಾಗುವುದು. ಅಂಥ ಪ್ರಾಪ್ತಿಗವನು ದೈವಶಕ್ತಿಯನ್ನು ಪ್ರಭು, ತಂದೆ, ಗೆಳೆಯ, ತಾಯಿ ಮತ್ತು ಪ್ರಿಯ ಅಥವಾ ಪ್ರೇಯಸಿ ಎಂದು ಭಾವಿಸಿ ಉಪಾಸಿಸಬೇಕು.† ಈ ತಾದಾತ್ಮ್ಯದೃಷ್ಟಿಯಿಂದ ಆತನು ತನ್ನ ಮಾನಸಿಕ, ಭಾವಿಕ ಮತ್ತು ಬಾಹ್ಯಜೀವಿತಗಳನ್ನು ಪುನಾರಚಿಸಲು ಯತ್ನಿಸುತ್ತಾನೆ. ಕ್ರಮೇಣ ಅವನ ಚಿತ್ತು ಅಗ್ರಚೈತನ್ಯವನ್ನು ಪ್ರಭಾವಿಸಿದ ಹಾಗೆ ಅಗಾಧವೂ ಸ್ಥಾಯಿಯೂ ಆದ **ಶ್ರದ್ಧೆ** ಅವನಲ್ಲಿ ಉತ್ಪನ್ನವಾಗುವುದು. **ಧ್ಯೇಯನಿಷ್ಠೆ-**

---

Cf. * ೧. ರೌದ್ರಃ ಕ್ರೋಧಸ್ಥಾಯಿಭಾವೋ ರಕ್ತೋ ರುದ್ರಾಧಿದೈವತಃ ॥

೨. ಇಷ್ಟನಾಶಾದನಿಷ್ಟಾಪ್ತೇಃ ಕರುಣಾಖ್ಯೋ ರಸೋ ಭವೇತ್ ॥
ಶೋಕೋऽತ್ರ ಸ್ಥಾಯಿಭಾವಃ ಸ್ಯಾತ್ ॥

೩. ಭಯಾನಕೋ ಭಯಸ್ಥಾಯಿಭಾವೋ ಭೂತಾಧಿದೈವತಃ ॥

೪. ಜುಗುಪ್ಸಾ ಸ್ಥಾಯಿಭಾವಸ್ತು ಬೀಭತ್ಸಃ ಕಥ್ಯತೇ ರಸಃ ॥

೫. ಉತ್ತಮಪ್ರಕೃತಿಪ್ರಾಯೋ ರಸಃ ಶೃಂಗಾರ ಇಷ್ಯತೇ । ಸ್ಥಾಯಿಭಾವೋ ರತಿಃ ॥

೬. ಹಾಸ್ಯೋ ಹಾಸಸ್ಥಾಯಿಭಾವಃ ಶ್ವೇತಃ ಪ್ರಮಥ ದೈವತಃ ॥

೭. ಉತ್ತಮ ಪ್ರಕೃತಿರ್ವೀರ ಉತ್ಸಾಹಸ್ಥಾಯಿಭಾವಕಃ ॥

೮. ಅದ್ಭುತೋ ವಿಸ್ಮಯಸ್ಥಾಯಿಭಾವೋ ಗಂಧರ್ವದೈವತಃ ॥

Cf. † ಶ್ರವಣಂ ಕೀರ್ತನಂ ತಸ್ಯ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥

**ಅವಧಾನಗಳೂ** ಕಡೆಗೆ ಅವನಿಗೆ ಪ್ರಾಪ್ತವಾಗಿ* ಆತ್ಮಪ್ರಕಾಶದ ಗಭೀರ, ನಿಷ್ಪಂದ ಸಾಕ್ಷಾತ್ಕಾರ ಅಥವಾ ಅನುಭವವೂ ಉಂಟಾಗುವುದು; ಏಕಾಗ್ರ ಪ್ರಣಿಧಾನಬಲದಿಂದ ಆ ಸರ್ವತಂತ್ರ ಸ್ವತಂತ್ರವೂ ಪರಿಪೂರ್ಣವೂ ನಿರ್ವಿಕಲ್ಪವೂ ನಿರುಪಾಧಿಕವೂ ಆದ ವಿಶ್ವಾತ್ಮ ಅಥವಾ ಈಶ್ವರಾತ್ಮದ ಅಪರೋಕ್ಷಾನುಭೂತಿ ಲಭಿಸುವುದು.

ನಮ್ಮ ಬದುಕು-ಬಗೆಗಳಲ್ಲಿಯ ಸುಖ-ದುಃಖ, ರಾಗ-ದ್ವೇಷಗಳ ಅನುಭವದ ಶಕ್ತಿಯು, ಹೋಲಿಸಿ ನೋಡಿದರೆ, ಸ್ವಲ್ಪವಾಗಿ ತೋರುತ್ತದೆ. ನಮ್ಮ ರಸಾಸ್ವಾದಶಕ್ತಿಯೂ ಪರಿಮಿತವೇ. ಈ ಬಗೆಗಳು ಸಾಮಾನ್ಯವಾದ ತಾಟಸ್ಥ್ಯಸ್ಥಲದಿಂದ ಉದ್ಭವಿಸುವುವು; ಮತ್ತು ಅದರಿಂದ ಅದರತ್ತಲೇ ಯಾವಾಗಲೂ ಎಳೆಯಲ್ಪಡುತ್ತಿರುವುವು. ಆದರೆ ಅವು ಚೈತಸೋತ್ತರ ಲೋಕಗಳನ್ನು ಹೊಕ್ಕಹಾಗೆ ಗಭೀರತರ ಚಿನ್ಮಯ ಸಂವೇದನಾಶಕ್ತಿಯಿಂದ ಉನ್ನತ, ವಿಶಾಲ ಅಥವಾ ಅಗಾಧವಾಗಿ ಸ್ಥಿರತೆವೆತ್ತು ನಿಲ್ಲುವ ರಸಸ್ಥಲವನ್ನು ಸತ್ಯಾನ್ವೇಷಿ ಮುಟ್ಟಬಲ್ಲನು. ಅದು ಸಾಮಾನ್ಯ ತಟಸ್ಥವೃತ್ತಿಯ ಲೋಕವಲ್ಲ; ಶುದ್ಧ ಆಧ್ಯಾತ್ಮಿಕ ನಿರಂಕುಶತೆ ಮತ್ತು ನಿರ್ವೃತಿ ಲಭಿಸುವ ಲೋಕ. ಅಲ್ಲಿಂದಲೇ ಕಲಾದೃಷ್ಟಿಯ, ಭಾವಿಕತೆಯ, ರಸಿಕತೆಯ ಚೇತನೆ (ಅವಲೋಕನ) ವಿವಿಧ ಪ್ರಕಾರವಾಗಿ ಉದಯಿಸುವುದು.‡ ಇದೇ ಮೂಲಭೂತವಾದ ಪ್ರಥಮ ಪರಿವರ್ತನ.

ಈ ಮಧ್ಯಸ್ಥಿತಿಯಲ್ಲಿ ಮತ್ತೊಂದು ಪರಿವರ್ತನ ಉಂಟಾಗುವುದು. ವಿಷಯಗಳ ಪ್ರತ್ಯೇಕತೆ, ಜಾತೀಯ ಅನ್ಯೋನ್ಯ ಸಂಘರ್ಷ, ಪರಸ್ಪರ ವ್ಯಾಹತಿ ಮುಂತಾದ ಅಧಶ್ಚೇತನೆಗೆ ಸೇರಿದ ಅಂಶಗಳಿಗೆ ಬದಲಾಗಿ ಸಾಧಕನ ಚಿತ್ತವು ವಿಶ್ವಜನೀನ ಭಾವನೆಯತ್ತ ತಿರುಗುವುದು, ಸಾಕಲ್ಯಭಾವ ನಿರ್ಭರವಾಗುವುದು. ಕಲೆಗಾರನಿಗೇನೋ ಬಾಹ್ಯವಿಷಯಗಳಾದ ಸರಿತ್‌ಸಮುದ್ರಪಾಷಾಣಾದಿಗಳು ಹೊಲಸು, ಕುರೂಪ, ಅಸಹ್ಯ ಅಥವಾ ಸಾದಾ ಎಂದು ಸಾಮಾನ್ಯದೃಷ್ಟಿಯಲ್ಲಿ ಗೋಚರವಾಗುತ್ತದೆ. ಅವನು ಅವುಗಳಲ್ಲಿ ಸೌಂದರ್ಯ-ಆನಂದಗಳನ್ನು ಕಂಡಾನು ಪಡೆದಾನು. ಆದರೆ ಇದು ಅವನ ಕಲಾಕ್ಷೇತ್ರ ಪರಿಮಿತವಾದ ಒಂದು ವಿಧದ ವಿಶಿಷ್ಟ ಪ್ರಸಾದವೆನ್ನಬಹುದು. ಸಾಧಕನು ಚೈತಸೋತ್ತರ ಚೈತನ್ಯಪ್ರಭೆಯಲ್ಲಿ ಹೆಚ್ಚುಹೆಚ್ಚಾಗಿ ಹೊಕ್ಕಾಗ ಆ ನೋಟಗಳು ದರ್ಶನಧರ್ಮ, ನಿಸರ್ಗಧರ್ಮಗಳಾಗುತ್ತ ಹೋಗುವುವು. ಚೈತಸ ಮತ್ತು ಜೈವಿಕ ಚೈತನ್ಯಗಳು ಆಧ್ಯಾತ್ಮಿಕ ಪ್ರಭಾವಕ್ಕೆ ನೇರವಾಗಿ ಒಳಗಾಗುವ ಮೊದಲೇ ಅವುಗಳ ಮೇಲೆ ಅವು ಕಾಣಿಸಿಕೊಳ್ಳಬಹುದು.ಆದರವು ಅಲ್ಲಿ ಕ್ಷಣಿಕಾನುಭವ ಅಸ್ಥಿರ ಅಥವಾ ಸ್ವಕಾರ್ಯಕ್ಷೇತ್ರದಲ್ಲಿ ಪರಿಮಿತ ಮತ್ತು ಇಡಿ ಅಸ್ತಿತ್ವವನ್ನು ಮುಟ್ಟದವು ಎನಿಸುತ್ತವೆ. ಅವು ಕೇವಲ ಈಷದವಲೋಕನಗಳು; ದರ್ಶನಪರಿವರ್ತನವಲ್ಲ ಅಥವಾ ನಿಸರ್ಗಪರಿಭೇದವಲ್ಲ.

ಪರಮಪದ ಅಥವಾ ಅತ್ಯುನ್ನತಲೋಕದಲ್ಲಿ ಸಾಧಕನು ಸತ್ಯಮಯನಾಗುತ್ತಾನೆ. ಈಗ ಅವನು ಸ್ವೇಚ್ಛಾನುಸಾರ ಸುಲಭವಾಗಿ ಪರಮೋನ್ನತ ಚೈತನ್ಯಾವಸ್ಥೆಗೆ, ಸಚ್ಚಿದಾನಂದ ಸೋಪಾನಕ್ಕೆ ಏರಬಲ್ಲನು ಮತ್ತು ಭೌತಿಕ ಜಗತ್ತಿನಲ್ಲಿ ಸ್ವದರ್ಶನಾನುಸಾರವಾಗಿ ಬದಲಾವಣೆಗಳನ್ನು ಮಾಡಲೆಂದು ಅದೇ ಮೇರೆಗೆ ಆ ಪರಾತ್ಪರ ಧಾಮದಿಂದ ಕೆಳಗಿಳಿಯಲೂ ಬಲ್ಲನು. ತಾದಾತ್ಮ್ಯಭಾವ ಅಥವಾ ಸಾಯುಜ್ಯಾನುಭವದ ದೆಸೆಯಿಂದ ಸತ್ಯದ ನಿಕಟ ಪರಿಚಯ ಅವನಿಗಿರುತ್ತದೆ ಮತ್ತು ಅದೇ ಕಾಲದಲ್ಲಿ ವಿಶದವಾದ ಪರಚೈತನ್ಯವು ಅವನಲ್ಲಿ ತುಂಬಿರುತ್ತದೆ. ಪರಚೈತನ್ಯದಲ್ಲಿ ವೈಶ್ವರಸ (ಸೌಂದರ್ಯ), ವೈಶ್ವಪ್ರೇಮ, ವೈಶ್ವಾನಂದಗಳ ಅನುಭವದ ಸುದೃಢವಾದ ಪ್ರಥಮ

---

Cf. * ಅದೃಷ್ಟಮವ್ಯವಹಾರ್ಯಮಗ್ರಾಹ್ಯಮಲಕ್ಷಣಮಚಿಂತ್ಯಮವ್ಯಪದೇಶ್ಯಮೇಕಾತ್ಮಪ್ರತ್ಯಯಸಾರಂ ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ ॥

Cf. ‡ ನಿಯತಿಕೃತ ನಿಯಮರಹಿತಾಂ ಹ್ಲಾದೈಕಮಯೀಮನನ್ಯಪರತಂತ್ರಾಂ ।
ನವರಸರುಚಿರಾಂ ನಿರ್ಮಿತಿಮಾಧದತೀ ಭಾರತೀ ಕವೇರ್ಜಯತಿ ॥

ತಳಪಾಯ ನಿರ್ಮಿತವಾಗಿರುತ್ತದೆ. ಪರಪ್ರಜ್ಞಾಸ್ಥಲವನ್ನು ಮುಟ್ಟಿದ ಆಧ್ಯಾತ್ಮಿಕ ಪುರುಷನು ಎತ್ತ ತಿರುಗಿದರೂ ಅವನಿಗೆ ಎಲ್ಲ ವಿಷಯಗಳನ್ನು ತಡಹುತ್ತಲೂ ಎತ್ತುತ್ತಲೂ ಇರುವ, ಅವುಗಳ ಮೂಲಕ ಅಭಿವ್ಯಕ್ತವಾಗುತ್ತಿರುವ ಮತ್ತು ಅವನ ದಿವ್ಯಕಲಾವಲೋಕನಕ್ಕಾಗಿ ಅವನ್ನು ತಕ್ಕಂತೆ ಒಂದು ಕ್ಷೇತ್ರವಾಗಿ ಅಥವಾ ಜ್ಞೇಯಸಮುಚ್ಚಯವಾಗಿ ರೂಪಿಸುತ್ತಲೂ ಇರುವ ವಿಶ್ವಸೌಂದರ್ಯವೇ ಕಾಣುತ್ತದೆ; ಅವನಿಂದ ಒಂದು ಬಗೆಯ ವಿಶ್ವಪ್ರೇಮ ಹರಿದು ಎಲ್ಲದರತ್ತಲೂ ಸಾಗುವುದು; ಅವನ ವಸುಧೈವ ಕುಟುಂಬಕ ಭಾವನೆ ಉದ್ಬುದ್ಧವಾಗುವುದು. ಜಗತ್ತುಗಳನ್ನು ಸೃಜಿಸಿ ಪೋಷಿಸಿದ ಆನಂದನನ್ನವನು ಅನುಭವಿಸುತ್ತಾನೆ.* ಪ್ರತಿಯೊಂದು ಆಕೃತಿಯೂ ಅವನಿಗೆ ನಮಗೆ ತಿಳಿದುದಕ್ಕಿಂತ ಗಭೀರತರವೂ ವಿಶದತರವೂ ಆದ ಸೌಂದರ್ಯದಿಂದ ಕೂಡಿದ್ದಾಗಿ ತೋರುತ್ತದೆ. ಪರಚೈತನ್ಯವು ನಮ್ಮ ಬದುಕುಬಗೆಗಳಿಗೆ ತೋರುವ ಅರ್ಥವನ್ನಲ್ಲದೆ ಪ್ರತಿಯೊಂದು ವಿಷಯದಲ್ಲಿಯೂ ನೇರವಾಗಿ ಹೊಕ್ಕು ಅದರ ಆಂತರಿಕ ಮತ್ತು ಬಾಹ್ಯ ಅರ್ಥಗಳನ್ನು ಗ್ರಹಿಸುತ್ತದೆ. ಇದರಿಂದ ಅದಕ್ಕೆ ವಿಷಯದ ಸಹಜಸತ್ಯವಷ್ಟೇ ಅಲ್ಲದೆ ಅದರ ಆನಂದವೂ ಲಭಿಸುವುದು. ಅದು ಸರ್ವಾಂತರ್ಯಾಮಿಯಾದ ದಿವ್ಯಶಕ್ತಿಯ ಮುಖವನ್ನು ಎಲ್ಲದರಲ್ಲೂ ಕಂಡು ನಿರುಪಮಾನಂದ ಭಾಗಿಯಾಗುವುದು. ಅದು ಬ್ರಹ್ಮನ ಸರ್ವೈಕ್ಯ, ಸರ್ವಸಹಾನುಭೂತಿ, ಸರ್ವಪ್ರೇಮ ಸರ್ವಾನಂದಗಳನ್ನು ಅನುಭವಿಸುತ್ತದೆ. ಅತ್ಯುನ್ನತವೂ ಅತಿ ಪರಿಪೂರ್ಣವೂ ಅನುಭವವೊಂದರಲ್ಲದು ಎಲ್ಲ ವಿಷಯಗಳ ಸತ್ತಾಮಾತ್ರ ಸ್ವರೂಪವನ್ನೂ ಚೈತನ್ಯವನ್ನೂ ಆನಂದವನ್ನೂ ಅವುಗಳ ಪ್ರತಿಯೊಂದು ಅಣುವೂ ಸಚ್ಚಿದಾನಂದಮಯವಾಗಿರುವುದನ್ನೂ ಕಾಣುವುದು.‡

ಪರಚೈತನ್ಯದ ಕೆಲ ಮೆಟ್ಟುಗಳಲ್ಲಿ ಪ್ರಧಾನವಾಗಿ ಚೈತಸಾಂಶ ಕಾರ್ಯಪರವಾಗಿ ಆಧ್ಯಾತ್ಮಿಕ ಅದ್ಭುತಾರ್ಥಗಳನ್ನು ಗೌಣಗೊಳಿಸಿದಾಗ ಸತ್ಯವೂ ರಸವೂ (ಸೌಂದರ್ಯವೂ) ಬೇರೆ ಬೇರೆ ಎಂಬ ವಿವೇಕ ಸರಿಯೆನ್ನಿಸುವುದು, ತರ್ಕಶುದ್ಧವಾಗುವುದು. ಚೈತನ್ಯದ ಮುಖ್ಯ ಶಕ್ತಿಗಳನ್ನು ಬೇರ್ಪಡಿಸಿ ಆ ಪ್ರತಿಯೊಂದು ಶಕ್ತಿಗೂ ಪ್ರತ್ಯೇಕವಾದ ಪೂರ್ಣಾಭಿವೃದ್ಧಿಯನ್ನೊದಗಿಸಿ, ಪೂರ್ಣ ಸಂತೃಪ್ತಿಯನ್ನಿತ್ತು, ಅದರ ಅಂತಃಶಕ್ತಿಯನ್ನೂ ಅರ್ಥವನ್ನೂ ಪ್ರಕಟಿಸುವುದು ಪರಚೈತನ್ಯದ ಒಂದು ಮುಖ್ಯ ಕರ್ತವ್ಯವೇ ಆಗಿದೆ. ಆದರೆ ಅದರ ಮತ್ತೊಂದು ಕಾರ್ಯದಿಂದ ವಿಭಕ್ತ ಪದಾರ್ಥಗಳು, ಪ್ರತ್ಯೇಕೀಕೃತ ವಸ್ತುಗಳು ಪುನಃ ಒಂದುತ್ತವೆ, ವಿರುದ್ಧದ್ವಂದ್ವಗಳು ಸಮರಸ ಹೊಂದುತ್ತವೆ. ಆ ಮಟ್ಟದಲ್ಲಿ ಸತ್ಯವು ಸದಾ ಸುಂದರ (ರಸವತ್) ಮತ್ತು ಸುಂದರವು ಸದಾ ಸತ್ಯ. ಅವುಗಳ ಅತ್ಯುನ್ನತ ಸಾಯುಜ್ಯ ಪರಾತ್ಪರ ಚೈತನ್ಯದಲ್ಲೇ ಸಾಧ್ಯವೆಂದು ತೋರುತ್ತದೆ.†

(ಪ್ರಕಟವಾಗಲಿರುವ 'Sri Aurobindo Memorial Volume' ಎಂಬ ಗ್ರಂಥಕ್ಕಾಗಿ ಶ್ರೀ. ವಿ. ಕೃ. ಗೋಕಾಕ ಅವರು ಬರೆದ ಆಂಗ್ಲ ಲೇಖನದ ೫, ೬ ಮತ್ತು ೭ನೆಯ ಭಾಗಗಳ ಅನುವಾದ.)

ಅನುವಾದಕರು:
**ಬಿ. ಎಚ್. ಶ್ರೀಧರ**

---

Cf. * ಸ ಮೋದತೇ ಮೋದನೀಯಂ ಹಿ ಲಬ್ಧ್ವಾ ವಿವೃತಂ ಸದ್ಮ ನಚಿಕೇತಸಂ ಮನ್ಯೇ ॥

Cf. ‡ ೧. ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ ।
ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥

೨ ಕವಿಂ ಪುರಾಣಮನುಶಾಸಿತಾರಮಣೋರಣೀಯಾಂಸಮನುಸ್ಮರೇದ್ಯಃ ।
ಸರ್ವಸ್ಯ ಧಾತಾರಮಚಿಂತ್ಯರೂಪಮಾದಿತ್ಯವರ್ಣಂ ತಮಸಃ ಪರಸ್ತಾತ್ ॥

Cf. † ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ । ತದಾತ್ಮಾನಂ ಸ್ವಯಮಕುರುತ । ತಸ್ಮಾತ್ ತತ್ ಸುಕೃತಮುಚ್ಯತ ಇತಿ । ಯದ್ವೈತತ್ ಸುಕೃತಂ । ರಸೋ ವೈ ಸಃ । ರಸಂ ಹ್ಯೇವಾಯಂ ಲಬ್ಧ್ವಾಽನಂದೀ ಭವತಿ ....... ಅಥ ಸೋಽಭಯಂ ಗತೋ ಭವತಿ । ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ ಅಥ ತಸ್ಯ ಭಯಂ ಭವತಿ । ತತ್ವೇವ ಭಯಂ ವಿದುಷೋಽಮನ್ವಾನಸ್ಯ ॥

# ಮಾತೃಮಹಿಮಾ

೧

‘ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ’
ಪ್ರಸಿದ್ಧೋಕ್ತಿಶ್ಚೇಯಂ ಪ್ರತಿಘಟಕ ದೃಷ್ಟಾಂತ ಬಹುಲಾ ।
ಪರಂ ಮಾತಾ ಸೇಯಂ ನಿಯಮ ಮಹಿಮೋದ್ವರ್ತನ ಪರಾ
ಪರಾರ್ಥಾಯ ಸ್ವಾರ್ಥಂ ತ್ಯಜತಿ ಪರವಾತ್ಸಲ್ಯಹೃದಯಾ ॥

೨

ಮಹಾಶ್ರದ್ಧಾಮೇಧಾ ಶ್ರುತಪರಮಪಾಂಡಿತ್ಯಪಟುತಾ
ಮಹಾಶಿಷ್ಯಾ ಶ್ರೀಮದ್ಗುರು ಚರಣ ಸೇವಾನಿರಲಸಾ ।
ಮಹಾಮಾತಾ ಸಾಧ್ವೀ ಪತಿತಜನನೀ ಫ್ರೆಂಚತನಯಾ
ಪರಾರ್ಥಾಯ ಸ್ವಾರ್ಥಂ ತ್ಯಜತಿ ಪರವಾತ್ಸಲ್ಯಹೃದಯಾ ॥

೩

ನಿರಾಸಾದ್ಯಸ್ಥಾನಂ ನಿರತಿಶಯ ಪಾವಿತ್ರ್ಯನಿಲಯಂ
ಗುರುಂ ಗುರ್ವೀ ಪ್ರೇಮ್ಣಾ ಸ್ವವಶಮಕರೋದ್ಯಾ ಚ ವಿದುಷೀ ।
ಮಹಾಕಾರುಣ್ಯಾಕ್ಷೀ ಭುವನಮಿದಮಾನಂದಯತಿ ಸಾ
ಪರಾರ್ಥಾಯ ಸ್ವಾರ್ಥಂ ತ್ಯಜತಿ ಪರವಾತ್ಸಲ್ಯಹೃದಯಾ ॥

೪

ಜಗದ್ರಕ್ಷಾದಕ್ಷಂ ತನಯಮರವಿಂದೋಪಮಧಿಯಂ
ಪ್ರಸೂಯೇತ ಸ್ತ್ರೀತಿ ಪ್ರಕಟಿತಸದಿಚ್ಛಾ ವಿಲಸತಿ ।
ಮಹಾಸಿದ್ಧಿರ್ಮೋಕ್ಷಸ್ಥಿತಿಗತಿರುದಾತ್ತಪ್ರಣಯಿನೀ
ಪರಾರ್ಥಾಯ ಸ್ವಾರ್ಥಂ ತ್ಯಜತಿ ಪರವಾತ್ಸಲ್ಯಹೃದಯಾ ॥

## ಸಮರ್ಪಣ

೧

ಮಹೋದಾರಧ್ಯೇಯಗ್ರಥಿತಸುವಿಚಾರಾ ಸುಮಧುರಾ
ಮಹಾವಾಗ್ಮ್ಯಾ ಯೋಗಿಪ್ರವರಭಣಿತಾ ಕಾಯಸಹಿತಾ ।
ಸುಖಾರಾಧ್ಯಾ ಶಿಷ್ಯೈರಪರಿಮಿತಸಂಖ್ಯೈಃ ಸುಚರಿತಾ
ಪರಾರ್ಥಾಯ ಸ್ವಾರ್ಥಂ ತ್ಯಜತಿ ಪರವಾತ್ಸಲ್ಯಹೃದಯಾ ॥

೨

ಕೃತಗ್ರಂಥಾ ವಿದ್ಯಾವಿನಯವಿಲಸತ್ ಕಾವ್ಯವದನಾ
ಕೃತಿರ್ಯೋಗೀಂದ್ರಸ್ಯ ಸ್ವಯಮತುಲಸೌಂದರ್ಯಸದನಾ ।
ಕೃತಜ್ಞಾನಾನಂದಾ ನಿಕೃತವಿಕೃತಜ್ಞಾ ಸಮುದಯಾ
ಪರಾರ್ಥಾಯ ಸ್ವಾರ್ಥಂ ತ್ಯಜತಿ ಪರವಾತ್ಸಲ್ಯಹೃದಯಾ ॥

೩

ನಿರಾಕಾರ ಜ್ಯೋತಿರ್ವಲಯಗತಮೂರ್ಧ್ನೀ ನಿರುಪಮಾ
ನಿರಾಭಾಸ ಜ್ಯೋತ್ಸ್ನಾಸದೃಶಹಸಿತಾ ಪುಣ್ಯವನಿತಾ ।
ನಿರಾವಾರಾ ನಿಂದಾಸ್ತುತಿವಿಮುಖಚೇತಾ ನಿಜಗುಣಾ
ಪರಾರ್ಥಾಯ ಸ್ವಾರ್ಥಂ ತ್ಯಜತಿ ಪರವಾತ್ಸಲ್ಯಹೃದಯಾ ॥

೪

ಸದಾ ಸತ್ಯಪ್ರಜ್ಞಾವಿಹಿತಸುಕಲಾಸಾಧನಪರಾ
ಸದಾರಾಮಾ ರಾಮಾ ಸದಸದುಪರಿಸ್ಥಾ ಸುವಚನಾ ।
ಸದೋತ್ಸಾಹಸ್ತನ್ಯಾಮೃತಸವನವಕ್ಷೋಜ ವಿಭವಾ
ಪರಾರ್ಥಾಯ ಸ್ವಾರ್ಥಂ ತ್ಯಜತಿ ಪರವಾತ್ಸಲ್ಯಹೃದಯಾ ॥

ಪಾಂಡಿಚೇರೀಪುರೇ ಭಾಸ್ವತ್ಪಾಂಡುವರ್ಣಾ ವಿರಾಜತೇ ।
ಪರಮಾರ್ಥಪರಾಣಾಂ ಸಾ ಪರಂಧಾಮೇತಿ ವಿಶ್ರುತಾ ॥

**—ಬಿ. ಎಚ್. ಶ್ರೀಧರ**

---

### ಶ್ರೀ ಅರವಿಂದ ದರ್ಶನದಲ್ಲಿ

# ಮಾನವನ ಅಂತಿಮ ಭವಿತವ್ಯ*



## ಶ್ರೀ ಅರವಿಂದರ ಬೃಹದ್‌ದೃಷ್ಟಿ

೧೯೨೦ರಲ್ಲಿ ಲೋಕಮಾನ್ಯ ಟಿಳಕರು ನಿಧನ ಹೊಂದಿದರು. ಮಹಾತ್ಮಾಜಿಯವರ ನೇತೃತ್ವದಲ್ಲಿ ಅಸಹಕಾರ ಆಂದೋಲನವು ರಭಸದಿಂದ ಸಾಗಿತು. ಆದರೆ ೧೯೨೨ ರಲ್ಲಿ ಗಾಂಧಿಯವರು ಸೆರೆಮನೆಯನ್ನು ಸೇರಿದಾಗ ಚಳವಳಿಯು ಸ್ತಬ್ಧವಾಯಿತು. ಹಿಮ್ಮೆಟ್ಟುತ್ತಿದ್ದ ಜನತೆಯನ್ನು ಒಟ್ಟುಗೂಡಿಸಿ ಹುರಿದುಂಬಿಸಿ ಮುಂಬರಿಯುವಂತೆ ಮಾಡುವ ನಾಯಕರು ತಲೆದೋರಲಿಲ್ಲ. ಇಂಥ ಪ್ರಸಂಗದಲ್ಲಿ ದಿವಗಂತ ದೇಶಬಂಧು ಚಿತ್ತರಂಜನ ದಾಸರು, ಶ್ರೀ ಅರವಿಂದರು ಪುನಃ ರಾಜಕೀಯ ಮುಖಂಡರಾಗಬೇಕೆಂದು ಆಮಂತ್ರಿಸಿದರು. ಶ್ರೀ ಅರವಿಂದರು ಅವರಿಗೆ ಉತ್ತರವನ್ನೀಯುತ್ತ ಈ ಅರ್ಥದಲ್ಲಿ ಬರೆದರು: ಎಲ್ಲ ಜೀವನ ಪ್ರವೃತ್ತಿಗಳ ಆಧಾರವೆಂದರೆ, ಆಧ್ಯಾತ್ಮಿಕವೇ—ಯೋಗದಿಂದ ಮಾತ್ರ ಲಭಿಸಬಹುದಾದ ಒಂದು ಹೊಸ ಪ್ರಜ್ಞೆ. ಈ ಹೊಸ ತಳಹದಿಯನ್ನು ಏರುವ ವರೆಗೆ ಇಡೀ ಮಾನವ ಕುಲವು ತುಳಿಯುತ್ತಿರುವ ನಿರರ್ಥಕ ಚಕ್ರಪಥ ವನ್ನು ಬಿಟ್ಟು ಮಾನವನು ಎಂದಿಗೂ ಹೊರಗೆ ಬರಲಾರ. ಜಗತ್ತಿನ ಸಲುವಾಗಿ ಈ ಮಹತ್ತಾದ ವಿಜಯವನ್ನು ದೊರಕಿಸುವುದೇ ಭಾರತದ ದೈವನಿಯತ ಕಾರ್ಯವೆಂದು ನಾನು ತಿಳಿದಿದ್ದೇನೆ. ಆದರೆ ಈ ಮಹಾ ಪ್ರಜ್ಞೆಯ ಕ್ರಿಯಾಸಾಮರ್ಥ್ಯದ ನಿರ್ದಿಷ್ಟ ಸ್ವರೂಪ ಲಕ್ಷಣವೇನು ? ಅದರ ಸತ್ಯವು ಪ್ರಭಾವಿ ಯಾಗಲು ಅವಶ್ಯವಾದ ಪೂರ್ವಪರಿಸ್ಥಿತಿ ಯಾವುದು ? ಅದು ಹೇಗೆ ಅವತರಿಸುವಂತೆ ಮಾಡಬೇಕು, ಸಜ್ಜುಗೊಳಿಸಬೇಕು, ಸಂಘಟಿಸಬೇಕು, ಜೀವನದತ್ತ ಹೊರಳಿಸಬೇಕು ? ಈ ಮಹತ್ ಪರಿವರ್ತನೆಗೆ ಪ್ರಕೃತ ಉಪಕರಣಗಳಾದ ಮನ-ಪ್ರಾಣ-ದೇಹಗಳು ತಕ್ಕ, ಶುದ್ಧ ಹಾಗು ಪೂರ್ಣ ವಾಹಕಗಳಾಗುವಂತೆ ಹೇಗೆ ಮಾಡಬೇಕು ? ಈ ಸಮಸ್ಯೆಯನ್ನೇ ನನ್ನ ಅನುಭವದ ಮೂಲಕ ಬಗೆಹರಿಸಲು ಪ್ರಯತ್ನಿಸುತ್ತಿದ್ದೇನೆ. . . . ಪೂರ್ಣ ಭದ್ರವಾದ ಅಸ್ತಿಭಾರದ ಮೇಲೆಯಲ್ಲದೆ ನಾನು ಕಟ್ಟಲು ಬಯಸುವುದಿಲ್ಲ. ಈ ಹೊಸ ಕ್ರಿಯಾ ಶಕ್ತಿಯನ್ನು, ಪ್ರೇರಣೆಯನ್ನು ಸಂಪೂರ್ಣವಾಗಿ ಪಡೆಯುವ ವರೆಗೆ ನಾನು ಬಾಹ್ಯ ಕ್ಷೇತ್ರವನ್ನು ಪ್ರವೇಶಿಸು ವುದಿಲ್ಲ.

ಈ ಪತ್ರದ ಸರಣಿಯು ಶ್ರೀ ಅರವಿಂದರ ದೃಷ್ಟಿವೈಶಾಲ್ಯವನ್ನೂ ದೃಢಸಂಕಲ್ಪ–ಸಂಯಮಗಳನ್ನೂ ಮಾನವಶ್ರೇಯೋಭಿಲಾಷೆಯನ್ನೂ ನಿಚ್ಚಳವಾಗಿ ಸೂಚಿಸುತ್ತಿದೆ. ಅವರು ಇಲ್ಲಿ ಕೇವಲ ಭಾರತದ ದಾಸ್ಯ ವಿಮೋಚನೆ, ಭಾರತೀಯರ ಅಭ್ಯುದಯಗಳನ್ನು ಚಿಂತಿಸದೆ ಮಾನವಕೋಟಿಯು ಇಂದು ಎದುರಿಸಬೇಕಾಗಿ

* ಈ ಲೇಖವು ಈ ಮೊದಲು 'ಕರ್ಮವೀರ' ವಾರಪತ್ರಿಕೆಯ ೧೯೫೨ರ ದೀಪಾವಳಿ ಸಂಚಿಕೆಯಲ್ಲಿ ಪ್ರಕಟವಾಗಿದೆ. —ಲೇ.

ಬಂದ ಪ್ರಶ್ನೆಗಳಿಗೆ ಮೂಲ ಪರಿಹಾರವನ್ನು ಹುಡುಕಲು ಹೊರಟಿರುವರು. ವೈಯಕ್ತಿಕ ಮೋಕ್ಷದ ಮಾತಂತಿರಲಿ, ಸ್ವಜನ ಸ್ವದೇಶಾಭಿಮಾನಗಳ ಎಲ್ಲೆಯನ್ನು ದಾಟಿ, ಮಾನವ ಕುಲದ ಅಭಿನ್ನ ಐಕ್ಯ ವನ್ನು ಕಂಡು, ನೂತನ ಜ್ಞಾನಶಕ್ತಿಗಳಿಂದ ತುಂಬಿದ ಒಂದು ನವಸೃಷ್ಟಿಯನ್ನೇ ತಮ್ಮ ಲಕ್ಷ್ಯವನ್ನಾಗಿ ತೋರಿಸಿರುವರು.

ಕೇವಲ ರಾಜಕೀಯ ಸಾಮಾಜಿಕ ಆರ್ಥಿಕ ಧೋರಣೆಗಳಿಂದ ಅಗತ್ಯವಾದ ಶಕ್ತಿಯನ್ನು ಗಳಿಸ ಲಾಗುವುದಿಲ್ಲ. ಒಂದು ವೇಳೆ ರಾಜಕೀಯ ಸ್ವಾತಂತ್ರ್ಯವನ್ನು ಆ ಮೂಲಕ ಪಡೆಯಬಹುದಾದರೂ ರಾಷ್ಟ್ರೀಯ ಜೀವನದ ಸ್ವರೂಪವನ್ನು, ಅಂತರಂಗವನ್ನು ಶುದ್ಧಗೊಳಿಸಲು, ಬಲಪಡಿಸಲು ಆಗದು. ಒಂದು ದೇಶದ, ಒಂದು ಜನಾಂಗದ ಸಮಸ್ಯೆಯನ್ನು ಬಿಡಿಸಬೇಕಾದರೆ ಕಾಲಪರಿಸ್ಥಿತಿಗಳಿಗಷ್ಟೇ ಹೊಂದುವ ಉಪಾಯ ಗಳನ್ನು ಹೂಡಿದರೆ ಆಗದು. ಸಮಾಜದ ರೋಗರುಜಿನಗಳಿಗೆ ತಾತ್ಕಾಲಿಕ ಚಿಕಿತ್ಸೆ ಮಾಡಿ ಸಮಾಧಾನ ವಿಲ್ಲ. ವಿಷಯವೃಕ್ಷದ ರೆಂಬೆ ಕೊಂಬೆಗಳನ್ನು ಕಡಿದರಾಗದು. ಅದರ ಬೇರನ್ನೇ ಕಡಿಯಬೇಕು. ಮಾನವ ಜೀವನದ ಮೂಲ ಪ್ರೇರಣೆಗಳನ್ನು ಶೋಧಿಸಿ, ಮಾನವನ ಸ್ವಭಾವವನ್ನು ಕೂಲಂಕಷ ಪರೀಕ್ಷಿಸಿ, ಮಾನ ವನ ಗುರಿ ಏನೆಂಬುದನ್ನು ನಿಷ್ಕರ್ಷಿಸಿ, ಸ್ವಭಾವಕ್ಕನುಗುಣವಾದ ನೀತಿಯನ್ನು ಅನುಸರಿಸಿದರೆ ಮಾತ್ರ ವಿಪತ್ತನ್ನು ತೊಲಗಿಸಬಹುದು.

ಇಂಥ ಪ್ರಜ್ಞೆಯನ್ನು, ವಿವೇಕವನ್ನು ಪಡೆಯಬೇಕು. ಇಂಥ ಶಕ್ತಿಯನ್ನು ಲಭ್ಯಮಾಡಿಕೊಳ್ಳ ಬೇಕು. ಈ ಜ್ಞಾನ-ಶಕ್ತಿಗಳನ್ನು ಜೀವನಕ್ಕೆ ಅನ್ವಯಿಸಿ, ಜೀವನವು ದೈವೀ ಲೀಲೆಯಾಗಿ ಪರಿಣಮಿಸು ವಂತೆ ಮಾಡಬೇಕು. ಅಂದರೆ ಮಾನವನ ಬಗ್ಗೆ ವಿಚಾರವನ್ನೂ ವಿಚಾರಕ್ಕಿಂತ ಹಿರಿದಾದ ಅನುಭವವನ್ನೂ ಅನಂತದತ್ತ ಚಾಚಿದ್ದಾರೆ ಶ್ರೀ ಅರವಿಂದರು. ಈ ದೃಷ್ಟಿಯ ಹಿರಿಮೆಯನ್ನು, ಆಳ-ಎತ್ತರ-ಅಗಲಗಳನ್ನು ಕೇವಲ ಬುದ್ಧಿಯ ಮಟ್ಟದಿಂದ ತಿಳಿಯಲು ಸಾಧ್ಯವಿಲ್ಲ. ಅಂತಿಮ ಭವಿತವ್ಯದ ಕಲ್ಪನೆ—ಭರವಸೆಗಳಿಲ್ಲ ದಿದ್ದರೆ ಅತಿ ಸಮೀಪಕಾಲದ ಭವಿತವ್ಯವನ್ನಾದರೂ ನಿರ್ಣಯಿಸಲಾಗುವುದಿಲ್ಲ. ದೈನಿಕ ವ್ಯವಹಾರವಂತೂ ಕಣ್ಣುಮುಚ್ಚಾಲೆಯಾಟವಾಗುವುದು.

## ಮಾನವಸಿದ್ಧಾಂತ

ಹಾಗಾದರೆ ಮಾನವ ಸಿದ್ಧಾಂತವೇನು ? ಸೃಷ್ಟಿಯಲ್ಲಿ ಮಾನವನ ಸ್ಥಾನವೇನು ? ಅವನ ಗುರಿ ಏನು ? ಸಾಧನೋಪಾಯಗಳೇನು ? ಜೀವನ ಸಾರ್ಥಕ್ಯವೆಂದರೇನು ? ಪ್ರಗತಿಯ ನಿಜವಾದ ಅರ್ಥವೇನು ? ಈ ಪ್ರಶ್ನೆಗಳು ಮಾನವನಷ್ಟೆ ಹಳೆಯವಾಗಿವೆ. ಪೂರ್ವ-ಪಶ್ಚಿಮದವರು ಭಿನ್ನ-ಭಿನ್ನ ಅಭಿಪ್ರಾಯಗಳನ್ನು ವ್ಯಕ್ತಮಾಡಿರುವರು. ಪಾಶ್ಚಾತ್ಯರ ದೃಷ್ಟಿ ಮುಖ್ಯವಾಗಿ ಭೌತಿಕ ದೃಷ್ಟಿ. ಅವರ ಮತದಂತೆ ಭೌತಿಕವೇ ಮೂಲ ಸರ್ವಸ್ವವಾಗಿದ್ದು ಮಾನವನ ಮನಸ್ತತ್ವವಾದರೂ ಅದರ ಒಂದು ಪ್ರತಿಕ್ರಿಯೆಯಾಗಿ ಮೂಡಿ ಬಂದಿದೆ. ಶ್ರೀ ಅರವಿಂದರು ಹೀಗೆ ತಿಳಿಯುವುದಿಲ್ಲ. ಮಾನವನೆಂದರೆ ಭೌತಸೃಷ್ಟಿಯಲ್ಲ. ಅವನು ಆತ್ಮ ಸ್ವರೂಪಿ, ಭಗವದಂಶ, — ಶರೀರ ಮನಗಳು ಹೊದಿಕೆಗಳು ಮಾತ್ರ. ಮಾನಸಿಕ ನೈತಿಕ, ವ್ಯಾವಹಾರಿಕ, ದೈಹಿಕ, ಮತ್ತಿತರ ವಿಕಾಸವು ಎಡೆಬಿಡದೆ ಸಾಗಿದ್ದರೂ ಈ ಎಲ್ಲ ಕಾರ್ಯಕಲಾಪಗಳು ಆತ್ಮದ ಅಭಿವ್ಯಕ್ತ ಶಕ್ತಿಗಳೇ. ಇವುಗಳ ಮೊತ್ತವು ಆತ್ಮದ ಸರ್ವಸ್ವವಲ್ಲ. ಉತ್ಕರ್ಷ ಪಥದಲ್ಲಿ ಆತ್ಮವು ಇವಕ್ಕೂ ಹಿರಿದಾದ ಸ್ಥಿತಿಯನ್ನು ಪಡೆದು ಅಧ್ಯಾತ್ಮಜೀವಿಯಾಗಿ ಪ್ರಕಾಶಿಸುವುದು. ಈ ಅಂತಿಮ ದೆಸೆಯೇ ಮಾನವನ ಪರ ಮಾರ್ಥ ಪುರುಷಾರ್ಥಗಳೆಂದು ಬಗೆಯಲ್ಪಟ್ಟಿದೆ.

ಎರಡನೆಯದಾಗಿ ಶ್ರೀ ಅರವಿಂದರು ಮಾನವಸ್ವಭಾವವನ್ನು ಅತಿ ಸುಲಭವೆಂದಾಗಲಿ, ಕ್ಲಿಷ್ಟತ್ವ ರಹಿತವೆಂದಾಗಲಿ ಎಣಿಸುವುದಿಲ್ಲ. ಅವನು ಬಹುಮುಖ ಜೀವಿ. ಅವನ ಪ್ರಕೃತಿಯು ಎಷ್ಟೇ ಸರಳ ಕಂಡರೂ ಸಪ್ತತತ್ವಗಳ ರಚನೆಯಾಗಿದೆ. ಮಾನವ ಪ್ರಗತಿಯು ನಿಶ್ಚಿತವಾಗಬೇಕಾದರೆ ಸೂಕ್ಷ್ಮದಿಂದ ಸ್ಥೂಲದತ್ತ ಧಾವಿಸಬೇಕು. ತೊಡಕನ್ನು ನಿವಾರಿಸಬೇಕೆಂದು, ಅವಸರದಲ್ಲಿ ಫಲವನ್ನು ಪಡೆಯಬೇಕೆಂದು ನಾವು ವಿವಿಧ ಸಂಪದ್ಯುಕ್ತವಾದ ಮಾನವ ಸ್ವಭಾವವನ್ನು ಒಂದೇ ಸೂತ್ರಕ್ಕೆ, ಒಂದೇ ನಿಯಮಕ್ಕೆ ಇಳಿಸಿದರೆ ತೊಡಕಿನ ನಿವಾರಣೆಯಾಗುವುದಿಲ್ಲ. ನಾವು ಫಲವಂಚಿತರಾಗುತ್ತೇವೆ. ನಮ್ಮ ವಿಕಾಸವೇ ಕುಗ್ಗುವುದು. ತಾಳ್ಮೆಯಿಂದ ನಾವು ಒಂದೊಂದು ಅಂಶದಲ್ಲಿಯೂ ಪ್ರತಿಯೊಂದು ಅಂತಸ್ತಿನಲ್ಲಿಯೂ ( in all the parts and planes of being ) ಸಾಧನೆಗೈಯಬೇಕು.

ಮೂರನೆಯದಾಗಿ ಶ್ರೀ ಅರವಿಂದರು ಮಾನವನನ್ನು ಸ್ಥಿರಪ್ರಾಣಿಯೆಂದು ಬಗೆಯುವುದಿಲ್ಲ. Man is a transitional being ಎಂದು ಅವರು ಹೇಳುತ್ತಾರೆ. ಈಗಿನ ಸ್ಥಿತಿಯಲ್ಲಿ ಅಂತರವಾಗುವುದು ಅನಿವಾರ್ಯ. ಮಾನವನು ಪರಿಪೂರ್ಣನಲ್ಲ, ಹಾಗೆಂದೇ ಅವನಲ್ಲಿ ಬದಲಾವಣೆ ಆಗಲೇಬೇಕು. ಅವನ ಕೆಳಗೆ ಎಷ್ಟೋ ದರ್ಜೆಗಳಿವೆ. ಮೇಲೆಯಾದರೂ ಎಷ್ಟೋ ದರ್ಜೆಗಳಿರುವವು. ಮಾನವನ ಲೋಕ ಮಧ್ಯಲೋಕ, ಪರಿವರ್ತನೆಯ ಕ್ಷೇತ್ರ; ಮಾನವನು ಒಂದು ದೆಸೆಯಿಂದ ಇನ್ನೊಂದು ದೆಸೆಗೆ ಸಾಗುತ್ತಿರುವ ಪಯಣಿಗ.

## ಪಾಶ್ಚಾತ್ಯರ ಕಲ್ಪನೆ

ಈ ಸಮ್ಯಗ್‌ದೃಷ್ಟಿಗೆ ವಿರುದ್ಧವಾಗಿ ಪಾಶ್ಚಾತ್ಯರಲ್ಲಿ ಮೊನ್ನೆಮೊನ್ನೆಯ ವರೆಗೆ ಸಾಮಾನ್ಯವಾಗಿ ಒಪ್ಪಲಾದ ತತ್ವವೆಂದರೆ—ಮಾನವನು ಸ್ವಯಂಪೂರ್ಣನು, ಸ್ವತಂತ್ರನು ಎಂದು. ಮಾನವನ ತರ್ಕಬುದ್ಧಿಯೇ ಅವನ ವೈಶಿಷ್ಟ್ಯ; ಅದೇ ಅಂತಿಮ ಪ್ರಮಾಣ. ಇದು ಗ್ರೀಕರ ಯುಗದಿಂದ ನಡೆದುಬಂದ ಪರಂಪರೆ. ಆ ಜನರಿಗೆ ಬಾಹ್ಯಸೌಂದರ್ಯವೇ, ಆಕಾರಸೌಷ್ಠವವೇ ಶೀಲವಾಗಿತ್ತು. ಗ್ರೀಕರ ಸೌಂದರ್ಯಾರಾಧನೆಯನ್ನು ಕಡೆಗಣಿಸಿ ಆಧುನಿಕ ಯುರೋಪಿಯನರು ಉಪಯುಕ್ತತೆ–ವ್ಯಾವಹಾರಿಕತೆಗಳನ್ನೇ ತಮ್ಮ ದೈವತವನ್ನಾಗಿ ಮಾಡಿಕೊಂಡಿರುವರು. ಆಧುನಿಕ ಶಾಸ್ತ್ರೀಯ ಮನೋವೃತ್ತಿಯ ಮುಖ್ಯ ಲಕ್ಷಣಗಳೆಂದರೆ—ವಸ್ತುಗಳ ನಿರೀಕ್ಷಣೆ, ಪೃಥಕ್ಕರಣ, ವರ್ಗೀಕರಣ, ಊಹಾಪೋಹ, ರುಜುವಾತು, ಒಂದು ತತ್ವದ ನಿರೂಪಣೆ. ಪ್ರತಿ ಹೆಜ್ಜೆಗೂ ಮನಃಪ್ರಧಾನ ತರ್ಕದ ಮುದ್ರೆ ಇರಬೇಕು. ವಿಚಾರಯುಗವು ಅತ್ಯಗಾಧ ಭೌತಿಕ ಪ್ರಗತಿಯನ್ನು ಸಾಧಿಸಿದೆ. ಪ್ರಯೋಗಶಾಲೆಗಳಲ್ಲಿ ನಡೆಸಿದ ಪ್ರಯೋಗಗಳ ಪರಿಣಾಮವಾಗಿ ಮಾನವನ ಸ್ಥೂಲ ಶರೀರದ ಸರ್ವ ಅವಯವಗಳ ರಚನೆ, ಕ್ರಿಯೆಗಳನ್ನು ತಿಳಿದದ್ದಾಗಿದೆ. ಆದರೆ ಮಾನವನ ಅಂತರಂಗವನ್ನು, ಮೂಲ ಸತ್ವ–ಸ್ವಭಾವಗಳನ್ನು ತಿಳಿಯಲಾಗಿಲ್ಲ. ಕುತೂಹಲವು ಮಾತ್ರ ಕ್ರಮೇಣ ಹೆಚ್ಚುತ್ತಿದೆ. Man in the Modern World, The Condition of Man, The Diagnosis of Man, The Inequality of Man, Man the Unknown—ಇತ್ತೀಚೆಗೆ ಪ್ರಕಟವಾದ ಈ ಹೆಸರಿನ ಕೆಲವು ಪುಸ್ತಕಗಳಿಂದ ಇದು ವಿದಿತವಾಗುತ್ತದೆ. ಆಂತರಿಕ ನಿರೀಕ್ಷಣೆಯು ಆರಂಭವಾಗಿದೆ. ವ್ಯಕ್ತಿಯುಗವು (ಸ್ವಾತಂತ್ರ್ಯಯುಗವು, ವಿಚಾರಯುಗವು) ಆಂತರಿಕ ಅವಸ್ಥೆಯನ್ನು ಮುಟ್ಟಿದೆ. ಕಾವ್ಯ, ಕಲೆ, ಶಿಕ್ಷಣ ರಂಗಗಳಲ್ಲಿ ಈ ಮನೋವೃತ್ತಿಯ ಪ್ರಥಮಾವಿಷ್ಕಾರವನ್ನು ಕಾಣಬಹುದು.

ಮಾನವನ ಅಪೂರ್ಣತೆ ಅಸ್ಥಿರತೆಗಳು ಯುರೋಪಿನ ವಿಚಾರವಂತರಲ್ಲಿ, ೧೯ ನೆಯ ಶತಮಾನದಲ್ಲಿ, ಜರ್ಮನ ನೀಟ್ಸೆ ಒಬ್ಬನಿಗೇ ಹೊಳೆದವು. Man is something that hath to be surpassed—

ಎಂಬ ಮಾತಿನಲ್ಲಿ ಮಾನವನ ಬಗ್ಗೆ ಅವನು ಸಂಶಯವನ್ನು ಸೂಚಿಸಿದನು. ಅತಿಮಾನವ ವಾದವನ್ನು ಮೊದಲು ಪ್ರಸ್ತಾಪಿಸಿದವನು ನೀಟ್ಸೆಯೇ. ಇಪ್ಪತ್ತನೆಯ ಶತಮಾನದಲ್ಲಿ ಪ್ರಸಿದ್ಧ ನಾಟಕಕರ್ತನಾದ ಬರ್ನಾರ್ಡ ಷಾನು Man and Superman ಎಂಬ ನಾಟಕದಲ್ಲಿ ಅತಿಮಾನವನ ಸಿದ್ಧಾಂತವನ್ನು ಪುನಃ ಪ್ರಸಂಗರಂಗದಲ್ಲಿ ತಂದ. ಹೀಗೆ ಅಲ್ಲಲ್ಲಿ ಈ ವಿಚಾರಸರಣಿಯು ತಲೆದೋರಿದ್ದರೂ ಮಾನವಸ್ವಭಾವದ ಪೂರ್ಣ ಜ್ಞಾನವಿಲ್ಲದುದರಿಂದ ಹಾಗು ಅತಿಮಾನವನ ನಿರ್ದಿಷ್ಟ ದೈವಿಕ ಕಲ್ಪನೆ ಇಲ್ಲದುದರಿಂದ ಪಾಶ್ಚಾತ್ಯರಲ್ಲಿ ಇದು ಕೇವಲ ಒಂದು ಮೋಜಿನ ಭಾವನೆಯಾಗಿ ಉಳಿದಿದೆ. ಇಂಥ ಭಾವನೆಗಳ ಸಂಚಾರವು ಶ್ರೀ ಅರವಿಂದರ ಯೋಗಸಿದ್ಧ ಸತ್ಯಸಾಕ್ಷಾತ್ಕಾರಗಳ ಸೃಷ್ಟಿಪ್ರಕರಣಕ್ಕೆ ಯೋಗ್ಯವಾದ ಪ್ರಸ್ತಾವನೆಯಾಗಿದೆ.

## ಮಾನವನ ಸದ್ಯಃಸ್ಥಿತಿ

ಮಾನವನ ಅಂತಿಮ ಭವಿತವ್ಯವನ್ನು ನಾವು ಗೊತ್ತುಪಡಿಸಬೇಕಾದರೆ ಅವನ ಸದ್ಯದ ಸ್ಥಿತಿಯನ್ನರಿಯಬೇಕು. ಇಂದು ಯಾವುದೋ ಒಂದು ವಿಷಮ ಪರಿಸ್ಥಿತಿಯನ್ನು ವ್ಯಕ್ತಿಯೂ ಸಮಾಜವೂ ಎದುರಿಸುತ್ತಿವೆ; ಹಾಗೆಂತಲೇ ಜಗತ್ತಿನಲ್ಲಿ ನಾವು ನೋಡುತ್ತಿರುವ ತಾರುಮಾರುಗಳು. ಜಗವೇ ಕ್ಷೋಭೆಗೆ ಈಡಾಗಿದೆ. ಬೇರೆ ಬೇರೆ ಜನರು ತಮ್ಮ ತಮ್ಮ ದೃಷ್ಟಿಕೋನಗಳಿಂದ ಈ ಪರಿಸ್ಥಿತಿಯನ್ನು ಅವಲೋಕಿಸಿ, ಪರ್ಯಾಲೋಚಿಸಿ, ಹೀಗಾಗಲು ಕಾರಣವೇನು, ಇದು ಹೇಗೆ ಕೊನೆಗಾಣಬೇಕು ಎಂಬುದನ್ನು ವಿವೇಚಿಸಿದ್ದಾರೆ. ರಾಜಕೀಯ ಗಂಡಾಂತರವೆಂದು ಕೆಲವರು, ಸಾಂಸ್ಕೃತಿಕ ಗಂಡಾಂತರವೆಂದು ಕೆಲವರು, ಸಾಮಾಜಿಕ ಗಂಡಾಂತರವೆಂದು ಮತ್ತೆ ಕೆಲವರು, ಧಾರ್ಮಿಕ ಗಂಡಾಂತರವೆಂದು ಇನ್ನೂ ಕೆಲವರು, ಆರ್ಥಿಕ ಗಂಡಾಂತರವೆಂದು ಅನೇಕರು ಅಭಿಪ್ರಾಯ ಪಟ್ಟಿರುವರು. ಅವರು ತಿಳಿದ ಮೇರೆಗೆ ಸಲಹೆಯನ್ನಾದರೂ ಕೊಟ್ಟಿರುವರು. ಈ ವಿವಿಧ ಸೂಚನೆಗಳಲ್ಲಿ ಸತ್ಯದ ಅಂಶವಿದ್ದರೂ ಇಡೀ ಸತ್ಯವು ಈ ಪ್ರತ್ಯೇಕ ದೃಷ್ಟಿಗೆ ಕಾಣಿಸುವುದಿಲ್ಲ. ಬೇನೆ ಏನು ಎಂದು ಗೊತ್ತಾದರೆ ಅಲ್ಲವೇ ಅದನ್ನು ಗುಣಪಡಿಸಬಹುದು ?

ಶ್ರೀ ಅರವಿಂದರು ತಮ್ಮ ವಿಶಾಲ ಸಮಗ್ರದೃಷ್ಟಿಯನ್ನು ಹರಹಿ,—ಕೇವಲ ಒಂದು ದೇಶ ಒಂದು ಜನಾಂಗದವರಿಗೆ ಬಂದಿರುವುದಲ್ಲ ಈ ಕುತ್ತು, ಇದು ಆ ಈ ಜೀವದ ಪ್ರಸಂಗಕ್ಕೆ ಮಾತ್ರ ಸಂಬಂಧಿಸಿದ ತೊಡಕಲ್ಲ, ಮಾನವನು ಇಂದು ಎದುರಿಸುತ್ತಿರುವುದು ಒಂದು evolutionary crisis—ಅವನ ವಿಕಾಸ ಕ್ರಮದಲ್ಲಿ ಉಂಟಾಗಿರುವ ವಿಷಮ ಪರಿಸ್ಥಿತಿ ಎಂದು ಹೇಳುತ್ತಾರೆ. ಮನಃಪ್ರಧಾನ ಮಾನವನ ಯುಗ ಮುಗಿದಿದೆ, ಮನವನ್ನೇ ಅವಲಂಬಿಸಿ ಯೋಜಿಸಿದ ಸರ್ವ ಪ್ರಯತ್ನಗಳೂ ವಿಫಲವಾಗಿವೆ. ಮಾನವನ ಭವಿತವ್ಯವೇ ಇಂದು ನಿಷ್ಕರ್ಷೆಯಾಗಬೇಕು. ಕೆಲವು ದಿಸೆಗಳಲ್ಲಿ ನಾವು ಅಪಾರ ಬೆಳವಣಿಗೆಯನ್ನು ಸಾಧಿಸಿದ್ದೇವೆ. ಇತರ ದಿಸೆಗಳಲ್ಲಿ ಪ್ರಗತಿಯು ತಡೆಯಾಗಿ ಮಾನವನು ದಿಙ್ಮೂಢನಾಗಿ ನಿಂತಿದ್ದಾನೆ. ಮುಂದಿನ ಹೆಜ್ಜೆ ತಿಳಿಯದಾಗಿದೆ. ರಜಃಪ್ರೇರಿತನಾಗಿ ಆವರಣ ಸನ್ನಿವೇಶಗಳನ್ನು ಅಳತೆ ಮೀರಿ ಕಲ್ಪಿಸಿಕೊಂಡಿದ್ದಾನೆ. ಅವುಗಳಿಗೆ ಹೊಂದಿಕೊಂಡು ಹೋಗುವ ಸಾಮರ್ಥ್ಯವಿಲ್ಲ. ತನ್ನ ಪರಿಮಿತ ಬುದ್ಧಿಗೆ ಮೀರಿದ ನಾಗರಿಕತೆಯನ್ನು ನಿರ್ಮಿಸಿದ್ದಾನೆ. ಸ್ವಾರ್ಥ ಹಸಿವು ಹಂಬಲಗಳ ಕೀಳುತೃಪ್ತಿಗೆ ನಾಗರಿಕತೆಯನ್ನು ಒಗ್ಗಿಸಿಕೊಂಡಿದ್ದಾನೆ. ಇದನ್ನು ಮೀರಿದ ಸ್ಥಿತಿಯನ್ನು ಪಡೆಯಲು ಆವಶ್ಯಕವಾದ ಸೂಕ್ಷ್ಮದೃಷ್ಟಿ, ಸಹಜ ಜ್ಞಾನ, ಕ್ರಿಯಾಶಕ್ತಿಗಳು ಮೂಡಿಬಂದಿಲ್ಲ. ಭೌಗೋಲಿಕ ದೃಷ್ಟಿಯಿಂದ ನಾವು ಒಬ್ಬೊಬ್ಬರ ನೆರೆಯವರಾಗಿದ್ದೇವೆ. ವಿಶ್ವಶಕ್ತಿಯನ್ನು ವೈಜ್ಞಾನಿಕ ಸಂಶೋಧನೆಗಳು ಒದಗಿಸಿಕೊಟ್ಟಿವೆ. ಆದರೆ

ಈ ವಿಶ್ವಶಕ್ತಿ ಭಾರಿಡಾರವನ್ನು ಉಪಯೋಗಿಸುವ ಮಾನವನು ಸ್ವಭಾವತಃ ಕ್ಷುಲ್ಲಕನಾಗಿರುವನು, ದೃಷ್ಟಿಹೀನನಾಗಿರುವನು. ವಿರೋಧ ವಿಚಾರಗಳ ಘರ್ಷಣೆಯಿಂದ ಉಂಟಾದ ಅವ್ಯವಸ್ಥೆ, ವೈಯಕ್ತಿಕ-ಸಾಂಘಿಕ ಅಗತ್ಯ ಅಡಚಣೆಗಳ ಹೋರಾಟ, ವ್ಯಕ್ತಿಗಳ, ವರ್ಗಗಳ, ಜನಾಂಗಗಳ ಸ್ವೇಚ್ಛಾಚಾರ, ಆರ್ಥಿಕ, ಸಾಮಾಜಿಕ, ರಾಜಕೀಯ, ಯುಕ್ತಿಗಳ-ತತ್ವಗಳ ವಾದವಿವಾದ-ವಿಪುಲ ಪ್ರಚಾರ, ಪಕ್ಷಪಂಗಡಗಳ ಅವಸರದ ಕೂಗುಗಳು,—ಇವೆಲ್ಲವುಗಳ ಗೊಂದಲವು ಜಗದ್ವ್ಯಾಪಿಯಾಗಿದೆ. ಪರರನ್ನು ಪೀಡಿಸುವುದು, ತಾವೇ ಪೀಡೆಗೆ ಗುರಿಯಾಗುವುದು, ಕೊಲ್ಲುವುದು, ತಾವೇ ಕೊಲೆಗೆ ಗುರಿಯಾಗುವುದು, ಹೇಗಾದರೂ ಪ್ರಚಾರ ಮಾಡುವುದು,—ಇವು ಈ ಕಾಲದ ರೀತಿನೀತಿಗಳಾಗಿವೆ. ಆಧುನಿಕ ಮಾನವನ ಜೀವನ ಕ್ಷೇತ್ರವು ಅನಿವಾರ್ಯವಾಗಿ ವಿಶ್ವವೈಶಾಲ್ಯವನ್ನು ತಾಳಿದೆ. ಆದರೆ ಅಹಂಭಾವ ಪ್ರತ್ಯೇಕತೆ ಭಿನ್ನತೆಗಳನ್ನೇ ಮುದ್ರೆಯನ್ನಾಗಿ ಹೊತ್ತ ಮಾನವನು ವಿಶ್ವಶಕ್ತಿಗೆ ಆವಾಹನ ಮಾಡಿದರೆ, ಬಾಗಿಲು ತೆರೆದರೆ, ಅದರ ಪರಿಣಾಮವಾಗಿ ತಾಳಮೇಳವಿಲ್ಲದೆ ಉಕ್ಕಿಬರುವ ಭಾವನೆಗಳ-ಪ್ರವೃತ್ತಿಗಳ ತೆರೆಗಳಿಗೆ, ಕಸಕಡ್ಡಿ ಕೊಚ್ಚಿಕೊಂಡು ಬರುವ ಪ್ರವಾಹಕ್ಕೆ ಅವಕಾಶ ಮಾಡಿಕೊಟ್ಟಹಾಗಾಗುವುದು. ಈ ಬಿಕ್ಕಟ್ಟಿನಿಂದ ಪಾರಾಗಬೇಕಾದರೆ ಹೊಸ ಶಕ್ತಿ-ಜ್ಞಾನಗಳನ್ನು ಸಂಪಾದಿಸಬೇಕು. ಇಲ್ಲವೆ ಸರ್ವನಾಶ ಸಂಭವವಿಸುವುದು. ನೊಂದು ಬೆಂದ ಮಾನವನು ಯಾವ ಯಾವ ವಿಪರೀತ ಪರಿಹಾರ ಮಾರ್ಗಗಳನ್ನು ಹುಡುಕಿರುವನು, ಹಾದಿ ತಪ್ಪಿರುವನು ಎಂಬುದನ್ನು ಶ್ರೀ ಅರವಿಂದರ The Human Cycle, The Ideal of Human Unity ಹಾಗು The Life Divineದ ಕೊನೆಯ ಅಧ್ಯಾಯಗಳನ್ನು ಓದಿದರೆ ಸ್ಪಷ್ಟವಾಗುವುದು. ಅವುಗಳನ್ನು ವಿವರವಾಗಿಯಾಗಲಿ, ಸಂಗ್ರಹವಾಗಿಯಾಗಲಿ ಇಲ್ಲಿ ನಿರೂಪಿಸಲು ಸ್ಥಳವಿಲ್ಲ.

## ಪರಿವರ್ತನೆ

ಮಾನವ ಸ್ವಭಾವದ ಮೂಲಪರಿವರ್ತನೆಯೇ ಆಗಬೇಕು. ಈ ಪರಿವರ್ತನೆಯು ಪ್ರಕೃತಿಯ ಗೂಢೋದ್ದೇಶವೂ ಹೌದು. ಮಾನವನ ಅಭೀಪ್ಸೆಯೂ ಅದನ್ನೇ ಕುರಿತಾಗಿದೆ. ಅಚೇತನದಿಂದ ಆರಂಭವಾದ ವಿಕಾಸವು ಲೋಹಸಸ್ಯಾದಿಗಳಲ್ಲಿ ಇದ್ದೂ ಇಲ್ಲದಂತೆ ಪ್ರಕಟವಾಯಿತು. ಪ್ರಾಣವು ಮೂಡಿಬಂದಿತು. ಆ ತರುವಾಯ ಮನವು ಆವಿರ್ಭವಿಸಿತು. ಇನ್ನು ಮುಂದೆ ಅನಿವಾರ್ಯವಾಗಿ "ಅತಿಮಾನಸ"ವು ಹೊರಹೊಮ್ಮಲೇಬೇಕು. ಜಡಸೃಷ್ಟಿಯಲ್ಲಿ ಲೀನವಾದ ಆತ್ಮಸರ್ವಸ್ವವೂ ಕ್ರಮೇಣ ರೂಪ ತಾಳಲೇಬೇಕು ಆತ್ಮತತ್ವ ಬೇರೆ, ಭೌತಿಕತತ್ವ ಬೇರೆಯಲ್ಲ. ಈ ವಿರಾಟ್ ಸೃಷ್ಟಿಯ ಒಂದು ತುದಿಯಲ್ಲಿ ಆತ್ಮನ ಪರಾತ್ಪರ ಜ್ಯೋತಿಯಾಗಿ ಹೊಳೆಯುತ್ತಿದ್ದರೆ ಮತ್ತೊಂದು ತುದಿಯಲ್ಲಿ ಅದೇ ಆತ್ಮನು ರಾಹುಗ್ರಸ್ತನಾಗಿ (ಸ್ವಾಪೇಕ್ಷೆಯಿಂದ, ಆನಂದ ಸ್ಫುರಿತ ಲೀಲೆಯಲ್ಲಿ) ಜಡದಲ್ಲಿ ಅದೃಶ್ಯನಾಗುವನು. ನಡುವೆ ವಿಕಾಸದ ಬೇರೆ ಬೇರೆ ಹಂತಗಳು.

ವಿಕಾಸ ಕ್ರಮದಲ್ಲಿ ಮಾನವನು ಮುಂದುವರಿಯಬೇಕಾದರೆ ಮನವೆಂಬ ಅನಿಶ್ಚಿತ ಸಂಶಯಾತ್ಮಕ ಪ್ರಮಾಣವನ್ನು ತೊರೆದು ಅದರ ಮೇಲಿನ ಅಂತಸ್ತಿನ ಅತಿಮಾನಸಕ್ಕೆ ಶರಣು ಹೊಗಬೇಕು. ಇದನ್ನು ವೇದಕಾಲದ ಋಷಿಗಳು ಋತ-ಚಿತ್ ಎಂದು ಗುರುತಿಸಿದರು. ಇದನ್ನೇ ಶ್ರೀ ಅರವಿಂದರು Supermind, Truth Consciousness, Knowledge-Will, Real Idea, Gnostic Consciousness ಎಂದು ಅನೇಕ ರೀತಿಯಲ್ಲಿ ಬಣ್ಣಿಸಿರುವರು. ಹಿಂದಿನ ಋಷಿಗಳು, ಶ್ರೀ ಅರವಿಂದರು ಹೇಳುವಂತೆ, ಈ ಶಕ್ತಿಯನ್ನು ಕೆಳಗೆ ತರಲು ಪ್ರಯತ್ನಿಸಲಿಲ್ಲ. ಭೌತಸೃಷ್ಟಿಯ ಪರಿವರ್ತನೆಯ ಉದ್ದೇಶವನ್ನಿಟ್ಟುಕೊಂಡು ವೇದಕಾಲದ ಋಷಿಗಳು ಅತಿಮಾನಸವನ್ನು ಶೋಧಿಸಲಿಲ್ಲ. ವೈಯಕ್ತಿಕವಾಗಿ ಅವರು ಅತಿಮಾನಸ

ಪ್ರಜ್ಞಾಭೂಮಿಗೆ ಏರಲು ಪ್ರಯತ್ನಿಸಿದರು. ಆದರೆ ಅದನ್ನು ಕೆಳಗೆ ತಂದು ಮರ್ತ್ಯಪ್ರಜ್ಞೆಯ ಒಂದು ಶಾಶ್ವತ ಭಾಗವನ್ನಾಗಿ ಮಾಡಲು ಹವಣಿಸಲಿಲ್ಲ.

ಶ್ರೀ ಅರವಿಂದರ ಪೂರ್ಣಯೋಗವು ಎರಡು ಚಲನೆಗಳನ್ನು ಒಳಗೊಂಡಿದೆ. ಒಂದನೆಯದು ಮೇಲೇರುವುದು, ಎರಡನೆಯದು ಕೆಳಗಿಳಿಯುವುದು. ಉನ್ನತ-ಉನ್ನತತರ ಪ್ರಜ್ಞೆಯನ್ನೈದಿ ಆ ಪ್ರಜ್ಞೆಯನ್ನು ಮನ-ಪ್ರಾಣಗಳಲ್ಲಿ ತರುವುದಲ್ಲದೆ ಅಂತಿಮದೆಸೆಯಲ್ಲಿ ಶರೀರದಲ್ಲಿಯೂ ತರಬೇಕು. ಅತ್ಯುನ್ನತ ಪ್ರಜ್ಞಾಭೂಮಿ ಎಂದರೆ ಅತಿಮಾನಸ. ಅದನ್ನು ಕೆಳಗೆ ತಂದಾಗಲೇ ಮರ್ತ್ಯಪ್ರಜ್ಞೆಯ ದೈವೀ ಪರಿವರ್ತನೆಯು ಸಾಧ್ಯ. ಭೌತಸೃಷ್ಟಿಗೂ ಪ್ರಾಣಸೃಷ್ಟಿಗೂ ಎಷ್ಟು ವ್ಯತ್ಯಾಸವಿರುವುದೋ, ಪ್ರಾಣಸೃಷ್ಟಿಗೂ ಮಾನವನಿಗೂ ಎಷ್ಟು ವ್ಯತ್ಯಾಸವಿರುವುದೋ ಮಾನವನಿಗೂ ಅತಿಮಾನವನಿಗೂ ಅಷ್ಟೇ ವ್ಯತ್ಯಾಸವಿರುವುದು. ಅತಿಮಾನಸವು ಈಗಲಾದರೂ ನಮ್ಮ ಪ್ರಕೃತಿಯಲ್ಲಿ ಹುದುಗಿಕೊಂಡು ಗುಪ್ತಶಕ್ತಿಯಾಗಿ ಕೆಲಸ ಮಾಡುತ್ತಿದೆ. ಅದು ಪ್ರಕಾಶವಾಗಬೇಕು, ನೇರವಾಗಬೇಕು ನಿರಂತರವಾಗಿ, ನಿರಾತಂಕವಾಗಿ ವರ್ತಿಸಬೇಕು. ಈಗ ಅದು ಕೀಳು ಉಪಕರಣಗಳ ಮೂಲಕ ಅಸ್ಪಷ್ಟವಾಗಿ ಗೋಚರಿಸುತ್ತಿದೆ. ಮನ-ಪ್ರಾಣ-ದೇಹಗಳ ನ್ಯೂನತೆಗಳಿಂದ ಕಳೆಗುಂದಿ-ಬಲಗುಂದಿ ವ್ಯಕ್ತವಾಗುತ್ತಿದೆ. ಆದರೆ ಮೇಲಿನಿಂದ ಅದು ಅವತರಿಸಿದಾಗ, ಅದು ಪೃಥ್ವಿಯನ್ನು ಸುತ್ತು ಮುತ್ತುವುದು, ಒಳಹೊಗುವುದು, ಈಗಿನ ಪ್ರಕೃತಿಯನ್ನೇ ಪಲ್ಲಟಗೊಳಿಸಿ ಪರಿವರ್ತಿಸುವುದು. ಅತಿಮಾನಸ ಭಾಸ್ಕರನು ಕೇವಲ ಮಾನವನ ಶ್ರೇಯಸ್ಸನ್ನು-ಹಿತವನ್ನು ಉದ್ದೇಶವಾಗಿಟ್ಟುಕೊಂಡು ಉದಯಿಸುವುದಿಲ್ಲ; ವಿಶಾಲ ವಿಶ್ವದ ಅಗತ್ಯವೇ ಆತನ ಮುಖ್ಯ ಪ್ರೇರಣೆ. ವಿಕಾಸಕ್ರಮದಲ್ಲಿ ಅತಿಮಾನಸ ತತ್ತ್ವಾವಿಷ್ಕಾರವು ಅನಿವಾರ್ಯವಾದದ್ದು, ವಿಧಿನಿಯತವಾದದ್ದು.

## ಅತಿಮಾನಸದ ಅವತರಣ: ಅದರ ಪ್ರಭಾವ-ಪರಿಣಾಮಗಳು

ಒಮ್ಮೆ ಋತ-ಚಿತ್ರವು, ಸತ್ಯಪ್ರಜ್ಞೆಯು ಇಲ್ಲಿ ಪ್ರತಿಷ್ಠಿತವಾಯಿತೆಂದರೆ ದಿವ್ಯ ಜೀವನ ವಿಕಾಸವು ಸುಗಮವಾಗಿ ಪರಿಣಮಿಸುವುದು. ನಮ್ಮ ನಿತ್ಯ ಅನುಭವದ ವಿಕಾಸಕ್ರಮವು ಮಂದವಾಗಿ ಹಾಗೂ ತೊಡಕಾಗಿ ಕಾಣಿಸುತ್ತಿದೆ. ಏಕೆಂದರೆ ಅದು ಅಚೇತನಾವಸ್ಥೆಯಿಂದ ಮೊದಲಾಗಿ, ಅವಿದ್ಯೆಯಿಂದ ಕುಂಠಿತವಾಗಿ, ತನ್ನ ತಾನರಿಯದ ಯಾವುದೋ ಶಕ್ತಿಯ ಪ್ರಭಾವದಿಂದ ಜರುಗುತ್ತಿದೆ. ಆದರೆ ಮತ್ತೊಂದು ವಿಕಾಸವಿಧಾನವೂ ಇದೆ. ಅವಿದ್ಯೆಯಿಂದ ವಿದ್ಯೆಯತ್ತ, ಕತ್ತಲಿನಿಂದ ಬೆಳಕಿನತ್ತ ಸಾಗುವುದರ ಬದಲು ವಿದ್ಯೆಯ ಮಾರ್ಗವನ್ನು-ಜ್ಯೋತಿಷ್ಪಥವನ್ನು ಅನುಸರಿಸಬಹುದು. ಸತ್ಯ-ಪ್ರಜ್ಞೆಯ ಬೆಳಕಿನಲ್ಲಿ ವೈಷಮ್ಯಗಳು ಮಾಯವಾಗುವವು. ಮನಸ್ಸಿಗೆ ಪರಸ್ಪರವಿರೋಧಿಗಳೆಂದು ತೋರಬಹುದಾದ ಸಂಗತಿಗಳು ಇಲ್ಲಿ ಹೊಸ ಸಂಬಂಧವನ್ನು ತೋರಿಸಿ ಸಮರಸದಿಂದ ಬೆಳಗುವುವು, ಬಾಳುವುವು.

ಅತಿಮಾನಸದ ಅವತರಣದಿಂದ ಎರಡು ಬಗೆಯ ಅದ್ಭುತ ಪರಿವರ್ತನೆಯಾಗುವುದು: ಒಂದು ಜ್ಞಾನಕ್ಕೆ ಸಂಬಂಧಿಸಿದ್ದು; ಇನ್ನೊಂದು ಕ್ರಿಯೆಗೆ ಸಂಬಂಧಿಸಿದ್ದು. ಅತಿಮಾನಸವು ಈ ಉಭಯ ದ್ರವ್ಯಗಳ—ಜ್ಞಾನ-ಶಕ್ತಿಗಳ—ಅಖಂಡ ಸಂಪತ್ತು. ಮನವು ಒಂದಲ್ಲ ಒಂದು ದೋಷಕ್ಕೆ ಗುರಿಯಾಗಿದೆ. ತಿಳಿವಳಿಕೆ ಇದ್ದರೆ, ಅರಿವು ಜಾಗೃತವಾಗಿದ್ದರೆ ಅದನ್ನು ಪ್ರಕಟಗೊಳಿಸುವ, ನೆರವೇರಿಸುವ ಸಾಮರ್ಥ್ಯವಿಲ್ಲ. ಸಾಮರ್ಥ್ಯವಿದ್ದಲ್ಲಿ ತಿಳಿವಳಿಕೆಯು ಅಲ್ಪ ಪ್ರಮಾಣದಲ್ಲಿ ಇರಬಹುದು. ಅತಿಮಾನಸದಲ್ಲಿ ಜ್ಞಾನದೊಡನೆ ಕ್ರಿಯಾಸಾಮರ್ಥ್ಯವೂ ಕ್ರಿಯಾಸಾಮರ್ಥ್ಯದೊಡನೆ ಜ್ಞಾನವೂ ಒಂದೇ ಸಮನಾಗಿ, ಅಭಿನ್ನವಾಗಿ ಪ್ರಕಟಗೊಳ್ಳುವುವು.

ಶ್ರೀ ಅರವಿಂದರ ದೃಷ್ಟಿಯಲ್ಲಿ ಈ ಅತಿಮಾನಸವು ಒಬ್ಬಿಬ್ಬರ ಸ್ವತ್ತಾದರೆ ಉಪಯೋಗವಿಲ್ಲ. ಇಡೀ ಮಾನವಜಾತಿಗೇ ಸೇರಿದ್ದಾಗಿರಬೇಕು. ಅಂದರೆ ಒಮ್ಮೆಲೇ ಮಾನವಕೋಟಿಯು ಅತಿಮಾನಸ ಪ್ರಜ್ಞೆಯನ್ನು

ಲೀಲಾಜಾಲವಾಗಿ ಅದ್ಭುತವಾಗಿ ಪಡೆಯುವುದೆಂದಲ್ಲ. ಅಂದರೆ ಈಗ ಮನಸ್ತತ್ವವನ್ನು ಎಲ್ಲರೂ ಒಪ್ಪಿಕೊಂಡಂತೆ ಮುಂದೆ ಅತಿಮಾನಸ ತತ್ವವನ್ನು ಎಲ್ಲರೂ ಒಪ್ಪಿಕೊಳ್ಳುವರು. ಎಲ್ಲರೂ ಅವರವರ ಪ್ರಮಾಣದಲ್ಲಿ ಅವರವರ ಧಾರಣಾಸಾಮರ್ಥ್ಯವನ್ನನುಸರಿಸಿ ಅದನ್ನು ಪಡೆಯುವರು. ಮನವು ಈಗ ಎಲ್ಲ ಮಾನವರ ವಿಶ್ವಸಂಪತ್ತಾಗಿದ್ದರೂ ಎಲ್ಲರಿಗೂ ಒಂದೇ ಅಳತೆಯ ಬುದ್ಧಿಯಿಲ್ಲ. ಒಂದೆಡೆ ಮನದ ಮೇರುಪ್ರಾಂತಕ್ಕೆ ಸೇರಿದ ಅಸಾಧಾರಣ ಪ್ರತಿಭಾಶಾಲಿ, ಕವಿ, ಪ್ರವಾದಿ ಇದ್ದಾರೆ. ಇನ್ನೊಂದೆಡೆ ಮಂಕಮೂಢರಿದ್ದಾರೆ. ಆದರೆ ಎಲ್ಲರೂ ಮಾನವರೇ. ಇನ್ನು ಮುಂದೆ ಹೊಸ ಮಾನವನಿಗೆ, ಅತಿಮಾನವನಿಗೆ, ಅತಿಮಾನಸ ಪ್ರಜ್ಞೆಯು ಯಾವದೇ ಮಟ್ಟದಲ್ಲಿಯಾದರೂ ಸಾರ್ವತ್ರಿಕ ಸ್ವತ್ತಾಗಿರುವುದು.

ಅತಿಮಾನಸ ಪ್ರಜ್ಞೆಯನ್ನು ಅಳವಡಿಸಿಕೊಂಡ ಸಮಾಜವು ಮುಖ್ಯವಾಗಿ ಮೂರು ಲಕ್ಷಣಗಳನ್ನು ತೋರಿಸುವುದು—Unity, Harmony, Mutuality— ಎಂದರೆ ಏಕತೆ, ಸಾಮರಸ್ಯ, ಪರಸ್ಪರತೆ ಇವುಗಳನ್ನು. ಈ ಮೂರು ಲಕ್ಷಣಗಳು ಆತ್ಮದ ಹೊರವ್ಯೈಯಾಗಿರುವವು; ಕೇವಲ ವ್ಯವಹಾರಧರ್ಮವಾಗಿರುವುದಿಲ್ಲ. ಈ ಗುಣಗಳ ಮೀಮಾಂಸೆಯನ್ನು ವಿಸ್ತರಿಸಲು ಇಲ್ಲಿ ಅವಕಾಶವಿಲ್ಲ. ಶ್ರೀ ಅರವಿಂದರ ಬರಹಗಳಲ್ಲಿ ಇವು ಸರ್ವವ್ಯಾಪಿಯಾದ ಆತ್ಮಚೈತನ್ಯದಂತೆ ಎಲ್ಲೆಡೆಯಲ್ಲಿಯೂ ಸ್ಪಂದಿಸುತ್ತವೆ. ಏಕತೆ ಎಂದರೆ ಸಾಮಾನ್ಯವಾಗಿ ಏಕರೂಪತೆ, ಏಕಪ್ರಕಾರತೆ ಎಂದು ಬಗೆಯುವರು. ಶ್ರೀ ಅರವಿಂದರ ಏಕತೆಯು ಅನಂತ ವಿವಿಧತೆಗೆ ಎಡೆ-ಕೊಡುತ್ತದೆ. Complex Unity ಎಂದು ಅದನ್ನು ವಿಶೇಷವಾಗಿ ವರ್ಣಿಸಿರುವರು. ಏಕತೆಯನ್ನು ಅಂತರ್ಯದಲ್ಲಿ ಅನುಭವಿಸಿ, ಆತ್ಮಸ್ಫುರಣೆಯನ್ನೇ ಜೀವನಸೂತ್ರವನ್ನಾಗಿ ಮಾಡಿಕೊಂಡರೆ, ಹೊರನೋಟಕ್ಕೆ ಏನೇ ಭಿನ್ನತೆ-ವೈವಿಧ್ಯಗಳು ತೋರಿದರೂ ಏಕತೆಯು ಭಂಗವಾಗುವುದಿಲ್ಲ. ಈ ಆಂತರಿಕ ಸತ್ಯತೆಯು ದೀರ್ಘ ಸಾಧನೆಯ ಫಲ. ಮೊದಮೊದಲು ಪರಸ್ಪರ ಲಾಭಕ್ಕಾಗಿ, ಸ್ವಪ್ರಯೋಜನಕ್ಕಾಗಿ ಜನರು ಒಟ್ಟಾಗುವರು. ಇದು ನಿಜವಾದ ಏಕತೆ ಅಲ್ಲ. ಹಿತದಲ್ಲಿ ವ್ಯತ್ಯಾಸವಾದಾಗ, ವ್ಯವಹಾರದಲ್ಲಿ ಒಬ್ಬರಿಗೆ ಲಾಭ–ಇನ್ನೊಬ್ಬರಿಗೆ ನಷ್ಟ ಕಂಡುಬಂದಾಗ, ಈ ಏಕತೆಯು ಮಾಯವಾಗುವುದು. ಎರಡನೆಯದಾಗಿ ಏಕತೆಯು ಧಾರ್ಮಿಕ ಭಾವನೆಯಿಂದ ಪ್ರೇರಿತವಾಗಿರಬಹುದು. ಭ್ರಾತೃತ್ವತತ್ವವೇ ಇದರ ತಳಹದಿ. ಆದರೆ ಭ್ರಾತೃತ್ವ ತತ್ವದಲ್ಲಿಯೂ ಪ್ರತ್ಯೇಕತೆಯು, ಅನ್ಯಥಾ ಭಾವನೆಯು ಸೂಕ್ಷ್ಮವಾಗಿ ಸೇರಿದೆ. ಈ ಪ್ರತ್ಯೇಕ ಭಾವನೆಯು ಸಂಪೂರ್ಣವಾಗಿ ಅಳಿದು ಏಕತೆ ಒಡಮೂಡಬೇಕು. ಇದು ಮೂರನೆಯ ರೀತಿ. ಮೇಲುಮೇಲಿನ ಏಕತೆ ಬಹಳ ಕಾಲ ತಾಳುವುದಿಲ್ಲ. ಏಕತೆಯ ಕೇಂದ್ರವು ಆತ್ಮನೇ ಆಗಿರಬೇಕು. ಸರ್ವಭೂತಾತ್ಮನೇ ಏಕತೆಯ ಶಾಶ್ವತವಾದ ಆಶ್ರಯ. ಹೀಗೆ ಪರಸ್ಪರತೆಯ, ಸಾಮರಸ್ಯದ ತಾತ್ವಿಕ ಅಂದರೆ ಅಂತಿಮ ವಿವೇಚನೆ ಇದೆ ಶ್ರೀ ಅರವಿಂದರ ಗ್ರಂಥಗಳಲ್ಲಿ.

ಅತಿಮಾನಸದ ಅವತರಣವು ದೈವೀ ಪರಿವರ್ತನೆಗೆ ರಹದಾರಿಯನ್ನು ಕಲ್ಪಿಸಿಕೊಡುವುದು. ಈ ಪರಿವರ್ತನೆಗೆ ಆಸ್ಪದವಿಲ್ಲದೆಡೆಯಲ್ಲಿ ಅತಿಮಾನಸವು ಅದರ ಪ್ರಭಾವವನ್ನು ಬೀರುವುದು, ವ್ಯಕ್ತಿಗೂ ವಿಶ್ವಕ್ಕೂ ನಿಕಟ ಸಂಬಂಧವನ್ನು ಮಾಡಿಕೊಡುವುದು. ಮನವನ್ನೂ ಪ್ರಾಣವನ್ನೂ ಅವವುಗಳ ಉನ್ನತ ಪ್ರಸ್ಥಾನಕ್ಕೆ ಒಯ್ಯುವುದು. ಯಾವುದನ್ನು ತನ್ನ ಪೂರ್ಣ ಸತ್ಯವಲಯದಲ್ಲಿ ಸೇರಿಸಿಕೊಳ್ಳಲಾಗುವುದಿಲ್ಲವೋ ಅದನ್ನು ಆ ಪೂರ್ಣತೆಯ ಸಮೀಪಕ್ಕೆ ಬರುವಂತೆ ಮಾಡುವುದು. ಸಮೀಪಕ್ಕೆ ಬರುವುದೂ ಸಾಧ್ಯವಲ್ಲವೆಂದು ತೋರಿದರೆ ಯಾವ ಪೂರ್ವಸಿದ್ಧತೆ ಇದ್ದಲ್ಲಿ ಇದು ಸಾಧ್ಯವೆಂಬುದನ್ನು ಮನಗಾಣಿಸುವುದು. ಅತಿಮಾನಸದ ಪ್ರಭಾವವನ್ನು ಸ್ವೀಕರಿಸಬಲ್ಲವರಷ್ಟೇ ಅಲ್ಲದೆ, ಮನವನ್ನೇ ಅವಲಂಬಿಸುವವರಲ್ಲಿಯೂ ಬದಲಾವಣೆಯಾಗುವುದು. ಬೆಳಕನ್ನು ಬರಮಾಡಿಕೊಳ್ಳಬಲ್ಲ ಮನ, ಇಂಥ ಮುಕ್ತಮನಕ್ಕೆ ಅಧೀನವಾದ ಪ್ರಾಣ, ಈ ಸಮ್ಮಿಳಿತ ಮನ–ಪ್ರಾಣಗಳ ಬೇಡಿಕೆಗಳನ್ನು ವಿಧೇಯವಾಗಿ ನಿರ್ವಹಿಸಬಲ್ಲ ದೇಹ—ಇವು ಹಲಕೆಲವರಿಗೆ ಮಾತ್ರ ಸೇರಿದರೆ ಮಾನವ ಜಾತಿಯ

ಸಾಮಾನ್ಯ ಸೊತ್ತಾಗುವುದು. ಪ್ರಕೃತದಲ್ಲಿ ಮನವು ಪ್ರಧಾನ ತತ್ತ್ವವಾಗಿರುವಂತೆ, ಮಾನವ ವ್ಯಾಪಾರಗಳನ್ನು ಆಳುವ-ಅಳೆಯುವ ಮುಖ್ಯ ದಂಡವಾಗಿರುವಂತೆ, ಉಳಿದ ತತ್ತ್ವಗಳನ್ನು ಲಯಗೊಳಿಸದೆ ತನ್ನ ಅಂಕಿತದಲ್ಲಿ ಇಟ್ಟುಕೊಂಡಿರುವಂತೆ, ಇನ್ನು ಮುಂದೆ ಅತಿಮಾನಸವೇ ಅಧಿನಾಯಕತ್ವವನ್ನು ವಹಿಸಬೇಕು. ಈಗಿನ ವಿಕಾಸ ವಿಧಾನವು ಮನೋನಿಯತವಾಗಿರುವಂತೆ ಭಾವೀ ವಿಕಾಸ ವಿಧಾನವು ಅತಿಮಾನಸ-ನಿಯತವಾಗಬೇಕು. ಮಾನವನ ಅಂತಿಮ ಭವಿತವ್ಯವು ಕಲ್ಪನೆಗೆ ಮೀರಿದಷ್ಟು ಉಜ್ವಲವಾಗಿದೆ. ಅದು ವಿಕಾಸಪಥದಲ್ಲಿ ಒಂದು ಹೊಸ ತತ್ತ್ವದ ಆವಿಷ್ಕಾರವಾಗಿರುವುದರಿಂದ ಮನದ ಗ್ರಹಿಕೆಯನ್ನು ಮೀರಿದೆ. ಈ ತತ್ತ್ವವು ಇರುವುದೋ ಇಲ್ಲವೋ, ಇದ್ದರೆ ಅದನ್ನು ಪಡೆಯಲು ಸಾಧ್ಯವೋ, ಹಾಗೂ ಇದರಲ್ಲಿ ಪಡೆಯಲಾಗುವುದೋ, ಪೃಥ್ವಿಯು ಅತಿಮಾನಸದ ಅವತರಣಕ್ಕೆ ಯೋಗ್ಯವಾದ ಕ್ಷೇತ್ರವೋ, ಅತಿಮಾನಸ ಪ್ರಜ್ಞೆಯ ವಿಕಾಸ ಕ್ರಮವೇನು, ಎಷ್ಟು ಕಾಲ ಹಿಡಿಯಬಹುದು, ಅದರ ವ್ಯಾಪ್ತಿಯೇನು, ಈ ಅವಸ್ಥಾಂತರ ಸ್ಥಿತಿಗೆ ಸಂಬಂಧಿಸಿದ ಸಮಸ್ಯೆಗಳೇನು, ಅವುಗಳನ್ನು ಹೇಗೆ ಬಿಡಿಸಬೇಕು,—ಇವೆಲ್ಲವನ್ನೂ ಶ್ರೀ ಅರವಿಂದರ ಉದ್ಗ್ರಂಥವಾದ The Life Divine ದಲ್ಲಿ ಹಾಗೂ ಶೀರ ಇತ್ತೀಚೆಗೆ ಪ್ರಕಟವಾದ The Supramental Manifestation upon Earth ಎಂಬ ಲೇಖ ಸಂಕಲನದಲ್ಲಿ ಜಿಜ್ಞಾಸುಗಳು ವಿವರವಾಗಿ ತಿಳಿಯಬಹುದು. ಅತ್ತ ಗಮನವನ್ನು ಸೆಳೆಯುವುದು ಮಾತ್ರ ಈ ಚಿಕ್ಕ ಅಪೂರ್ಣ ಲೇಖದ ಉದ್ದೇಶ.

—ಶ್ರೀ. ಅ. ವೆಂಕಪ್ಪ ಶಾಸ್ತ್ರಿ

---

ಜಗತ್ತಿನಲ್ಲಿ ತನ್ನ ಅಸ್ತಿತ್ವವನ್ನು ಪ್ರಸ್ಥಾಪಿಸುವುದು ಮಾನವನ ಪ್ರಥಮ ಕಾರ್ಯ; ಆದರೆ ತಾನು ನಿಂತಲ್ಲಿ ನಿಲ್ಲದೆ ಉತ್ಕ್ರಾಂತಿ ಹೊಂದಿ, ಕೊನೆಗೆ ತನ್ನನ್ನು ತಾನು ಮೀರುವುದೂ ಆತನ ಕಾರ್ಯವಾಗಿದೆ: ತನ್ನ ಅಪೂರ್ಣ ಜೀವನವು ಪೂರ್ಣವಾಗಿ ವಿಕಾಸ ಹೊಂದುವಂತೆ, ತನ್ನ ಅಸಮಗ್ರ ಪ್ರಜ್ಞೆಯು ಸಮಗ್ರವಾಗುವಂತೆ ಅವರು ನೋಡಿಕೊಳ್ಳಬೇಕಾಗಿದೆ. ತನ್ನ ಪರಿಸ್ಥಿತಿಯ ಮೇಲೆ ಪ್ರಭುತ್ವವನ್ನು ಪಡೆಯುವುದಂತೂ ಸರಿಯೇ,—ಜಗದೈಕ್ಯ, ಜಗತ್ತಿನಲ್ಲಿ ಸಾಮರಸ್ಯ, ಇವನ್ನೂ ಆತ ಸಾಧಿಸಬೇಕಾಗಿದೆ. ತನ್ನ ವ್ಯಕ್ತಿತ್ವವನ್ನು ಅತ ಸಾಕ್ಷಾತ್ಕರಿಸಿಕೊಳ್ಳಬೇಕಾಗಿದೆ; ಆದರ ಜೊತೆಗೆ ಅದನ್ನು ಹಿಗ್ಗಿಸಿ, ವಿಶ್ವಾತ್ಮನಲ್ಲಿ ಹಾಗೂ ಚರಾಚರದ ಆನಂದಮಯ ಅಸ್ತಿತ್ವದಲ್ಲಿ ಲೀನಗೊಳಿಸುವುದೂ ಅತನ ಕೆಲಸವಾಗಿದೆ.

—ಶ್ರೀ ಅರವಿಂದರು

## ಶ್ರೀ ಅರವಿಂದರ ವಾಣಿ

# " ನಾನು ಇಲ್ಲಿರುವೆ, ಇಲ್ಲಿಯೇ ಇರುವೆ "*

ಶ್ರೀ ಅರವಿಂದರ ಬಗ್ಗೆ ಹೆಚ್ಚೆಚ್ಚು ತಿಳಿದುಕೊಳ್ಳಬೇಕೆಂಬ ಪ್ರವೃತ್ತಿ ಪ್ರಪಂಚದಲ್ಲಿ ಉಂಟಾಗುತ್ತಿರುವಾಗಲೇ ಅವರು ಇಹಲೋಕದಿಂದ ಮರೆಯಾದರು. ಇದು ದುರ್ದೈವವೇ ಸರಿ. ಆದರೆ ಅವರ ಇಡೀ ಜೀವನ ಚರಿತ್ರೆಯನ್ನು ನೋಡುತ್ತಿರುವಾಗ ಇಂಥ ಆಕಸ್ಮಿಕ ಘಟನೆಗಳು ಅವರ ಇಚ್ಛೆಯ ಮೇರೆಗೆ ಘಟಿಸಿದಂತೆ ಕಂಡುಬರುವಂತಿವೆ. ಅವರ ಉಚ್ಚ ಜೀವನ ವಿಕಾಸದ ಪ್ರತಿಯೊಂದು ಹೊಳವಿನಲ್ಲಿ ಇಂಥ ಆಕಸ್ಮಿಕ ಘಟನೆಯನ್ನು ಕಾಣಬಹುದು. ಅವರು ಆಯ್. ಸಿ. ಎಸ್. ಪರೀಕ್ಷೆಯಿಂದ ಬರಬಹುದಾದ ಪ್ರತಿಷ್ಠೆಯನ್ನು ತೊರೆದು ಬಡೋದೆಯ ಸಂಸ್ಥಾನದಲ್ಲಿ ಒಂದು ಸಾಮಾನ್ಯ ವೃತ್ತಿಯನ್ನು ಹುಡುಕಿಕೊಂಡು ಜೀವನ ಸಾಗಿಸುವದೂ, ಅದೇ ವೃತ್ತಿಯಲ್ಲಿರುವಾಗ ಅವರ ಕೀರ್ತಿಸೂರ್ಯನು ದಿಗ್ದಿಗಂತದಲ್ಲಿ ದೈದೀಪ್ಯಮಾನವಾಗಿ ರಾಜಿಸುತ್ತಿರುವಾಗ ಹಠಾತ್ತಾಗಿ ಅದನ್ನು ತೊರೆದು ರಾಜಕಾರಣದಲ್ಲಿ ಧುಮ್ಮಿಕ್ಕುವುದೂ, ರಾಜಕಾರಣದಲ್ಲಿ ಮುತ್ಸದ್ದಿತನದಿಂದ ಸಲಹೆ ಧೈರ್ಯಗಳನ್ನು ಕೊಟ್ಟು ಇಡೀ ದೇಶವನ್ನೇ ಜಾಗೃತಗೊಳಿಸಿ, ಜನಸ್ತೋಮವು ಇವರ ಕೊರಳಿಗೆ ಅಖಿಲ ಭಾರತೀಯ ಮುಂದಾಳುತನದ ಮಾಲೆಯನ್ನು ಹಾಕುವಾಗ ಬೆಳಗಾಗುವದರಲ್ಲಿ ಅಲ್ಲಿಂದ ಮಾಯವಾಗಿ ಯೋಗಸಾಧನೆಯನ್ನು ಕೈಕೊಂಡು ಮೌನ-ವ್ರತ ಹಿಡಿಯುವದೂ—ಇದಕ್ಕೆ ಯೋಗ್ಯ ನಿದರ್ಶನಗಳಾಗಿವೆ. ಆದರೆ ಕೊನೆಯದಾದ ಘಟನೆಯಿಂದ ಅವರು ಎಲ್ಲರನ್ನೂ ಸ್ತಂಭೀಭೂತರನ್ನಾಗಿ ಮಾಡಿದ್ದಾರೆ. ಅವರು ಈ ರೀತಿ ಏಕೆ ಮಾಡಿದರು ಎಂಬುದು ತಿಳಿಯುವದು ಸುಲಭವಲ್ಲದಿದ್ದರೂ ಅದಕ್ಕೆ ಕಾರಣವು ಇಲ್ಲದಿಲ್ಲ ಎನ್ನುವುದು ಖಂಡಿತ. ಶ್ರೀ ಅರವಿಂದರು ಕಾರಣವಿಲ್ಲದೆ ಮತ್ತು ಗೊತ್ತುಗುರಿಯಿಲ್ಲದೆ ಏನನ್ನೂ ಮಾಡುವಂತಿಲ್ಲ ಅನೇಕ ದಿವ್ಯಶಕ್ತಿಗಳನ್ನು ತಮ್ಮ ಕಠಿಣ ತಪಸ್ಸಿನ ಫಲವಾಗಿ ಭೂಮಿಗಿಳಿಸಿದ ಯೋಗೇಶ್ವರರಿಗೆ ಮರಣವು ಭಯಾನಕವಾಗಲೀ ಇಲ್ಲವೆ ಅತ್ಯಾವಶ್ಯಕವಾದ ಘಟನೆಯೊಂದಾಗಲೀ ಆಗುವದುಂಟೇ ? ಸಾಮಾನ್ಯ ಮಾನವರಂತೆ ದೇಹದಲ್ಲಿ ಬಳಲಿ ಬೆಂದುಹೋಗದಿದ್ದರೆ ತಮ್ಮ ಯೋಗದ ಪೂರ್ಣಸ್ವರೂಪವು ಕಾಣಿಸಿಕೊಳ್ಳದೆಂದು ಬಗೆದು " ಹೇ ಮಾನವ ಕುಲವೇ, ಕಾಳರಸನ ದುರ್ಗದಿಂದ ಹೊರಹೊರಟು ಬಂದು, ನಿಮಗೆ ವಚನವಿತ್ತಂತೆ, ಇದೋ, ಅಮರತ್ವದ ಸುವರ್ಣ ಬೀಜಗಳನ್ನು ತಂದಿದ್ದೇನೆ "—ಎಂದು ಅವರು ನುಡಿದಂತಿದೆ.

ಶ್ರೀ ಮಾತೆಯವರು ಹೇಳಿದಂತೆ ಶ್ರೀ ಅರವಿಂದರು ತಮ್ಮ ದೇಹದ ಬಗ್ಗೆ ಈ ರೀತಿ ನಿರ್ಣಯವನ್ನು ತೆಗೆದುಕೊಂಡು ದೇಹತ್ಯಾಗ ಮಾಡಿರುವದು ಕೇವಲ ನಮ್ಮ ಸಲುವಾಗಿಯೇ ಇದೆ; ಅದು ಹೇಗೆ ಎನ್ನುವದು ನಮ್ಮ ಮರ್ಯಾದಿತ ಬುದ್ಧಿಗೆ ತಿಳಿಯುವಂತಿಲ್ಲ. ಅವರ ದೇಹದ ಬಳಲಿಕೆ ಎರಡು ವರುಷಗಳ ಪೂರ್ವದಲ್ಲಿಯೇ ಕಾಣಿಸಿಕೊಂಡರೂ ಅದರಲ್ಲಿ ಭಯಕ್ಕೆ ಕಾರಣವಿರಲಿಲ್ಲ; ಮರಣೋನ್ಮುಖರಾದ ರೋಗಿಗಳ ಬೇನೆಗಳನ್ನು ಇಚ್ಛಾಮಾತ್ರದಿಂದ ಪರಿಹರಿಸುವ ಶಕ್ತಿಯಿರುವ ಸಿದ್ಧರಿಗೆ ತಮ್ಮ ಸ್ವಂತದ ಬಳಲಿಕೆಯ ಪರಿವೆಯಿರದೇ ?—ಎಂದು ನಮ್ಮ ನಂಬಿಗೆಯಿದ್ದರೂ, ಶ್ರೀ ಮಾತೆಯವರು ಹೇಳುತ್ತಿದ್ದ ಮಾತು

---

* ಶ್ರೀ ನೀರದ ವರಣರವರ ಒಂದು ಲೇಖದ ಭಾಷಾನುವಾದ

ಈಗ ಸ್ಮರಣೆಗೆ ಬರುತ್ತಿದೆ: "ಬೇರೆಯವರ ಗುಣವಾಗದ ವೇದನೆಯನ್ನು ಸರಿಪಡಿಸಬಹುದು. ಆದರೆ ಸ್ವಂತದ ಕುರಿತಾದ ಮಾತೇ ಬೇರೆ; ಅದು ತೀರ ಭಿನ್ನವಾಗಿದೆ."

ಶ್ರೀ ಅರವಿಂದರ ಮಹಾಕಾವ್ಯವಾದ "ಸಾವಿತ್ರಿ"ಯ ರಚನೆಯು ಅವ್ಯಾಹತವಾಗಿ ಮುಂದೆ ಓಡುತ್ತಿತ್ತು. ನಾಲ್ಕೈದು ನೂರು ಸಾಲುಗಳು ಒಂದರಮುಂದೆ ಒಂದು, ಸುಂದರವೂ ಮಧುರವೂ ಆಗಿ, ರಸಮಯ ಭಾಷೆಯಲ್ಲಿ ದಿವ್ಯತ್ವವನ್ನು ಧ್ವನಿಸುತ್ತಿದ್ದವು. ಈ ರೀತಿ ಈ ಮಹಾಕಾವ್ಯದ ರಚನೆ ಇನ್ನೂ ಎಷ್ಟು ದಿನವೆಂದು ಕೇಳುತ್ತಿದ್ದರು. ಆದರೆ "ಸಾವಿತ್ರಿ" ಕಾವ್ಯದ ರಚನೆಯಷ್ಟೇ ಶ್ರೀ ಅರವಿಂದರ ಕಾರ್ಯವಾಗಿರಲಿಲ್ಲ. ಬಹು ಜನರು ತಿಳಿದಂತೆ ಅವರು ಕೇವಲ ತಮ್ಮ ಮತ್ತು ಕೇವಲ ಸಾಧಕರ ಮುಕ್ತಿಗಾಗಿ ಸಾಧನೆಗೈಯುತ್ತಿದ್ದರೆಂಬ ಮಾತಿನಲ್ಲಿ ತಥ್ಯವಿಲ್ಲ. ಜ್ವಾಲಾಗ್ನಿಯಂಥ ವ್ಯಕ್ತಿತ್ವವಿರುವ ಶ್ರೀ ಅರವಿಂದರ ಬಗ್ಗೆ ಹೀಗೆ ತಪ್ಪು ಭಾವನೆಯಿರುವದು ತೀರ ಆಶ್ಚರ್ಯವೇ ಆಗಿದೆ. ಒಂದು ರೀತಿಯಲ್ಲಿ ಅವರ ತಪಸ್ಸಿನ ಸಿದ್ಧಿಯ ಬಹುಭಾಗವು ಅವರು ರಾಜಕೀಯ ಆಂದೋಲನದಲ್ಲಿ ಸೇರುವಾಗಲೇ ಬಂದುದಾಗಿದೆ ಅವರ ಯೋಗದ ಉದ್ದಿಷ್ಟವನ್ನು ತಿಳಿಯಬಯಸುವವರು ಅವರು ಬರೆದ "ಸಾವಿತ್ರಿ" ಕಾವ್ಯವಲ್ಲದೆ ಸರ್ವ ಜನಕ್ಕೂ ಆದರ್ಶನೀಯವಾದ ಅಸಂಖ್ಯ ಗ್ರಂಥಗಳಿಂದ ತಿಳಿದುಕೊಳ್ಳಬಹುದು. ಅವರು ಪ್ರತಿನಿತ್ಯ ಓದುತ್ತಿರುವ ದಿನಪತ್ರಿಕೆ, ವಾರಪತ್ರಿಕೆಗಳು, ಮಾಸಿಕ, ತ್ರೈಮಾಸಿಕಗಳು ಹಾಗು ನಾಲ್ಕೈದು ಭಾಷೆಗಳಲ್ಲಿ ಬರೆದ ಲೇಖನಗಳು, ಕವಿತೆ, ನಿಬಂಧ ಮತ್ತು ಪತ್ರಗಳನ್ನಲ್ಲದೆ, ಕರಡು ತಿದ್ದುವ ಕೆಲಸ ಮೊದಲ್ಗೊಂಡು ಮಾಡಿಕೊಂಡು ಎಲ್ಲ ನೋಡಿಕೊಳ್ಳುತ್ತಿದ್ದರು. ಇಷ್ಟೆಲ್ಲ ದಿನದ ಎರಡು ಗಂಟೆಗಳಲ್ಲಿ ಆಗಬೇಕು. ಇದಲ್ಲದೆ ಗೋಪಜನರಂತಿದ್ದ ಸಾಧಕವೃಂದದ ಹಲವಾರು ಸಮಸ್ಯೆಗಳನ್ನು—ಅತಿಗಹನ ವಿಷಯಗಳಿಂದ ಮೊದಲು ಮಾಡಿಕೊಂಡು ಮನಸೆಳೆಯುವ ರಸನೇಂದ್ರಿಯದ ವಿಷಯಗಳ ವರೆಗೆ—ನೋಡಿಕೊಂಡು ನೆರವು ನೀಡುತ್ತಿದ್ದರು. ಅವರ ಮುಖದಿಂದ ಹೊರಡುವ ಮೆದುವಾದ ಮಾತಿನ ಸರಣಿ, ಅವರದೇ ಆದ ಹಾಸ್ಯದ ಗಾಂಭೀರ್ಯ, ನಿಶ್ಚಲ ನೀರವತೆಯಿಂದ ಕೂಡಿದ ಠೀವಿ, ಇದೆಲ್ಲಕ್ಕೂ ಮೀರಿ ಎತ್ತಿದ ಅವರ ರಕ್ಷಣೆಯ ಅಭಯಹಸ್ತ ಮೊದಲಾವುಗಳೆಲ್ಲ, ಅವರ ಪದತಲದಲ್ಲಿ ಸಾಧನೆಗೆಯ್ಯುವ ಸಾಧಕವೃಂದದ ಪೂರ್ವಾರ್ಜಿತ ಹೆಮ್ಮೆಯ ಸೊತ್ತುಗಳಾಗಿದ್ದವು. ಅವರ ಅಲಿಪ್ತ ಹಿರಿಮೆ, ಸ್ವಾರ್ಥರಹಿತ ಔದಾರ್ಯ, ಅಪರಿಮಿತ ಕರುಣೆ ಹಾಗು ಮಾರ್ದವವನ್ನು ಕಂಡವರಿಗೆ ಸಾಕ್ಷಾತ್ ಶಿವನೇ ಅಜ್ಞಾನದ ಬೇರುಗಳಲ್ಲಿ ತೊಡಕಿಬಿದ್ದ ಜಗತ್ತನ್ನು ಉಳಿಸಲು ಧರೆಗಿಳಿದು ಬಂದಂತಿದೆ. ಸ್ವತಃ ತಾವೇ ಬೇನೆಯಿಂದ ಬಳಲುತ್ತಿರುವಾಗಲೂ ದುಃಖಿಗಳ ಕರೆಗೆ ಓಗೊಡದೆ ಇರಲಿಲ್ಲ. ಉದಾಹರಣೆಗಾಗಿ ಅವರು "ಸಾವಿತ್ರಿ" ಕಾವ್ಯದ ಕೊನೆಯ ಎರಡು ಖಂಡಗಳನ್ನು ರಚಿಸುತ್ತಿದ್ದಾಗ ಹೊರಗಿನ ಓರ್ವ ಸಾಧಿಕೆಯಿಂದ ನೆರವಿಗಾಗಿ ಅವಸರದ ಕರೆ ಬಂದಿತು. ಅವಳ ಬೇನೆಯ ರಹಸ್ಯ ಯಾರಿಗೂ ತಿಳಿಯಲಿಲ್ಲ; ಹಲವು ಜನ ವೈದ್ಯರು ಹಲವು ರೀತಿಯಲ್ಲಿ ಔಷಧೋಪಚಾರ ಹೇಳಿದರು. ಅವರಲ್ಲಿ ಒಬ್ಬರಿಗೊಬ್ಬರು ಯಾರೂ ತಾಳಮೇಳಾಗಲಿಲ್ಲ. ಮರಣೋನ್ಮುಖ ಸಮಯದಲ್ಲಿ ಅವಳು ಹತಾಶಳಾಗಿ ಗುರುವಿಗೇ ಶರಣುಬಂದಳು. ದಿನವೂ ಅವಳ ಸ್ಥಿತಿಯ ಬಗ್ಗೆ ಸಮಾಚಾರ ಬರುತ್ತಲಿತ್ತು. ಈಗ ಅವಳು ಆಶ್ರಮದಲ್ಲಿ ಸ್ಥಾಯೀ ಸಾಧಿಕೆಯಾಗಿ, ದೇಹದಾರ್ಢ್ಯವುಳ್ಳವಳಾಗಿ ವಾಸವಾಗಿದ್ದಾಳೆ. ಯಾರಿಗೆ ಈ ಬಗೆಯ ಆಂತರಿಕ ಸಂಬಂಧದ ಮಾಧುರ್ಯವು ಗೊತ್ತಾಗಿದೆಯೋ ಅವರು ಅದನ್ನು ದೈವೀ ಕೃಪೆಯೆಂದು ತಮ್ಮ ಹೃದಯದಲ್ಲಿಯೇ ಜೋಪಾನವಾಗಿ ಇರಿಸಿಕೊಂಡಿದ್ದಾರೆ.

"ಸಾವಿತ್ರಿ" ಮಹಾಕಾವ್ಯವು ಗಂಗಾಪ್ರವಾಹದಂತೆ ಅತಿ ನಿಧಾನವೂ, ಶಾಂತವೂ ಮತ್ತು ಅತಿ ವಿಶಾಲವೂ ಆಗಿ ನಡೆಯಿತು. ಮೊದಲನೆಯ ಖಂಡವು ಹತ್ತು ಸಲ ರೂಪ ಬದಲಿಸಿತು. ಮೂರ್ತಿಶಿಲ್ಪಿಯಂತೆ

ಅತಿ ನಿಧಾನವಾಗಿ, ಸೂಕ್ಷ್ಮವಾಗಿ ಅಲ್ಲಲ್ಲಿ ಉಳಿಯಾಡಿಸಿದರು. ಸ್ವಲ್ಪವೂ ದೋಷವಿಲ್ಲ. ಒಂದು ಉಪ-ಸರ್ಗವು ಐದು ಸಲ ಬದಲಾವಣೆಯನ್ನು ಕಂಡಿತು. ಒಂದು ಪೂರ್ಣವಿರಾಮಕ್ಕೆ ಇಡೀ ಖಂಡವನ್ನೇ ಓದಬೇಕಾಯಿತು. ಇದೆಲ್ಲವೂ ಸಾಧಕರಿಗೆ ಒಂದು ಹೊಸ ದೃಷ್ಟಿಯನ್ನೇ ತಂದುಕೊಟ್ಟಿತು.

ಅವರ ಬೇನೆ ಆಗಾಗ್ಗೆ ತಲೆದೋರುತ್ತಲೇ ಇತ್ತು. ಆದರೆ ಅವರ ನಿತ್ಯಕಾರ್ಯಕ್ಕೆ ಯಾವುದರಿಂದಲೂ ತಡೆ ಬರಲಿಲ್ಲ. ಪುಸ್ತಕಗಳ ಮೇಲೆ ಪುಸ್ತಕಗಳನ್ನು ಪರ್ಯವಲೋಕಿಸಿ ಹಲಕೆಲವು ಭಾಗಗಳಲ್ಲಿ ಪುನಃ ಬರೆದು ಅಚ್ಚಿಗೆ ಕೊಟ್ಟಾಯಿತು. "ಇನ್ನು ಸಾವಿತ್ರಿ ಕಾವ್ಯ ತೆಗೆದುಕೊಳ್ಳುವಾ" ಎಂದು ಆ ಕಡೆಗೆ ಲಕ್ಷ್ಯ ಸಾಗಿತು. ಅಷ್ಟರಲ್ಲಿ ಶಾರೀರಿಕ ಶಿಕ್ಷಣ ಪತ್ರಿಕೆಗೆ ಬರೆಯಲೇಬೇಕಾದ ಲೇಖವನ್ನು ಬರೆದು ಮುಗಿಸಿ "ನನ್ನ ನಿಜವಾದ ಕೆಲಸಕ್ಕೆ ಸಮಯವೇ ಸಾಲದು" ಎಂದು, "ಸಾವಿತ್ರಿ ಕಾವ್ಯ ತೆಗೆದುಕೊಳ್ಳಬೇಕು. ಅದನ್ನು ಬೇಗ ಮುಗಿಸ ಬೇಕಾಗಿದೆ"—ಎಂದಾಗ, "ಬೇಗ ಮುಗಿಸಬೇಕಾಗಿದೆ?—ಅಂಥದೇನು ಈಗ....?" ಎನ್ನುವ ಪ್ರಶ್ನೆ ಬಂತು. ಆದರೆ ಶ್ರೀ ಅರವಿಂದರ ಶಾಂತವಾದ ಮುಖಮುದ್ರೆಯಲ್ಲಿ ಆ ಪ್ರಶ್ನೆಗೆ ಉತ್ತರ ದೊರೆಯಲಿಲ್ಲ. ಕೆಲಸಕ್ಕೆ ಪ್ರಾರಂಭವಾಯಿತು. ಈ ಸಲದ ಆಶ್ಚರ್ಯದ ಸಂಗತಿಯೆಂದರೆ, ಕಾವ್ಯದ ಬರವಣಿಗೆಯ ಕೆಲಸದಲ್ಲಿ ಮೊದಲಿನ ನಿಧಾನವಿರಲಿಲ್ಲ. ಈ ಮೊದಲು ಅನಂತಕಾಲವೇ ಕರತಲಾಮಲಕವಾಗಿರುವಂತೆ, ಶಾಂತಗತಿಯಲ್ಲಿ ಕೆಲಸ ಸಾಗುತ್ತಿತ್ತು; ಅವರ ತಾಳ್ಮೆ ಮತ್ತು ಶಿವಿ, —ದಿವ್ಯತ್ವವೇ ರೂಪವೆತ್ತಂತಿತ್ತು. ಅವರು ಉಸುರುವ ಪ್ರತಿ ಮಾತೂ ಪ್ರಶಾಂತ ಗಾಂಭೀರ್ಯವನ್ನು ತಳೆದಂತಿತ್ತು. ಅವರ ಸಾದಾ ತಿನಿಸು "ಆತ್ಮನಿವೇದನೆ"ಯ ಕಲ್ಪನೆ ಯನ್ನು ತಂದುಕೊಡುತ್ತಿತ್ತು. ಅವರು ಇಡುವ ಪ್ರತಿ ಹೆಜ್ಜೆ ಸುಕೋಮಲವಾಗಿ ನೆಲವನ್ನು ತಟ್ಟುತ್ತಿತ್ತು. ಅವರ ಬೀರುವಿನಲ್ಲಿ ಸಾವಿತ್ರಿ ಕಾವ್ಯದ ಅನೇಕ ಪುನರವಲೋಕನವನ್ನೊಳಗೊಂಡ, ಅಸಂಖ್ಯ ಪುಟಗಳು ಮನೆ ಮಾಡಿದ್ದವು. ಎಲ್ಲಿ ನೋಡಿದಲ್ಲಿ ಬರಹದ ಕಾಗದಗಳೇ ಕಾಗದಗಳು. ಸಾಲುಗಳ ಮೇಲೆ ಸಾಲುಗಳು ಬರೆಯಲ್ಪಟ್ಟು, ಅಲ್ಲಲ್ಲಿ ಹೊಡೆದುಹಾಕಿದ ಗುರುತುಗಳು, ಮತ್ತೆ ಸೇರಿಸಿದ ಸಾಲುಗಳು. ಸಾಕ್ಷಾತ್ ಸರಸ್ವತಿ ಇಲ್ಲವೆ ಭಗವಂತನೇ ಕೆಲಸ ಮಾಡುತ್ತಿರುವಂತಿತ್ತು. ಈ ರೀತಿ ಕೆಲಸ ನಡೆಯುತ್ತಿರುವಾಗ ಅದನ್ನು ಬೇಗ ಮುಗಿಸಿ ಬಿಡಬೇಕು ಎನ್ನುವ ಮಾತಿನಲ್ಲಿ ಎಷ್ಟು ಆಶ್ಚರ್ಯ ಕಂಡುಬರಲಿಕ್ಕಿಲ್ಲ! ಇಷ್ಟೇ ಅಲ್ಲ, ಮುಂದಿನ ಬರೆವಣಿಗೆಯಲ್ಲಿ ಹಿಂದಿನ ಪರಿಪೂರ್ಣತೆಗಾಗಿ ಪಡುವ ಪರಿಶ್ರಮವಿರಲಿಲ್ಲ; ಮೊದಲಿನ ಗಾಂಭೀರ್ಯವಿಲ್ಲ. ಹಿಂದಿನ ವಿಚಾರಗಳೇ ಮತ್ತೆ ಮತ್ತೆ ಕಾಣಿಸಿಕೊಂಡವು. ಹಿಂದೆ 'ನಿರ್ವಾಣ'ದಂಥ ವಿಷಯವನ್ನು ಬರೆಯುತ್ತಿರುವಾಗ ಸುಂದರವೂ ಸಮಂಜಸವೂ ಆಗಿ ಹೊರಹೊಮ್ಮುವ ಗಾಂಭೀರ್ಯಮಯ ಸಾಲುಗಳ ಮಹಾಪೂರವು ಸಾಕ್ಷಾತ್ ಸರಸ್ವತೀದೇವಿಯೇ ಅವರ ಕಂಠದಲ್ಲಿ ಕುಳಿತು ಹರಿಸುತ್ತಿದ್ದಾಳೆಂದು ಅನಿಸುತ್ತಿತ್ತು. ಆದರೆ ಈಗ ಒಂದು ಸಣ್ಣ ವಾಕ್ಯರಚನಾ ದೋಷವೂ ಕೂಡ ಆಗಾಗ್ಗೆ ತಡವುತ್ತಿತ್ತು. ಕಾವ್ಯದ ಕೊನೆಯ ಖಂಡವನ್ನು ಬರೆದು ವಿರಾಮ ಚಿಹ್ನವನ್ನು ಎಳೆದಾಗ ಕಾರ್ಯಸಮಾಪ್ತಿಯ ಆತ್ಮಸಂತುಷ್ಟಿಯ ಅವರ ನಗು ನೋಡುವಂತಹದಿತ್ತು. "ಅಂತೂ ಮುಗಿಯಿತು" ಎಂದಾಗ ದಣಿದು ದಾರಿ ನಡೆಯುವ ಪ್ರವಾಸಿ ತನ್ನ ತಾಣ ಮುಟ್ಟಿದಂತಿತ್ತು.

"ಇನ್ನು ಏನು ಉಳಿಯಿತು?" ಎಂದರು.

"ಮರಣಕಾಂಡ ಮತ್ತು ಉಪಸಂಹಾರ" ಎಂದು ಉತ್ತರ ಬಂತು.

"ಅದನ್ನೋ? ಮುಂದೆ ನೋಡುವಾ?" ಎಂದು ಶಾಂತ ಸಂತೃಪ್ತ ಭಾವದಿಂದ ಉತ್ತರಿಸಿದರು.

ಬರಹದಲ್ಲಿ ಪುನರುಕ್ತಿಯ ದೋಷ ಮೊದಮೊದಲು ಬಹಳಷ್ಟು ಕಂಡು ಬಂದರೂ ಅವರ ಆ ಯಾತನೆಯ ಕಾಳರಾತ್ರಿಯಲ್ಲಿ ಕೆಳಗಿನ ಭಾವಮಯ ಸಾಲುಗಳ ಯಥಾರ್ಥತೆಯ ಕಲ್ಪನೆ ಹೊಳೆಯಿತು :

**ಸಮರ್ಪಣ**

ಬರಲಿಹುದು ಪ್ರಳಯದಿನ, ಅದರಂಚಿನಲಿ ತಾನು
ಓರ್ವಳೇ ನಿಲ್ಲುವಳು ನಿಸ್ಸಹಾಯಕಳಾಗಿ.
.... .... .... .... ....
ನಿಶ್ಚಲದ ನೀರವದ ನಿಬಿಡಾಂಧಕಾರದಲಿ
ತೂಗದಿರು ಸ್ವರ್ಗದೆಡೆ, ಸಾವಿತ್ರಿ ಉಳಿಯುವಳು.
ಜಗವನ್ನು ಉಳಿಸುವಳು, ರಕ್ಷಿಸುವಳು.

ಇದು ಅವರ ಕೊನೆಯ ಸಂದೇಶವಲ್ಲದೆ ಮತ್ತೇನು ? ನಮ್ಮಲ್ಲಿ ಮನೆಮಾಡಿಕೊಂಡ ರೌದ್ರನೀರವತೆ ಮರೆಯಾಗಿ, ಅಲ್ಲಿ ಶ್ರೀ ಅರವಿಂದರ ಬಲಗೈಯಂತಿರುವ ಶ್ರೀ ಮಾತೆಯವರು ಕರುಣಾಮಯಿಯಾಗಿ ಕಂಡರು.

ಅಪೇಕ್ಷಿಸಿದಂತೆ 'ಸಾವಿತ್ರಿ'ಯ ಪುನರವಲೋಕನ ಕೈಗೂಡಲಿಲ್ಲ. ಶ್ರೀ ಅರವಿಂದರ ಬರೆವಣಿಗೆಗೆ ಬಿಡುವು ದೊರೆಯಲಿಲ್ಲ. ಸಿಕ್ಕಷ್ಟು ಸಮಯವನ್ನು ಬರೆವಣಿಗೆಯಲ್ಲಿ ತೊಡಗಿಸಿದರು. ಅವರ ಬಳಲಿಕೆ ಈಗ ಸ್ವಲ್ಪ ಹೆಚ್ಚೆಚ್ಚಾಗಿ ವ್ಯಕ್ತಗೊಂಡಿತು. ಆದರೂ ಅವರ ನಿತ್ಯಕ್ರಮದಲ್ಲಿ ಯಾವ ವ್ಯತ್ಯಾಸವೂ ಆಗಲಿಲ್ಲ. ದೇಹದ ಪರಿವೆಯೇ ಅವರಿಗಿರಲಿಲ್ಲ. ಆರೈಕೆ ಪಡೆಯುತ್ತಿರುವ ಅವರ ದೇಹವು ಮಾನವೀಯವಾದರೂ ರೋಗಿಯು ಮಾತ್ರ ಮಾನವ್ಯವನ್ನು ಮೀರಿ ನಿಂತವರೆಂಬ ಮಾತು ಎಲ್ಲರಿಗೂ ತಿಳಿದಿದ್ದಿತು. ಇಷ್ಟರಲ್ಲಿ ನವ್ಹಂಬರ (೧೯೫೦) ದರ್ಶನದ ಸಮಯ ಬಂದೊದಗಿತು. ಅವರ ಬೇನೆ ಹಿಡಿತ ಮೀರಿತು. ಡಾಕ್ಟರರ ಅಭಿಪ್ರಾಯದ ಮೇರೆಗೆ ಶ್ರೀ ಅರವಿಂದರಾಗಲಿ ಶ್ರೀ ಮಾತೆಯವರಾಗಲಿ ಶಸ್ತ್ರಚಿಕಿತ್ಸೆಗೆ ಒಪ್ಪರೆಂಬುದು ಗೊತ್ತಾಗಿತ್ತು. ಮೇಲಾಗಿ ದರ್ಶನದ ಅವಧಿ ಮೀರುವ ವರೆಗೆ ಯಾವದೂ ಸಾಧ್ಯವಿಲ್ಲವೆಂಬುದು ತಿಳಿದ ವಿಷಯವಾಗಿತ್ತು. ಹತ್ತಿರದ ಸಾಧಕರು ಗಾಬರಿಗೊಂಡಾಗ ಶ್ರೀ ಮಾತೆಯವರು ಧೈರ್ಯ ಹೇಳಿದರು. "ಶ್ರೀ ಅರವಿಂದರ ಹತ್ತಿರ ಇಷ್ಟು ವರುಷ ಕಳೆದರೂ ಭಯವೆಂಬುದು ಬಿಟ್ಟಿಲ್ಲವೆ ? ಅವರ ಘನವಾದ ಶಕ್ತಿ ಯಾವಾಗಲೂ ನಿಮ್ಮನ್ನು ಕಾಯುತ್ತಿದೆ. ಭಯಕ್ಕೆ ಇಲ್ಲಿ ಎಷ್ಟೂ ಆಸ್ಪದವಿಲ್ಲ" ಎಂದರು.

ದರ್ಶನದ ದಿನವು ತೀರ ಹತ್ತಿರ ಬಂದಾಗ ಓರ್ವ ಜ್ಯೋತಿಷಿಯ ಪತ್ರ ಬಂತು. ಅದರಲ್ಲಿ ಶ್ರೀ ಅರವಿಂದರ ಯಾತನೆಯ ಬಗ್ಗೆ ಉಲ್ಲೇಖವಿದ್ದು, ಈ ಪ್ರಖರ ಯಾತನೆಯಿಂದ ಅವರಿಗೆ ಜೀವದ ಗಂಡಾಂತರದ ಯೋಗವು ಇದೆ ಎಂದು ವಿವರಿಸಲಾಗಿತ್ತು. ಇದನ್ನು ಓದಿ ಹತ್ತಿರದ ಸಾಧಕರು ಹಾಸ್ಯ ಮಾಡುತ್ತಿರುವಾಗ ಶ್ರೀ ಅರವಿಂದರು ನುಡಿದರು: "ಅದೇನು ಬರೆದಿದೆ—ಸ್ಪಷ್ಟವಾಗಿ ವಿವರಿಸಿರಿ, ನೋಡುವಾ ? ಆತನು ಸ್ವಲ್ಪ ಸತ್ಯವನ್ನು ಹೇಳಿದ್ದಾನೆ." ಉಳಿದವರಿಗೆ ಇದರಲ್ಲಿ ನಂಬಿಗೆ ಹುಟ್ಟದಿದ್ದರೂ ಶ್ರೀ ಅರವಿಂದರು ಈ ಮೊದಲೇ ಜ್ಯೋತಿಷಶಾಸ್ತ್ರವನ್ನು ಅಭ್ಯಾಸ ಮಾಡಿದ್ದರ ಮೂಲಕ ಇದರಲ್ಲಿ ಆಸ್ಥೆ ತೋರಿಸಿದರು. ಜ್ಯೋತಿಷಿಗಳು ಆಗಿ ಹೋದ ದಿನಗಳ ಘಂಗತಿಗಳನ್ನು ಸರಿಯಾಗಿ ಹೇಳಿದರೂ ಮುಂದಾಗುವದನ್ನು ಅಷ್ಟು ಸರಿಯಾಗಿ ಕಾಣರೆಂಬುದು ಶ್ರೀ ಅರವಿಂದರ ಅಭಿಪ್ರಾಯವಾಗಿದ್ದಿತು. ಅದರಲ್ಲಿಯೂ ಯೋಗಿಗಳ ಜೀವನವು ಜ್ಯೋತಿಷಶಾಸ್ತ್ರದ ಅಧೀನತೆಯಲ್ಲಿ ಬರುವದಿಲ್ಲೆಂಬ ಮಾತೂ ತಿಳಿದ ವಿಷಯವಾಗಿತ್ತು. ಅವರು ತಾವು ತರುಣರಿರುವಾಗ ನಾರಾಯಣ ಜ್ಯೋತಿಷಿ ಎಂಬ ಓರ್ವ ಸುಪ್ರಸಿದ್ಧ ಜ್ಯೋತಿಷಿಯು, ಶ್ರೀ ಅರವಿಂದರು ತಮ್ಮ ವಯಸ್ಸಿನ ೬೩ರಲ್ಲಿ ಚಿಂತಾಜನಕ ಸ್ಥಿತಿಯಲ್ಲಿ ಬೇನೆ ಬೀಳುವರೆಂದು ಮತ್ತು ತಮ್ಮ ಯೋಗಬಲದಿಂದ ಅದರಿಂದ ಪಾರಾಗಿ ಮುಂದೆ ಹಣ್ಣು ಹಣ್ಣು ಮುಪ್ಪಾಗುವ ವರೆಗೆ ಬಾಳುವರೆಂದು ಹೇಳಿದ ಸಂಗತಿಯನ್ನು ವಿವರಿಸಿ, "ನೋಡಿದಿರಾ—ಈಗ ನಾನು ಇನ್ನೂ ಜೀವಿಸಿಲ್ಲವೆ?" ಎಂದು ಮಂದಹಾಸದಿಂದ ನುಡಿದರು.

ದರ್ಶನದ ದಿವಸ ಬಳಲಿಕೆ ಇನ್ನೂ ಹೆಚ್ಚಾಯಿತು. ದರ್ಶನವನ್ನು ನಿಲ್ಲಿಸಬೇಕೆಂದು ಬಗೆದಾಗ ದರ್ಶನಾರ್ಥಿಗಳಾಗಿ ನಿಂತ ಶಿಷ್ಯವೃಂದದ ಹೃದಯದಲ್ಲಿ ಕಳವಳವೆಬ್ಬಿಸಬಾರದೆಂದು ಅವಸರವಸರವಾಗಿ

ದರ್ಶನದ ಕಾರ್ಯಕ್ರಮವನ್ನು ಮುಗಿಸಿಯಾಯಿತು. ಮುಂದೆ ಬಳಲಿಕೆ ಮೇರೆ ಮೀರಿತು. ಡಾಕ್ಟರರ ಅಭಿಪ್ರಾಯದಂತೆ ಚಿಕಿತ್ಸೆಗಾರಂಭವಾಯಿತು. ರೋಗವು ಸ್ವಲ್ಪ ಗುಣಮುಖವಾಗತೊಡಗಿತು. " ಈ ರೀತಿ ಬೆಳೆದು ಬಂದ ರೋಗವು ಶ್ರೀ ಅರವಿಂದರ ದಿವ್ಯಶಕ್ತಿಯನ್ನು ಹೇಗೆ ದಾಟಿ ನಿಂತಿದೆ? ಈ ಮೊದಲು ಅವರು ಇದನ್ನು ಸರಿಯಾಗಿ ಹತ್ತಿಕ್ಕಿದ್ದರು. ಈಗ ಏಕೆ ಹತ್ತಿಕ್ಕಲಿಲ್ಲ?" ಎಂಬ ಡಾಕ್ಟರರ ಪ್ರಶ್ನೆಗಳಿಗೆ ಯಾವ ಉತ್ತರವೂ ದೊರೆಯಲಿಲ್ಲ. ಶ್ರೀ ಅರವಿಂದರು ತಮ್ಮ ರೋಗವನ್ನು 'ಸಾವಿತ್ರಿ' ಮಹಾಕಾವ್ಯವನ್ನು ಮುಗಿಸುವ ವರೆಗೆ ಆಗಾಗ್ಗೆ ತಡೆದು, ಮುಂದೆ ಅದನ್ನು ಸ್ವತಂತ್ರವಾಗಿ ಬಿಟ್ಟಂತಿದೆ. ರೋಗದ ಬಗ್ಗೆ ಮುಂದೆ ಎಷ್ಟೂ ಪರಿವೆ ಯಿಡಲಿಲ್ಲ. ಕಾರ್ಯನಿರತತೆಯೇ ಅವರ ಹೆಗ್ಗುರಿಯಾಗಿತ್ತು. " ನಾನು ಹಿಡಿದ ಕಾರ್ಯವು ವಿಫಲವಾಗುವ ದೆಂದು ಒಂದು ವೇಳೆ ತಿಳಿದು ಬಂದರೂ ಕೊನೆಯ ವರೆಗೆ ನಾನು ಹಿಡಿದ ಕೆಲಸವನ್ನು ಮಾಡಿಯೇ ತೀರುವೆನು "— ಎಂಬುದು ಅವರು ಬರೆದ ಒಂದು ಪತ್ರದಲ್ಲಿಯ ಮಾತಾಗಿದೆ. ಕ್ರಿಪ್ಸ್ ಸಂಧಾನ ನಿಯೋಗವು ಬಂದಾಗಲೂ ಇದೇ ಮಾತು. ಈ ಸಂಧಾನವನ್ನು ಸ್ವೀಕರಿಸಲು ಸಲಹೆ ಕೊಡಲು ದಿಲ್ಲಿಗೆ ತಮ್ಮ ಶಿಷ್ಯರೊಬ್ಬರನ್ನು ಕಳಿಸಿದ ಮೇಲೆ—" ಇದರಿಂದ ಏನೂ ಪ್ರಯೋಜನವಾಗುವದಿಲ್ಲ "—ಎಂದರಂತೆ. ಹಾಗಾದರೆ ದಿಲ್ಲಿಗೆ ಏಕೆ ದೂತನನ್ನು ಕಳಿಸಿದಿರಿ ಎಂದು ಕೇಳಿದಾಗ " ಸ್ವಲ್ಪ ನಿಷ್ಕಾಮ ಕರ್ಮವನ್ನು ಮಾಡಿದ್ದೇನೆ, ಅಷ್ಟೇ! " ಎಂದರಂತೆ. ಈಗ್ಯೂ ಅನೇಕ ಜನ ಕೇಳುತ್ತಾರೆ—ಶ್ರೀ ಅರವಿಂದರು ಏನಾದರೂ ಒಂದು ಸಂದೇಶವನ್ನು ತಮ್ಮ ಕಾರ್ಯದ ಬಗ್ಗೆ, ತಮ್ಮ ಸಾಧನೆಯ ಬಗ್ಗೆ ಬಿಟ್ಟು ಹೋಗಿದ್ದಾರೆಯೆ?—ಎಂದು. ಇದಕ್ಕೆ ಉತ್ತರ: " ಹೌದು " ಮತ್ತು " ಇಲ್ಲ "—ಎರಡೂ ಹೇಳಬೇಕು. 'ಇಲ್ಲ'ವೆಂದಾಗ, ಇದೂ ಸರಿಯೆ! ಅವರು ಸಂಪೂರ್ಣ ಅಂತರ್ಮುಖರಾಗಿ ಒಳಗೊಳಗೇ ಇರುವಾಗ ಏನನ್ನೂ ಹೇಳಲಿಲ್ಲ. ಇನ್ನು 'ಹೌದು' ಎನ್ನುವಾಗ ಈ ಮೊದಲೇ ಹೇಳಿದಂತೆ 'ಸಾವಿತ್ರಿ' ಕಾವ್ಯವನ್ನು ಬರೆದು ಮುಗಿಸಿ ತಮ್ಮ ಕೊನೆಯ ಮುದ್ರೆಯನ್ನು ಒತ್ತಿದಾಗ, ಪುನರುಕ್ತಿಯೆಂದು ಕಂಡರೂ, ಈಗ ಅವೇ- ಅವರ ಯೋಗದ ರಹಸ್ಯಮಯವಾದ ಸಾರದಂತಿರುವ ಸಾಲುಗಳು ಸ್ಫಟಿಕದಂತೆ ನಿರ್ಮಲವಾಗಿ ಬೆಳಗುತ್ತಿವೆ:—

ಬರಲಿಹುದು ಪ್ರಲಯದಿನ, ಅದರಂಚಿನಲಿ ತಾನು
ಓರ್ವಳೇ ನಿಲ್ಲುವಳು ನಿಸ್ಸಹಾಯಕಳಾಗಿ
ಜಗದ ಭವಿತವ್ಯವನು ತನ್ನ ಎದೆಯಲಿ ಅವಚಿ,
ಹತವಾದ ಆಶೆಯನು ಎಳೆತಂದು, ಏಕಾಂಗಿ
ಹೊರಟಿಹಳು ಗೆಲ್ಲಲೋ ಉರುಳಲೋ ಸಮರದಲಿ.
... ... ... ... ... ...
ನಿಶ್ಚಲದ ನೀರವದ ನಿಬಿಡಾಂಧಕಾರದಲಿ
ಜಗದ ವಿಧಿಲಿಖಿತವೇ ಮೈದೋರುವಾ ಸಮಯ.
... ... ... ... ... ..
ಓರ್ವಳೇ ಗೆಲ್ಲುವಳು ಇಲ್ಲದಿರೆ ಉರುಳುವಳು
... ... ... ... ... ...
ಕೂಗದಿರು ಸ್ವರ್ಗದೆಡೆ, ತನ್ನ ತಾ ಕಾಯುವಳು
ಸಾವಿತ್ರಿ ಉಳಿಯುವಳು, ಜಗವನುಳಿಸುವಳು.

'ಸಾವಿತ್ರಿ' ಮಹಾಕಾವ್ಯವು ಒಂದು ರೀತಿಯಲ್ಲಿ ಸಂಪೂರ್ಣ ಮುಕ್ತಾಯವಾಗಿದ್ದರೂ ಅವರು ಬರೆಯಬೇಕಾದ ಇನ್ನೊಂದು ಅಧ್ಯಾಯವಾದ " ಮರಣಕಾಂಡ "ವನ್ನು ಬರೆದು ಮುಗಿಸಲಿಲ್ಲ.

ಅದನ್ನು ಅವರಿಗೆ ತಿಳಿಸಿದಾಗ "ಮುಂದೆ ನೋಡೋಣ" ಎಂದಿಷ್ಟೇ ಹೇಳಿದರು. ಈ ಮುಂದೆ ಅವರು ದಿನೇ ದಿನೇ ಅಂತರ್ಮುಖರಾಗತೊಡಗಿದರು. ಅವರ ನಿರ್ಯಾಣ ಸಮಯದಲ್ಲಿಯಂತೂ ಡಾಕ್ಟರ ಜನರು ಕೂಡ ಬೆಪ್ಪುಬೆರಗಾದರು. ಇಂಥ 'ಮಹಾನಿರ್ಯಾಣ' ಸಮಯವನ್ನು ಅವರು ನೋಡಿರಲೂ ಇಲ್ಲ; ಕೇಳಿರಲೂ ಇಲ್ಲ. ಆದರೆ ಸುತ್ತುಮುತ್ತಲಿನ ಸಾಧಕವೃಂದದ ಮನಃಸ್ಥಿತಿ ಮಾತ್ರ ಕಠಿಣವಾಗುತ್ತ ಬಂದಿತು. ಶ್ರೀ ಅರವಿಂದರು ತಮ್ಮ ಅಂತಃಶಕ್ತಿಯನ್ನು ಉಪಯೋಗಿಸದೆ, ತಮ್ಮ ಬಳಲಿಕೆಯ ಬಗ್ಗೆ ತೋರುವ ಔದಾಸೀನ್ಯದಿಂದ ಅವರು ನಿರಾಶೆಗೊಂಡರು. ಬೆಲೆಬಾಳುವ ಮಾತ್ರೆ ಹಾಗು ಅಮೂಲ್ಯ ಇಂಜೆಕ್‌ಶನ್ನುಗಳಿಂದ ಅವೆಷ್ಟು ಉಪಯೋಗವಾದೀತು—ಶ್ರೀ ಅರವಿಂದರ ದಿವ್ಯಶಕ್ತಿಯ ಆಧಾರದ ನೆರವೇ ಇಲ್ಲದಾಗ! ಅರ್ಧ ಶತಮಾನಕ್ಕೂ ಮಿಕ್ಕಿ ಔಷಧದ ಸಂಪರ್ಕವೇ ಗೊತ್ತಿಲ್ಲದ ಶ್ರೀ ಅರವಿಂದರಿಗೆ ಈಗ ಉಗ್ರವಾದ ಔಷಧೋಪಚಾರವನ್ನಾದರೂ ಹೇಗೆ ಮಾಡುವದು? ದೇವಕುಮಾರರಾದ ಶ್ರೀ ಅರವಿಂದರ ಸುಕೋಮಲವಾದ ಕಾಂತಿಯುತ ಪರಿಶುದ್ಧ ದೇಹವನ್ನು ಕಂಡವರಿಗೆ, ಇದರ ಅರಿವು ಆಗದೆ ಇರದು. ಅವರ ಬರಿದಾದ ಮೈ, ನಿಡಿದಾದ ತೋಳುಗಳು, ದೀರ್ಘವಾಗಿ ಮೃದುವಾಗಿರುವ ಕೈಬೆರಳುಗಳಲ್ಲಿ ಹದಗೆಡಿಸುವ ಮಾಂಸಮುಷ್ಟಿಗಳಿಗೆ ಎಷ್ಟೂ ಅವಕಾಶವಿರಲಿಲ್ಲ. ಕ್ಷ-ಕಿರಣದ ಚಿತ್ರಗಳಂತೆ ಅವರ ಮೈಯಲ್ಲಿನ ಕಾಂತಿ ಅರುಪಾರಾಗಿ ಕಾಣುತ್ತಿತ್ತು. ಅವರು ಮಲಗಿಕೊಂಡಾಗಿನ ದೃಶ್ಯವು ಕಾಂತಿಕುಮಾರನು ಜಗನ್ಮಾತೆಯ ತೊಡೆಯಮೇಲೆ ಮಂದಸ್ಮಿತಯುತನಾಗಿ ಹಗಲುಗನಸು ಕಾಣುತ್ತ ಒರಗಿದಂತೆ ತೋರುತ್ತಿತ್ತು. ಅಂಗಾಂಗಗಳ ಸೌಷ್ಠವವು ಮಾನವರೂಪದಲ್ಲಿ ಜನ್ಮವೆತ್ತ ದೇವತೆಯಂತೆ ಕಂಗೋಳಿಸುತ್ತಿತ್ತು.

ಆದರೇನು? ಅವರ ಬಳಲಿಕೆ ಹೆಚ್ಚಾದಂತೆ ಔಷಧೋಪಚಾರವೂ ಹೆಚ್ಚುತ್ತ ನಡೆಯಿತು. ಆದರೆ ದೈವೇಚ್ಛೆಯೇ ಬೇರೆಯಾಗಿದ್ದಿತು.

ಆಶ್ರಮ ಶಾಲೆಯ ವಾರ್ಷಿಕೋತ್ಸವವು ಡಿಶೆಂಬರ ೧ ಮತ್ತು ೨ನೇ ದಿನಗಳಲ್ಲಿ ಪ್ರಾರಂಭವಾಯಿತು. ಇಡೀ ಆಶ್ರಮವೆಲ್ಲ ವಿವಿಧ ಕಾರ್ಯಕ್ರಮಗಳಲ್ಲಿ ತೊಡಗಿದ್ದಿತು—ವ್ಯಾಯಾಮ, ಆಟ-ಪಾಟ ನಾಟ್ಯರಂಗ ಮುಂತಾದವುಗಳಲ್ಲಿ. ಆದರೆ ಆಶ್ರಮದ ಮೇಲ್ಮಟ್ಟದ ಶ್ರೀ ಅರವಿಂದರ ಮುಚ್ಚಿದ ಕೋಣೆಯಲ್ಲಿ ವಿಧಿಯ ಮತ್ತೊಂದು ನಾಟ್ಯರಂಗ ಸಿದ್ಧತೆ ನಡೆದಿದೆ ಎಂಬುದು ಯಾರಿಗೂ ಗೊತ್ತಿರಲಿಲ್ಲ. ಅದನ್ನು ಸಾಧಕರಿಂದ ಗೌಪ್ಯವಾಗಿಯೇ ಇಡಲ್ಪಟ್ಟಿತ್ತು. ವಾರ್ಷಿಕೋತ್ಸವದ ಮುಕ್ತಾಯದ ರಾತ್ರಿ ಶ್ರೀ ಅರವಿಂದರು "ಒಮ್ಮೆ ಎಲ್ಲವೂ ಸಾಂಗವಾಯಿತಲ್ಲವೇ" ಎಂದು ನುಡಿದರು. ಅಂದಿನಿಂದ ಅವರ ಬಳಲಿಕೆ ಇನ್ನೂ ಅಧಿಕವಾಯಿತು. ಹಿಡಿದಿಟ್ಟ ಬೇನೆಯನ್ನು ಪೂರ್ಣವಾಗಿ ಹರಿಬಿಟ್ಟಂತೆ ಅನಿಸಿತು.

ಸುವರ್ಣಾಕ್ಷರಗಳಲ್ಲಿ ಬರೆದಿಡುವ ದಿನ, ಡಿಶಂಬರ ೪; ಶ್ರೀ ಅರವಿಂದರು ಬೇಡವೆಂದರೂ ಎದ್ದು ಕುಳಿತುಕೊಳ್ಳುವ ಇಚ್ಛೆಯನ್ನು ಪ್ರಕಟಿಸಿದರು. ಆಗ ಕಂಡದ್ದೇನು? ಅವರ ಬಳಲಿಕೆಯ ಚಿಹ್ನಗಳೆಲ್ಲ ಮಾಯಾಜಾಲದಂತೆ ಅದೃಶ್ಯವಾಗಿದ್ದವು. ಅವರು ಪುನಃ ತಮ್ಮ ಆರೋಗ್ಯವನ್ನು ಸಂಪಾದಿಸಿಕೊಂಡು ಒಂದು ಕುರ್ಚಿಯಲ್ಲಿ ಕುಳಿತರು. ಈ ಅಕಲ್ಪಿತ ಮತ್ತು ಅನಪೇಕ್ಷಿತ ಬದಲಾವಣೆ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿತು. ಒಬ್ಬರಿಗೊಬ್ಬರು ಮುಖ ನೋಡಿದರು. ತಮ್ಮ ಪ್ರಾರ್ಥನೆಗಳನ್ನು ಶ್ರೀ ಅರವಿಂದರು ಮಾನ್ಯಮಾಡಿದರೆಂದು ಹಿಗ್ಗಿದರು. ಆದರೂ ಈ ನಂಬಲಸಾಧ್ಯವಾದ ಸ್ಥಿತಿಯಲ್ಲಿ "ಈ ಬಳಲಿಕೆಯಿಂದ ಮುಕ್ತರಾಗಲು ನಿಮ್ಮ ಅಂತಃಶಕ್ತಿಯನ್ನು ಉಪಯೋಗಿಸಬಾರದೇ?"—ಎಂದು ಪ್ರಶ್ನಿಸಿದರು. ಅದಕ್ಕೆ "ಇಲ್ಲ"ವೆಂಬ ಭಯೋದ್ಪಾದಕ ಉತ್ತರ ಬಂದಿತು. ಸ್ಪಷ್ಟವಾದ ಮಾತಿನಲ್ಲಿ ಹೇಳಿದ ಈ ಉತ್ತರದಿಂದ ಅವರಲ್ಲಿಯ ಆಶೆಗಳೆಲ್ಲ ಉಡುಗಿಹೋದವು. ಖಡ್ಗದ ಕೊರೆತದಂಥ ಮಾತು. ಆದರೂ ಮುಂದೆ ಬಂದು

ಮತ್ತೊಂದು ಪ್ರಶ್ನೆ ಹಾಕಿದ್ದಾಯಿತು. "ಏಕೆ ಉಪಯೋಗಿಸಬಾರದು ? ನಿಮ್ಮ ಶಕ್ತಿಯನ್ನು ಉಪಯೋಗಿಸದಿದ್ದರೆ ನಿಮ್ಮ ಈ ಬಳಲಿಕೆ ಹೇಗೆ ಗುಣವಾದೀತು ?" ಇದಕ್ಕೆ ಸುಮ್ಮನೆ ಉತ್ತರವಿತ್ತರು: "ವಿವರಿಸಿ ಹೇಳಲಾರೆ; ನಿಮಗೆ ಅದರ ಅರ್ಥವೇ ಆಗದು."

ಕೊನೆಗೆ ಈ ಸಂದರ್ಭದಲ್ಲಿ ಅವರ ಮನಸ್ಸಿನಲ್ಲಿಯ ರಹಸ್ಯದ ಕಲ್ಪನೆ ಅಲ್ಲಿದ್ದವರಿಗೆ ತಿಳಿದು ಬಂತು. ಅವರ ಬಳಲಿಕೆ ನಿಧಾನವಾಗಿ ಮೂರು ಪ್ರಾಮುಖ್ಯವಾದ ಮಟ್ಟಗಳಲ್ಲಿ ಬೆಳೆದು ಬಂದಿತ್ತು— "ಸಾವಿತ್ರಿ" ಮಹಾಕಾವ್ಯದ ಮುಕ್ತಾಯ, ದರ್ಶನ ಹಾಗು ಶಾಲೆಯ ವಾರ್ಷಿಕೋತ್ಸವದ ಕೊನೆಗೊಳ್ಳುವಿಕೆ; ಪ್ರತಿಮಟ್ಟದಲ್ಲಿ ಅವರು ಹೆಚ್ಚೆಚ್ಚು ಅಂತರ್ಮುಖರಾದರು. ಶ್ರೀ ಮಾತೆಯವರು ಅಂದಂತೆ "ನಾನು ಈ ಸ್ಥಿತಿಯಲ್ಲಿ ಅವರನ್ನು ಕಂಡಾಗಲೆಲ್ಲ ಶ್ರೀ ಅರವಿಂದರು ಅತಿಮಾನಸ ಪ್ರಕಾಶವನ್ನು ತಮ್ಮಲ್ಲಿ ಎಳೆದು ತುಂಬಿಕೊಳ್ಳುತ್ತಿದ್ದುದನ್ನು ಕಾಣುತ್ತಿದ್ದೆ." ಈ ವ್ಯಾಖ್ಯೆಯಿಂದ ಶ್ರೀ ಅರವಿಂದರು ಯಾವ ಕಾರ್ಯದಲ್ಲಿ ತೊಡಗಿದ್ದರು ಎನ್ನುವದು ಸ್ಪಷ್ಟವಾಗುತ್ತಿದೆ. ಅವರು ತಮ್ಮ ದೃಷ್ಟಿಯನ್ನು, ಏಕಾಗ್ರತೆಯನ್ನು, ತಮ್ಮ ಬಳಲಿಕೆಯ ಪರಿವೆಯಿಲ್ಲದೆ, ತಮಗೆ ಅತಿ ಪ್ರಾಮುಖ್ಯವೆನಿಸಿದ ದಿಶೆಯಲ್ಲಿ ನೆಟ್ಟಿದ್ದರು. ಅವರು ಕೊಟ್ಟ ಉತ್ತರದಿಂದ ಅಸಮಾಧಾನ ಹೊಂದಿದ ಕೆಲ ಸಾಧಕರು ಸೂರ್ಯದೇವನು ಅಸ್ತಂಗತನಾದನಂತರ ಅದರ ಸತ್ಯಾರ್ಥದ ಕಲ್ಪನೆ ಮಾಡಿಕೊಂಡರು.

ಒಂದು ಗಂಟೆಯ ನಂತರ ಶ್ರೀ ಅರವಿಂದರು ಕುರ್ಚಿಯಿಂದೆದ್ದು ತಮ್ಮ ಹಾಸಿಗೆಯ ಕಡೆಗೆ ಬಂದರು. ಜತೆಗೆ ಅವರ ಬಳಲಿಕೆಯೂ ಮರುಕಳಿಸಿ ಬಂದಿತು. ಈ ನಿಶ್ಚಿಂತೆಯ ಒಂದು ಗಂಟೆಯಲ್ಲಿ ಅವರ ಬಳಲಿಕೆ ಅವರನ್ನು ಸಂಪೂರ್ಣ ಆವರಿಸಿದಂತೆ ಕಂಡಿತು. ಮಹಾನಿರ್ಯಾಣದ ಅರ್ಧ ಗಂಟೆ ಮೊದಲು ಅವರು ಸ್ವಲ್ಪ ನೀರು ಕುಡಿದು, ಅಂತಃಕರಣಪೂರಿತ ದೃಷ್ಟಿಯಿಂದ ತಮಗೆ ಸೇವೆ ಸಲ್ಲಿಸಿದವರನ್ನು ನೋಡಿ ಸಮಾಧಿಸ್ಥರಾದರು. ಆವಾಗಲೂ ಕೂಡ,

'ಈ ದಿನವೆ ಕೊನೆಯ ದಿನ ಸತ್ಯವಾನನಿಗೆ'

ಎನ್ನುವದರ ಕಲ್ಪನೆ ಕೂಡ ಯಾರಿಗೂ ಇರಲಿಲ್ಲ.

ಆ ಬೆಳಗಿನ ಜಾವದಲ್ಲಿ ಸುದ್ದಿ ಹರಡಿತು. ಸಾಧಕರ ಮನೋಭಾವನೆಯನ್ನು ವಿವರಿಸುವದಕ್ಕಿಂತ ಕಲ್ಪಿಸುವದೇ ಲೇಸು ಆ ನೀರವತೆಯ ಬ್ರಾಹ್ಮೀ ಮುಹೂರ್ತದಲ್ಲಿ ಎಲ್ಲರೂ ಹಿಂದೆ ಕಾಣದ ದೃಶ್ಯವನ್ನು ನೋಡಲು ದೇವ-ಪುರುಷನ ಸನ್ನಿಧಿಗೆ ನಡೆದು ಬಂದರು. ಅಲ್ಲಿ ಕಂಡದ್ದೇನು ?—ಮರಣವನ್ನಲ್ಲ, ಪುನರುತ್ಥಾನವನ್ನಲ್ಲ, ನಿರ್ವಾಣಶಯನವನ್ನಲ್ಲ, ಸ—ಮಾ—ಧಿ—; ಮರಣವು ದಿವ್ಯಜ್ಯೋತಿ ಹಾಗೂ ದಿವ್ಯಶಕ್ತಿಗಳ ಕೂಡ ಜೀವಕಳೆ ತುಂಬಿ ಸರಸವಾಡುತ್ತಿದೆ. ಈ ರಾಜಾಧಿರಾಜನ ದೇಹಕಾಂತಿಯಲ್ಲಿ ಸಾವು ಅಮರತ್ವವನ್ನು ಪಡೆದಿದೆ. ಜಡಪ್ರಕೃತಿಯ ಒರೆಗಲ್ಲಿನ ಮೇಲೆ ನಿತ್ಯಸತ್ಯವು ತಾಂಡವವಾಡುತ್ತಿದೆ. ಅದು ಜಡದೇಹವಲ್ಲ; ಅರ್ಧ ತೆರೆದ ಸುವರ್ಣಕಲಶದಿಂದ ಹೊರಹೊರಟ ನಿತ್ಯಸತ್ಯವಾಗಿದೆ. ಒಳಗಿವಿಗೆ ಅವರವರ ಹೃದ್‌ಗುಹೆಯಿಂದ ಅಂತರ್ವಾಣಿಯೊಂದು ಕೇಳಬರುತ್ತಿದೆ :

**" ನಾನು ಇಲ್ಲಿಯೇ ಇರುವೆ; ಇಲ್ಲಿಯೇ ಇರುವೆ. "**

ಈ ಜಾಗ್ರತ ಚೇತನೆಯಲ್ಲಿ, ನಮ್ಮ ಗುರುಗಳು ಹಾಕಿಕೊಟ್ಟ ಪಥದಲ್ಲಿ, ನಾವು ಮುಂದುವರಿಯುವೆವು. ಅವರು ತಮ್ಮ ಕೊನೆಯ ಉಸುರಿನ ವರೆಗೆ, ಅದನ್ನು ಸಿದ್ಧಪಡಿಸಿದ್ದಾರಲ್ಲದೆ ಗುರಿ ಮುಟ್ಟುವ ವರೆಗೆ ನಮ್ಮನ್ನು

ಕಾಯುವ ಭರವಸೆಯನ್ನೂ ಕೊಟ್ಟಿದ್ದಾರೆ ಈಗ ಶ್ರೀ ಮಾತೆಯವರೇ ನಮ್ಮ ರಕ್ಷಣೆಯ ದೇವತೆಯಾಗಿದ್ದಾರೆ ಮಹಾನಿರ್ಯಾಣದ ನಂತರ ಒಮ್ಮೆಯಾದರೂ ಆಶ್ರಮಕ್ಕೆ ಬಂದು ಹೋದವರಿಗೆ ಈ ಗುರಿ ಮುಟ್ಟೇ ತೀರುವೆನೆಂಬ ಭರವಸೆಯನ್ನು ಶ್ರೀ ಅರವಿಂದರ ತ್ಯಾಗಭೂಮಿ ಮನಗಾಣಿಸಿಕೊಡದಿರದು. ಅವರ ಸಮಾಧಿಯಿಂದ ಸಹಸ್ರ ನಾಲಗೆಗಳ ಅಗ್ನಿ ಮೇಲೇಳುವಂತೆ ಕಾಣುವದಲ್ಲದೆ ಪ್ರತಿಯೊಬ್ಬರ ಅಂತರಾತ್ಮನಲ್ಲಿ ಅದು ಪ್ರವೇಶಿಸಿ ಪ್ರಜ್ವಲಿಸುತ್ತಿರುವಂತೆ ಅನುಭವ ಬರುತ್ತದೆ. ಶ್ರೀ ಅರವಿಂದರ ಅಸ್ತಿತ್ವವು ಶ್ರೀ ಮಾತೆಯವರ ದೇಹಕಾಂತಿಯಲ್ಲಿ ಸೇರಿ ಸುತ್ತಲಿನ ವಾತಾವರಣದಲ್ಲಿ ಹಬ್ಬಿಹೋದಂತಿದೆ. ಶ್ರೀ ಅರವಿಂದರ ಅಮರ ಸಾನ್ನಿಧ್ಯವನ್ನು ಇಲ್ಲಿ ಕಾಣಬಹುದು; ಅವರ ಪಾದ ಸಪ್ಪಳವನ್ನು ಕೇಳಬಹುದು; ಅವರ ಸ್ವರಸಂಗೀತವನ್ನು ಆಲಿಸಬಹುದು. ಇದೆಲ್ಲವನ್ನೂ ಅವರ ಜಡದೇಹದ ಸ್ಥೂಲದರ್ಶನವಿಲ್ಲದೆ ಅನುಭವಿಸಬಲ್ಲೆವು. ಅವರ ತ್ಯಾಗವೃಕ್ಷವು ಒಂದು ದಿನ ಫಲ ಕೊಟ್ಟೀತು; ಅವರು 'ಸಾವಿತ್ರಿ' ಕಾವ್ಯದಲ್ಲಿ ಹಾಡಿದ್ದು ಸತ್ಯವಾಗಿ ಪರಿಣಮಿಸೀತು. 'ಸಾವಿತ್ರಿ' ಬೇರೆ ಏನಿದೆ? ಗುರು ಶ್ರೀ ಅರವಿಂದರ ಮತ್ತು ಶ್ರೀ ಮಾತೆಯವರ ಆಂತರಿಕ ಜೀವನದ ಅನುಭವಸಾರವಾಗಿದೆ. ಅದರಲ್ಲಿಯ ವಿವರಣೆಯಂತೆ ಪೂರ್ವರಂಗದ ಪ್ರಥಮ ಪ್ರಯೋಗ ಈಗ ಮುಕ್ತಾಯವಾಗಿದೆ. ಮುಂದಿನ ದೃಶ್ಯ ಈಗ ತೆರೆಯ ಮರೆಯಲ್ಲಿ ನಡೆದಿದೆ. ಅದೂ ರೂಪುಗೊಂಡಾಗ, ತೆರೆ ಮೇಲೆದ್ದಾಗ "ಮರಣಕಾಂಡ"ವನ್ನು ಕಂಡೇವು. ಮತ್ತು ನಮ್ಮ ಕಣ್ಣೆದುರು ಮುಕ್ತಾಯದ ಮಂಗಲಸ್ತವನ ರೂಪುಗೊಂಡು ಪ್ರಪಂಚದಲ್ಲೆಲ್ಲ ಹಿಗ್ಗಿನ ವಿಜಯಧ್ವನಿ ಮೊಳಗೀತು:

"ನಾನು ಇಲ್ಲಿಯೇ ಇರುವೆ; ಇಲ್ಲಿಯೇ ಇರುವೆ."

ಅನುವಾದಕರು :

—ಶ್ರೀ. ಹ. ಮ. ಬಬಲೇಶ್ವರ

---

**ಈಶ್ವರನು ನಮ್ಮೊಳಗಿದ್ದಾನೆ,—ಸರ್ವಶಕ್ತ, ಸರ್ವವ್ಯಾಪಿ, ಸರ್ವಜ್ಞ ಸತ್ತೆಯು ಆತನಾಗಿದ್ದಾನೆ. ಆತನ ಹಾಗೂ ನಮ್ಮ ಪ್ರಕೃತಿಯು ಒಂದೇಯಾಗಿದೆ; ಆತನೊಡನೆ ಸಂಪರ್ಕ ಬೆಳೆಯಿಸಿ, ಆತನ ಕೈಯಲ್ಲಿ ನಮ್ಮನ್ನು ಕೊಟ್ಟುಕೊಂಡು ಬಿಟ್ಟರೆ, ಆತ ನಮ್ಮಲ್ಲಿ ತನ್ನ ಸ್ವೀಯಶಕ್ತಿಯನ್ನು ಸುರಿಯುವನು; ಆಗ ನಮಗೂ ನಮ್ಮ ಪಾಲಿನ ದೇವತ್ವವು,—ಸರ್ವಶಕ್ತಿಮತ್ತೆಯು, ಸರ್ವವ್ಯಾಪಿತ್ವವು, ಸರ್ವಜ್ಞತೆಯು ಉಂಟೆಂಬುದು ಅನುಭವಕ್ಕೆ ಬರುವುದು. ದಾರಿ ದೂರವಾಗಿದೆ, ಆದರೆ ಸಮರ್ಪಣವು ಅದನ್ನು ಕಿರಿದುಗೊಳಿಸುವುದು; ದಾರಿ ದುರ್ಗಮವಾಗಿದೆ, ಆದರೆ ಪೂರ್ಣ ವಿಶ್ವಾಸವು ಅದನ್ನು ಸುಲಭಗೊಳಿಸುವುದು.**

**—ಶ್ರೀ ಅರವಿಂದರು**

“ ಶ್ರೀ ಅರವಿಂದರೂ ರಸಶಾಸ್ತ್ರವೂ (೨) ”
(ಪುಟ ೧೧೫) ಲೇಖದಲ್ಲಿಯ

## ಪಾರಿಭಾಷಿಕ ಪದಗಳು

| | |
|---|---|
| ಅವಭಾಸ | = Illumination |
| ಆವಿರ್ಭಾವ | = Revelation |
| ಆಂತರಿಕ ಚೈತನ್ಯ | = Inner Mind |
| ಅಹಂಕಾರಿಕ ಮನ | = Habitual Self |
| ಉತ್ತರ ಚೈತನ್ಯ | = Higher Mind |
| ಐಂದ್ರಿಯ ಅಥವಾ ಬಾಹ್ಯ ಚೇತನೆ | = Outer Consciousness |
| ಚೇತಸ ಚೈತನ್ಯ | = Human mental |
| ಚೈತಸೋತ್ತರ | = Over-head |
| ಜೈವಿಕ ಚೈತನ್ಯ | = Emotional vital |
| ಜ್ಯೋತಿರ್ಮಯ ಚೈತನ್ಯ | = Illumined Mind |
| ದಾರ್ಶನಿಕ ಚೈತನ್ಯ | = Vision-mind |
| ಪರಚೈತನ್ಯ | = Overmind |
| ಪರಾತ್ಪರ ಚೈತನ್ಯ | = Supermind |
| ಪಾರ್ಥಿವಸ್ಮೃತಿ | = Earth-memory |
| ಪ್ರಾಂತರಿಕ ಅಥವಾ ಚಿನ್ಮಯ ಚೈತನ್ಯ ಚಿತ್ | = Psyche |
| ಪ್ರೇರಣೆ | = Intuition |
| ಪ್ರೇರಕ ಚೈತನ್ಯ | = Intuitive Mind |
| ಭೌತಿಕ ಚೈತನ್ಯ | = Physical Mind |
| ಸನಾತನ ಲೋಕ | = Eternal plane |